# ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ

(ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್‌ಡಿ. ಪದವಿಗಾಗಿ ಸಲ್ಲಿಸಿದ ನಿಬಂಧ

ಸಂಶೋಧಕರು

ಎ. ವೆಂಕಟೇಶ

ಸಹಾಯಕ ಕುಲಸಚಿವರು

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಮಾರ್ಗದರ್ಶಕರು

ಡಾ. ಎಂ. ಉಷಾ

ಅಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ

(ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ)

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ನಿಬಂಧ


ಸಂಶೋಧಕರು

**ಎ.ವೆಂಕಟೇಶ**

ಸಹಾಯಕ ಕುಲಸಚಿವರು

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಮಾರ್ಗದರ್ಶಕರು

**ಡಾ. ಎಂ.ಉಷಾ**

ಅಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬





ಭಾಷಾ ನಿಕಾಯ

**ಮಹಿಳಾ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಪ್ರಮಾಣ ಪತ್ರ

ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ (ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ) ಎಂಬ ಶೀರ್ಷಿಕೆಯ ನಿಬಂಧವನ್ನು ಡಾ. ಎಂ.ಉಷಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೮ ಏಪ್ರಿಲ್ ೨೦೦೩
ಸ್ಥಳ : ವಿದ್ಯಾರಣ್ಯ

(ಎ. ವೆಂಕಟೇಶ್)
ಸಂಶೋಧಕರು
ಸಹಾಯಕ ಕುಲಸಚಿವರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ದೃಢೀಕರಣ ಪತ್ರ

ಶ್ರೀ ಎ.ವೆಂಕಟೇಶ ಇವರು **ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ (ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ)** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ** : ೨೮ ಏಪ್ರಿಲ್ ೨೦೦೩
**ಸ್ಥಳ** : ವಿದ್ಯಾರಣ್ಯ


**(ಡಾ. ಎಂ.ಉಷಾ)**
ಮಾರ್ಗದರ್ಶಕರು ಹಾಗೂ ಅಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಕೃತಜ್ಞತೆಗಳು


ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ, ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ವಿಶ್ರಾಂತ ಕುಲಪತಿಗಳಾದ ಡಾ. ಎಂ.ಎಂ. ಕಲಬುರ್ಗಿ, ಪ್ರಸ್ತುತ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರಿಗೆ ಮತ್ತು ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ,

ಈ ಪ್ರಬಂಧ ರೂಪುಗೊಳ್ಳಲು ನನಗೆ ಸಹಾಯ ಸಹಕಾರಗಳೊಂದಿಗೆ ಮಾರ್ಗದರ್ಶನ ಮಾಡಿದ ಮಹಿಳಾ ಅಧ್ಯಯನ ವಿಭಾಗದ ಅಧ್ಯಾಪಕರಾದ ಡಾ. ಎಂ.ಉಷಾ ಅವರಿಗೆ, ಎಲ್ಲಾ ರೀತಿಯ ನೆರವು ನೀಡಿ ಸಹಕರಿಸಿದ ವಿಭಾಗದ ಮುಖ್ಯಸ್ಥರಾದ ಡಾ. ಎಚ್.ಎಸ್.ಶ್ರೀಮತಿ ಅವರಿಗೆ,

ಅಧ್ಯಯನಕ್ಕೆ ಸಹಕರಿಸಿದ ಪ್ರೊ. ಲಕ್ಷ್ಮಣ್ ತೆಲಗಾವಿ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಹಿ.ಚಿ.ಬೋರಲಿಂಗಯ್ಯ, ಡಾ. ಕರೀಗೌಡ ಬೀಚನಹಳ್ಳಿ, ಪ್ರೊ. ಹನುಮಣ್ಣನಾಯಕ ದೊರೆ, ಡಾ. ಕೆ.ಎಂ.ಸುರೇಶ್, ಪ್ರೊ. ಎ.ವಿ.ನಾವಡ ಅವರಿಗೆ,

ಪ್ರೋತ್ಸಾಹಿಸಿದ ಬಾಲಸುಬ್ರಮಣ್ಯ, ಡಾ. ಮಂಜುನಾಥ ಬೇವಿನಕಟ್ಟಿ, ಡಾ. ಕೆ.ಕೇಶವನ್ ಪ್ರಸಾದ್, ಡಾ. ಸ.ಚಿ.ರಮೇಶ್, ಡಾ. ಚಿನ್ನಸ್ವಾಮಿ ಸೋಸಲೆ, ಡಾ. ಎಸ್.ಡಿ. ಹರಿಶ್ಚಂದ್ರ, ಎಸ್. ಪ್ರಭಾಕರ್, ಕೆ.ಎಲ್.ರಾಜಶೇಖರ್, ಶ್ರೀಧರ್, ಸಿದ್ಧಗಂಗಮ್ಮ, ವಿ.ಸೀ.ಮಾರುತಿ, ಜಾಜಿ ದೇವೇಂದ್ರಪ್ಪ, ಕೆ.ಮಹೇಶ್, ಕೆ.ಆರ್.ಜೆ. ರಾಜಕುಮಾರ್, ಡಾ. ಗೋವಿಂದ, ಡಾ. ಉಮೇಶ್, ಡಾ. ಆರ್.ಬಿ. ಕುಮಾರ್, ಯರ್ರಿಸ್ವಾಮಿ, ಕೆ. ಸಿದ್ಧಪ್ಪ ಅವರಿಗೆ,

ಪೂರಕ ಗ್ರಂಥ ಹಾಗೂ ಮಾಹಿತಿಗಳನ್ನು ಒದಗಿಸಿ ಸಹಕರಿಸಿದ ಗ್ರಂಥಾಲಯ ಸಿಬ್ಬಂದಿ, ಬಳ್ಳಾರಿ ಜಿಲ್ಲೆಯಲ್ಲಿನ ಎಲ್ಲ ಪಂಚಾಯತ್ ಕಾರ್ಯಾಲಯ, ನಗರಸಭೆ, ತಾಲೂಕು ಕಚೇರಿಗಳ ಸಿಬ್ಬಂದಿ ಅವರಿಗೆ,

ಈಟಿ ನಾಗರಾಜ, ಡಿ.ವಿ.ಪ್ರಕಾಶ್, ಮಹೇಶ್ ಉಣಕಲ್, ಗೀತಾ, ಗ್ಯಾನಪ್ಪ, ಶಿವಕುಮಾರ, ಈರಪ್ಪ, ಹನುಮಪ್ಪ ಮಗಡರ್, ಗಂಡಿ ಬೋರಯ್ಯ, ನಾಗರಾಜ ಬಡಿಗೇರ, ನಾರಾಯಣ ನಾಯಕ್, ನಧಾಫ್ ಯಳವತ್ತಿ, ಅನ್ನಪೂರ್ಣ, ಗಂಗಾಧರ, ಮಲ್ಲೇಶಿ ಈ ಸಹೋದ್ಯೋಗಿ ಮಿತ್ರರು ಅತ್ಯಂತ ಪ್ರೀತಿಯಿಂದ ಸಹಕರಿಸಿದ್ದಾರೆ.

ಮಿತ್ರರಾದ ಕೆ.ಪಿ.ಉಮಾಪತಿ, ಕೆ.ನಾಗೇಂದ್ರ, ಚಂದ್ರು, ರಾಮಚಂದ್ರ, ಹನುಮಂತ, ಡಿ.ಗೋವಿಂದ, ವೇಣುಗೋಪಾಲ್, ನರೇಂದ್ರ ಅವರಿಗೆ,

ಸದಾ ಪ್ರೀತಿ ವಾತ್ಸಲ್ಯದಿಂದ ಪ್ರೋತ್ಸಾಹ ನೀಡುತ್ತಿರುವ ನನ್ನ ಪೂಜ್ಯ ತಂದೆ ಸಣ್ಣ ಮಾರೆಣ್ಣ, ತಾಯಿ ಶೇಕಮ್ಮ, ಪತ್ನಿ ಚಂದ್ರಮತಿ, ಮಕ್ಕಳಾದ ಕಾರ್ತಿಕ, ಭಾರತಿ, ಮೇಘನಾ, ಸಹೋದರಿ ಭುವನೇಶ್ವರಿ, ಪಾರ್ವತಿ, ಪದ್ಮಾವತಿ, ಸರೋಜಮ್ಮ, ದಿವಂಗತ ದೊಡ್ಡಪ್ಪ ಮತ್ತು ದೊಡ್ಡಮ್ಮರಿಗೆ,

ಅಧ್ಯಯನದ ಅವಧಿಯಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಕಾರ ನೀಡಿದ ಎಲ್ಲರಿಗೂ ಹಾಗೂ ಈ ಪ್ರಬಂಧವನ್ನು ಅಂದವಾಗಿ ಸಂಯೋಜಿಸಿಕೊಟ್ಟ ರಚನಾ ಗ್ರಾಫಿಕ್ಸ್, ಹೊಸಪೇಟೆಯ ಶ್ರೀ ಸೋಮನಾಥ ಕುಡಿತಿನಿ ಅವರಿಗೆ,

ತುಂಬು ಹೃದಯದ ಕೃತಜ್ಞತೆಗಳು

**ಎ. ವೆಂಕಟೇಶ**

# ಪರಿವಿಡಿ

# ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

ರಾಜಕೀಯ - ರಾಜಕಾರಣ ಎಂಬುದು ನಾಗರೀಕ ಸಮಾಜವು ರೂಪಿಸಿಕೊಂಡಿರುವ ಅತಿಮುಖ್ಯವೂ, ಅನಿವಾರ್ಯವೂ ಆದ ಸಾಮಾಜಿಕ ಸಂಸ್ಥೆಯಾಗಿದೆ. ಈ ಸಮಾಜದಲ್ಲಿರುವ ಎಲ್ಲರೂ ಲಿಂಗಭೇದವೆಣಿಸದೆ ರಾಜಕೀಯವಾಗಿ ಪರಿಜ್ಞಾನವುಳ್ಳವರಾಗಿದ್ದಾಗಲೇ ಅಲ್ಲಿ ಅಭಿವೃದ್ಧಿ ಸಾಧ್ಯ. ಇದರಿಂದ ಜನರು ತಮ್ಮ ಹಕ್ಕು ಬಾಧ್ಯತೆಯನ್ನು ಸರಿಯಾಗಿ ಅನುಭವಿಸಲು ಸಹಕಾರಿಯಾಗುತ್ತದೆ/ ಸ್ತ್ರೀ-ಪುರುಷರಿಬ್ಬರೂ ಒಂದು ದೇಶದ ಅಭಿವೃದ್ಧಿಯ ಅವಿಭಾಜ್ಯ ಅಂಗಗಳಾಗಿದ್ದು, ಅಧಿಕಾರ ನೀಡುವಲ್ಲಿನ ಅಸಮತೋಲನದಿಂದಾಗಿ ಅಭಿವೃದ್ಧಿ ಸಾಧಿಸುವಲ್ಲಿ ಎಡವಿದೆ. ಹೀಗಾಗಲು ಕಾರಣ ಪುರುಷನು ಎಲ್ಲ ಅಧಿಕಾರ ಕೇಂದ್ರಗಳ ಮೇಲೆ ಸಂಪೂರ್ಣವಾದ ಹಿಡಿತವನ್ನು ಹೊಂದುವ ಮೂಲಕ ಪುರುಷನು ಸಮಾಜದ ಎಲ್ಲ ಹಂತಗಳಲ್ಲಿ ತನ್ನ ಪರವಾದ ನಿರ್ಧಾರಗಳನ್ನು ರೂಪಿಸಿಕೊಳ್ಳಲು ಮುಂದಾಗಿರುವುದು, ಮಾನವನು ಕಾರ್ಯಗತಗೊಳಿಸಿಕೊಳ್ಳಲು ನಾಗರೀಕತೆ ಚರಿತ್ರೆಯುದ್ದಕ್ಕೂ ಯತ್ನಿಸಿದ್ದಾನೆ. ಜಗತ್ತಿನ ಯಾವುದೇ ದೇಶವನ್ನಾದರೂ ಇದಕ್ಕೆ ಉದಾಹರಣೆಯಾಗಿ ಗುರುತಿಸುವುದು ಭಾರತವೂ ಇದಕ್ಕೆ ಹೊರತಾಗಿಲ್ಲ. ದೇಶಕ್ಕೆ ಸ್ವಾತಂತ್ರ್ಯ ಬಂದ ೫೦ ವರ್ಷಗಳ ಉದ್ದಕ್ಕೂ ಭಾರತೀಯ ಸ್ತ್ರೀಯ ಸ್ಥಾನಮಾನಗಳು ಕೆಲವು ಕ್ಷೇತ್ರಗಳಲ್ಲಿ ಸುಧಾರಿಸುತ್ತಿವೆಯಾದರೂ ಅವಳಿನ್ನೂ ರಾಜಕೀಯವಾಗಿ ಅತ್ಯಂತ ನಿರ್ಲಕ್ಷ್ಯಕ್ಕೊಳಗಾಗಿದ್ದಾಳೆ. ಹಾಗಾಗಿ ಒಂದು ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸುವುದು ನಿಜವಾದ ಅರ್ಥದಲ್ಲಿ ಅಧಿಕಾರ ಕೇಂದ್ರಿತವಾದ ರಾಜಕೀಯ ಕ್ಷೇತ್ರದ ಮೇಲಿನ ಹಿಡಿತದಿಂದಲೇ ಸಾಧಿತವಾಗುವುದಾಗಿದೆ. ಇದನ್ನರಿತೇ ಮಹಿಳಾ ಚಳುವಳಿ ಹಾಗೂ ಚಿಂತನೆಗಳು ತಮ್ಮ ಆರಂಭಿಕ ದಿನಗಳಿಂದಲೂ ಮಹಿಳೆಯರ ರಾಜಕೀಯ ಹಕ್ಕಿನ ಬಗ್ಗೆ ವಿಶೇಷ ಗಮನವನ್ನು ಹೊಂದಿವೆ.

ಹೀಗೆ ಅಧಿಕಾರ ರಾಜಕಾರಣದಿಂದ ವಂಚಿತರಾದ ಮಹಿಳೆಯರ ಕುರಿತು ಹಲವು ಅಧ್ಯಯನಗಳು ನಡೆದಿವೆ. ಈ ಎಲ್ಲಾ ಅಧ್ಯಯನಗಳು ಮಹಿಳಾ ರಾಜಕಾರಣ ಕುರಿತು ಕೆಳಗಿನ ತಾತ್ವಿಕ ಪ್ರಶ್ನೆಗಳನ್ನು ಮುಂದಿಟ್ಟುಕೊಂಡದ್ದಾಗಿದೆ.

೧. ಅಧಿಕಾರವು ಪುರುಷನಲ್ಲಿ ಕೇಂದ್ರಿಕೃತವಾದ ಬಗೆ ಯಾವುದು? ಪಿತೃಪ್ರಧಾನ ಸಮಾಜದ ನಿರ್ಮಾಣ ಹೇಗಾಯಿತು?

ಗಂಡು ಹೆಣ್ಣುಗಳ ನಡುವಿನ ಜೈವಿಕ ಭಿನ್ನತೆಯನ್ನು ಲಿಂಗ ಪೂರ್ವಗ್ರಹ ನೆಲೆಯಲ್ಲಿ ಭಾವಿಸುತ್ತ ಲಿಂಗ ತಾರತಮ್ಯವನ್ನು ನೆಲೆಗೊಳಿಸಲಾಯಿತು. ಜೈವಿಕ ವ್ಯತ್ಯಾಸವನ್ನು ಸಾಮರ್ಥ್ಯದ ವ್ಯತ್ಯಾಸವಾಗಿ ನಿರೂಪಿಸಿ ಹೆಣ್ಣನ್ನು ಕುಟುಂಬ ಕೇಂದ್ರತವಾಗಿಸಲಾಯಿತು.

ನಾಗರಿಕತೆಯ ಆರಂಭದಿಂದಲೂ ಅಧಿಕಾರ ರಾಜಕಾರಣವು ಪುರುಷ ಕೇಂದ್ರಿಕೃತವಾಗಿರುವುದು ಚಾರಿತ್ರಿಕ ಸತ್ಯವಾಗಿದೆ. ಸಾಮಾಜಿಕ ಕಟ್ಟುಪಾಡುಗಳು, ಆಚರಣೆಗಳು, ಸಂಪ್ರದಾಯಗಳು ಪುರುಷರಲ್ಲಿಯೇ ಹೆಚ್ಚು ಅಧಿಕಾರ ಕೇಂದ್ರಿಕೃತವಾಗಿರುವಂತೆ ಜತನವಾಗಿಟ್ಟವು. ಆಗ ಸೃಷ್ಟಿಸಲ್ಪಟ್ಟ ಧರ್ಮಗ್ರಂಥಗಳು, ಶಾಸ್ತ್ರಗಳು, ವಿಚಾರಗಳು ಕೂಡ ಸ್ತ್ರೀಯನ್ನು ಅಪ್ರಧಾನವಾಗಿರಿಸುತ್ತಾ ಪುರುಷರನ್ನು ಯಜಮಾನನನ್ನಾಗಿಸಿ, ಪ್ರಧಾನವಾಗಿಸುವತ್ತ ಹೆಚ್ಚು ಕಾಳಜಿ ತೋರಿವೆ. ಹೀಗಾಗಿ ಭಾರತೀಯ ಸಮಾಜ ಪುರುಷ ಪ್ರಧಾನ ಅಥವಾ ಪಿತೃಪ್ರಧಾನ ಸಮಾಜವಾಗಿ ಪರಿಪೂರ್ಣವಾಗಲು ಸಾಧ್ಯವಾಯಿತು. ಕುಟುಂಬದ ಹಾಗೂ ಹೊರಗಿನ ಎಲ್ಲ ಚಟುವಟಿಕೆಗಳು ಪುರುಷನ ನಿಯಂತ್ರಣಕ್ಕೊಳಪಟ್ಟವು. ಸಾರ್ವಜನಿಕ ಕ್ಷೇತ್ರವು ಪುರುಷನಿಗಾಗಿ ಮೀಸಲು ಹಾಗೂ ಅವನೊಬ್ಬನಿಗೆ ಇಲ್ಲಿ ಉಳಿಗಾಲವಿರುವುದು. ಸ್ತ್ರೀಯು ಯಾವುದೇ ಕಾರಣಕ್ಕೂ ಅಧಿಕಾರ ರಾಜಕಾರಣದಂತಹ ವಿಚಾರಗಳಲ್ಲಿ ಅರ್ಹಳಾಗಲಾರಳೆಂದೇ ಭಾವಿಸಲಾಗಿತ್ತು. ಅಧಿಕಾರ ಹಂಚಿಕೆಯಲ್ಲಾಗಲಿ, ರಾಜಕಾರಣದಲ್ಲಿನ ಪ್ರವೇಶಕ್ಕಾಗಲಿ, ಸಾರ್ವಜನಿಕ ಕ್ಷೇತ್ರಗಳಾಗಲಿ ಸ್ತ್ರೀಗೆ ಮುಕ್ತ ಅವಕಾಶ ನೀಡುವಂತಹ ಯಾವ ಲಕ್ಷಣಗಳು ಕಾಣದಾಗಿದ್ದವು. ಎಲ್ಲ ಬಗೆಯ ನೀತಿ ನಿರ್ಧಾರಗಳ ರೂಪಿಕೆ ಅಥವಾ ನಿರ್ಣಯಗಳು ಪುರುಷ ಕೇಂದ್ರಿತವಾಗಿದ್ದು ಸ್ತ್ರೀಯನ್ನು ಅಲಕ್ಷಿಸಿದ್ದವು. ಅವಳ ದೌರ್ಬಲ್ಯಗಳನ್ನು ಗುರುತಿಸುತ್ತಲೇ ಅಧಿಕಾರ ಹಂಚಿಕೆಯ ಅವಕಾಶಗಳನ್ನು, ರಾಜಕೀಯ ಹಕ್ಕುಗಳನ್ನು, ಸ್ವಯಂ ನಿರ್ಧಾರಕ ಶಕ್ತಿಗಳನ್ನು ನಿರಾಕರಿಸುವ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾ ಬಂದಿರುವುದನ್ನು ಈ ಹೊತ್ತಿಗೂ ಗಮನಿಸಬಹುದಾಗಿದೆ.

೨. ಪಿತೃಪ್ರಧಾನ ಸಮಾಜದಲ್ಲಿನ ಕೇಂದ್ರಿಕೃತ ಅಧಿಕಾರವನ್ನು, ಲಿಂಗಸಮಾನತೆಯ ನೆಲೆಯಲ್ಲಿ ವಿಕೇಂದ್ರಿಕರಣಗೊಳಿಸುವುದು ಹೇಗೆ?

ಈ ಬಗ್ಗೆ ಸ್ತ್ರೀವಾದಿಗಳು ಹಾಗೂ ಮಹಿಳಾ ಸಂಘಟನೆಗಳು ಹೋರಾಟಗಳ ಮೂಲಕ ಹೆಚ್ಚು ಕಾಳಜಿ ಪೂರ್ವಕವಾಗಿ ಚಿಂತನೆಯನ್ನು ನಡೆಸುತ್ತಲೇ ಬಂದಿವೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯೇ

ಚಿಗುರೊಡೆದ ಮಹಿಳೆಯ ರಾಜಕಾರಣದ ಹಕ್ಕಿನ ಪ್ರಶ್ನೆಯನ್ನು ಕೂಡ ದೇಶ ವಿಮೋಚನೆಯ ಭಾಗವಾಗಿಯೇ ನೋಡಲಾಗಿತ್ತೇ ವಿನಃ ಲಿಂಗ ಅಸಮಾನತೆಯ ಕೂಗು ಎಂಬುದಾಗಿ ಗುರುತಿಸಲಿಲ್ಲ. ಆನಂತರದಲ್ಲಿಯಷ್ಟೇ ಲಿಂಗಾಧಾರಿತ ತಾರತಮ್ಯದ ಕುರಿತು ವಿರೋಧಗಳು, ಹೋರಾಟಗಳು ದೇಶವ್ಯಾಪಿ ಜರುಗಿದವು. ಅದರಲ್ಲೂ ೧೯೭೦ರ ದಶಕದಿಂದೀಚೆಗೆ ಲಿಂಗ ಸಮಾನತೆಯ ತಾತ್ವಿಕ ನೆಲೆಗಟ್ಟನ್ನು, ವೈಚಾರಿಕ ಅಡಿಪಾಯವನ್ನು ಸ್ತ್ರೀವಾದಿಗಳು ಒದಗಿಸಿಕೊಟ್ಟರು. ಜೊತೆಗೆ ಎಡಪಂಥೀಯ ಸಂಘಟನೆಗಳ ನಿಲುವು ಸಹಕಾರಗಳಿಂದ ಮಹಿಳಾ ಹೋರಾಟಗಳು ಚುರುಕಾದವು. ಆ ತಳಹದಿಯ ಮೇಲೆ ನಡೆದ ಅನೇಕ ಹೋರಾಟಗಳು, ಚಳುವಳಿಗಳು, ಸಾಫಲ್ಯವನ್ನು ಕಂಡುಕೊಂಡವು. ತತ್ಫಲವಾಗಿ ಮಹಿಳಾ ರಾಜಕೀಯ ಪ್ರಾತಿನಿಧ್ಯದ ಧ್ವನಿ ಹೆಚ್ಚು ಚಿಂತನೆಗೆ ಸಾಧ್ಯವಾಗಿಸಿತು. ಭಾರತದ ಸಂದರ್ಭದಲ್ಲಿ ರಾಜಕಾರಣ ಅಧಿಕಾರ ಕೇಂದ್ರವು ಲಿಂಗಪ್ರಜ್ಞೆಯನ್ನು ಕೇಂದ್ರವಾಗುಳ್ಳ ಜಾತಿ ಏಜೆನ್ಸಿಯನ್ನು ರೂಪಿಸಲಾಗುತ್ತಿಲ್ಲ ಎನ್ನುವುದನ್ನು ಕಾಣುತ್ತೇವೆ. ಏಜೆನ್ಸಿಯಂತೆ ಲಿಂಗಾಧಾರಿತ ಅಂಶವು ರಾಜಕಾರಣವನ್ನು ಮಾಡಲು ಸಾಧ್ಯವಾಗಿಲ್ಲ. ಹೀಗಾಗಿ ಕೇಂದ್ರಿಕೃತ ಅಧಿಕಾರವು ಲಿಂಗಸಮಾನತೆಯ ನೆಲೆಯಲ್ಲಿ ವಿಕೇಂದ್ರಿಕರಣಗೊಳಿಸುವ ಪ್ರಯತ್ನವಾಗಿ ಕೆಳಸ್ತರದ ರಾಜಕೀಯದಲ್ಲಿ ಮಹಿಳೆಯರಿಗೆ ಪ್ರವೇಶ ದೊರಕಿಸುವುದರ ಜೊತೆಗೆ ಅಧಿಕಾರದ ಹಂಚಿಕೆಯನ್ನು, ಪಾಲುಗಾರಿಕೆಯನ್ನು ನೀಡಲು ಸರ್ಕಾರಗಳು ಮುಂದಾಗಿವೆ. ಇದನ್ನು ಮೀಸಲಾತಿಯಡಿ ಕಲ್ಪಿಸಲಾಗುತ್ತಿದೆ. ಈ ಹೊತ್ತಿಗೂ ಮಹಿಳೆಯರು ರಾಷ್ಟ್ರಮಟ್ಟದಲ್ಲಿನ ರಾಜಕಾರಣ ಪ್ರವೇಶ ಹಾಗೂ ಅಧಿಕಾರ ಪಾಲುದಾರರಾಗಲು ನಡೆಸುತ್ತಿರುವ ಹೋರಾಟಗಳು ಒಮ್ಮತದ ಅಭಿಪ್ರಾಯವಿಲ್ಲದೇ ಸೋತಿರುವ ಅದರ ಹಿಂದಿನ ಹುನ್ನಾರಗಳನ್ನು ಗಮನಿಸಬೇಕಾಗಿದೆ. ಈಗಿನ ಗ್ರಾಮೀಣ ಪಂಚಾಯತ್ ಮತ್ತು ನಗರ / ಪಟ್ಟಣಗಳ ಪಾಲಿಕೆಗಳಿಗೆ ಸೀಮಿತಗೊಂಡು ಕಲ್ಪಿಸಲಾಗಿರುವ ಮೀಸಲಾತಿಯು ಮಹಿಳಾ ರಾಜಕಾರಣ ಆಮೆ ನಡಿಗೆಯನ್ನು ಸೂಚಿಸುತ್ತದೆ. ಸಂವಿಧಾನದ ೧೯೯೨ರ ೭೩ ಮತ್ತು ೭೪ನೇ ತಿದ್ದುಪಡಿಗಳಿಂದಾಗಿ ಸ್ಥಳೀಯ ಸಂಸ್ಥೆಗಳಾದ ಗ್ರಾಮಪಂಚಾಯತ್ ಮತ್ತು ನಗರಪಾಲಿಕೆಗಳು ಸಂವಿಧಾನಿಕ ಸ್ಥಾನಮಾನಗಳನ್ನು ಅನುಕ್ರಮವಾಗಿ ಪಡೆದವು. ಈ ಸಂಸ್ಥೆಗಳಲ್ಲಿ ಮಹಿಳಾ ಮೀಸಲಾತಿ ಕಡ್ಡಾಯವಾಗಿರುವಂತೆ ಅಧಿಕಾರದ ಕೇಂದ್ರಿಕರಣವನ್ನು ವಿಕೇಂದ್ರಿಕರಣಗೊಳಿಸಲಾಯಿತು. ಇದೇ ರೀತಿ ರಾಷ್ಟ್ರ ಮತ್ತು ರಾಜ್ಯ ರಾಜಕಾರಣಗಳಲ್ಲಿ ಪಾಲುಗಾರಿಕೆಗಾಗಿ ಮಹಿಳೆ ಒತ್ತಾಯಿಸುತ್ತಿದ್ದರೂ ಇನ್ನೂ ಸಾಫಲ್ಯವನ್ನು ಕಾಣಲಾಗಿಲ್ಲ.

೩. ಪ್ರಸ್ತುತ ಸಂದರ್ಭದಲ್ಲಿ ಕಲ್ಪಿಸಲಾಗುತ್ತಿರುವ ಮಹಿಳಾ ರಾಜಕಾರಣದ ಅವಕಾಶಗಳು ಲಿಂಗಸಮಾನತೆಯ ಸಾಮಾಜಿಕ ಚಲನೆಯನ್ನು ಸಶಕ್ತಗೊಳಿಸುವುದೇ?

ಇಂದು ಮಹಿಳೆ ಹೆಚ್ಚು ಹೆಚ್ಚು ಶಿಕ್ಷಿತಳಾಗುತ್ತಿದ್ದಾಳೆ. ಹಿಂದೆ ಶಿಕ್ಷಣ, ಕ್ರೀಡೆ ಇನ್ನಿತರ ಕ್ಷೇತ್ರಗಳಲ್ಲಿ ಪುರುಷನದೇ ಮೇಲುಗೈಯಿತ್ತು. ಆದರೆ ಇಂದಿನ ಮಹಿಳೆ ಈ ಎಲ್ಲಾ ಕ್ಷೇತ್ರಗಳಲ್ಲಿ ಪುರುಷನಿಗೆ ಸಮಾನವಾಗಿ ಸಾಧನೆಯನ್ನು ತೋರುತ್ತಿದ್ದಾಳೆ. ಪುರುಷನಿಗಿಂತ ನಾವೇನು ಕಡಿಮೆಯಲ್ಲ, ಮನೆಯೊಳಗೂ, ಸಮಾಜದೊಳಗೂ ಪುರುಷನಷ್ಟೇ ಸಮರ್ಥವಾಗಿ ಕೆಲಸಗಳನ್ನು ಮಾಡಬಲ್ಲವಳಾಗಿದ್ದಾಳೆ. ಹಿಂದೆ ಕೃಷಿಯಲ್ಲಿ ಮಹಿಳೆ ಪುರುಷನಿಗಿಂತ

ಹೆಚ್ಚಿನ ಕೆಲಸಗಳ ಜೊತೆಗೆ ಮನೆಯೊಳಗೆ ಕುಟುಂಬದ ನಿರ್ವಹಣೆಯನ್ನೂ ಮಾಡುತ್ತಿದ್ದಳು. ಆದರೆ ಅಂದು ಸ್ತ್ರೀಯನ್ನು ತನ್ನ ಆಸಕ್ತಿಗನುಗುಣವಾಗಿ ಬಂಧಿಸಲು ಪುರುಷ ಪ್ರಯತ್ನಿಸಿದ. ಅವಳಿಗೆ ಒಂದು ಚೌಕಟ್ಟನ್ನು ಹಾಕಿದ ಅದನ್ನು ದಾಟಿ ಅವಳು ಕೆಲಸವನ್ನು ಮಾಡುವಂತಿರಲಿಲ್ಲ. ಆದರೆ ಕಾಲ ಸರಿದಂತೆ ಸ್ತ್ರೀ ಶಿಕ್ಷಿತಳಾಗುತ್ತಾ ಸಾಗಿದ್ದಾಳೆ. ಕೃಷಿಯೇತರ ಚಟುವಟಿಕೆಗಳಲ್ಲೂ ಸ್ತ್ರೀ ಪುರುಷನಿಗೆ ಸಮಾನವಾಗಿ ದುಡಿಯಲು ಹವಣಿಸುತ್ತಿದ್ದಾಳೆ.

ಮತದಾನದ ಹಕ್ಕು ಸ್ತ್ರೀ - ಪುರುಷರಿಗಿಬ್ಬರಿಗೂ ಸಮನಾಗಿದ್ದರೂ ಅದರ ಅಧಿಕಾರದ ಉಪಯೋಗ ಪಡೆಯುವಲ್ಲಿ ಪುರುಷನಿಗೆ ಮಾತ್ರ ಹೆಚ್ಚಿನ ಪಾಲುಗಾರಿಕೆ ಇದೆ. ರಾಷ್ಟ್ರ, ರಾಜ್ಯಮಟ್ಟದ ರಾಜಕಾರಣದಲ್ಲಿ ಸ್ತ್ರೀಯರಿಗೆ ಎಲ್ಲೋ ಒಂದುಕಡೆ ಅವಕಾಶಗಳಿದ್ದವು. ಆದರೆ ಗ್ರಾಮ ಮಟ್ಟದ ರಾಜಕಾರಣದಲ್ಲಿ ಸ್ತ್ರೀಗೆ ಅವಕಾಶಗಳನ್ನು ಕಲ್ಪಿಸಲಾಗಿರಲಿಲ್ಲವೆಂದು ಆದರೆ ಸಂವಿಧಾನದ ೧೯೯೨ರ ೭೩ ಮತ್ತು ೭೪ನೇ ತಿದ್ದುಪಡಿ ಗಳಿಂದಾಗಿ ಸ್ಥಳೀಯ ಸಂಸ್ಥೆಗಳಾದ ಗ್ರಾಮಪಂಚಾಯತ್ ಮತ್ತು ನಗರ ಪಾಲಿಕೆಗಳಿಗೆ ಸಾಂವಿಧಾನಿಕ ಸ್ಥಾನಮಾನಗಳನ್ನು ನೀಡುತ್ತಲೇ ಇಲ್ಲಿ ಮಹಿಳಾ ಮೀಸಲಾತಿಯನ್ನು ಕಡ್ಡಾಯವಾಗಿಸಿ ಪುರುಷ ಕೇಂದ್ರಿಕೃತವಾದ ಅಧಿಕಾರವನ್ನು ಸ್ತ್ರೀಯರಿಗೂ ವಿಸ್ತರಿಸಲಾಯಿತು.

೧೯೯೨ರ ನಂತರ ಗ್ರಾಮೀಣ ಮಟ್ಟಕ್ಕೂ ವಿಸ್ತರಿಸಿದ ಮಹಿಳಾ ಮೀಸಲಾತಿಯನ್ನು ರಾಜ್ಯದೆಲ್ಲೆಡೆ ಹೆಚ್ಚು ಬಳಸಿಕೊಂಡಿದ್ದಾರೆನ್ನಬಹುದು. ಪ್ರತೀ ಗ್ರಾಮ ಪಂಚಾಯತಿಗಳಲ್ಲಿ ಮಹಿಳೆಯರು ಸದಸ್ಯೆ ಹಾಗೂ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದಾರೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯಲ್ಲಿನ ಗ್ರಾಮ ಪಂಚಾಯತಿಗಳನ್ನು ನೋಡಿದಾಗ ಶೇಕಡ ೩೩ಕ್ಕೂ ಹೆಚ್ಚು ಮಹಿಳೆಯರು ಈ ಅಧಿಕಾರದ ಸದುಪಯೋಗವನ್ನು ಪಡೆದುಕೊಂಡಿದ್ದಾರೆ. ಎಲ್ಲರಿಗೂ ಅಧಿಕಾರದ ಸಮಾನ ಅವಕಾಶ ಸಿಗಲಿ ಎನ್ನುವ ಉದ್ದೇಶದಿಂದ ಪ್ರತಿ ಹದಿನೆಂಟು ತಿಂಗಳಿಗೊಮ್ಮೆ ಅಧ್ಯಕ್ಷ ಗಾದಿಯನ್ನು ಬದಲಾಯಿಸುವ ಪ್ರಕ್ರಿಯೆಯೂ ಸಹ ಆ ಉದ್ದೇಶದ ಭಾಗವಾಗಿದೆ. ಈ ನಿಯಮದಿಂದ ಮಹಿಳೆಯರೂ ಸಹ ರಾಜಕಾರಣದ ಅನುಭವವನ್ನು ಪಡೆದುಕೊಳ್ಳಲು ಸಹಕಾರಿಯಾಗಿದೆ. ಪುರುಷನೇ ಪ್ರಬಲಸ್ಥಾನಗಳನ್ನು ಪಡೆದುಕೊಳ್ಳುತ್ತಿರುವ ಇಂತಹ ಸಂದರ್ಭಗಳಲ್ಲಿ ಮಹಿಳೆಯರಿಗೂ ಪುರುಷನಿಗೆ ಸಮಾನವಾದ ಅವಕಾಶವನ್ನು ಕಲ್ಪಿಸಿ ಕೊಟ್ಟಿದ್ದಾರೆ. ಈ ನೀತಿಯಿಂದ ಗ್ರಾಮ ರಾಜಕಾರಣದಲ್ಲೂ ಸಹ ಲಿಂಗಸಮಾನತೆಯನ್ನು ನೀಡಿರುವುದು ಉತ್ತಮ ಬೆಳವಣಿಗೆಯಾಗಿದೆ. ವಿಷಾದದ ಸಂಗತಿಯೆಂದರೆ ಈ ನೀತಿ ಇಂದು ದುರುಪಯೋಗವಾಗುತ್ತಿರುವುದು ಎಲ್ಲರೂ ಕಂಡುಕೊಂಡ ಸತ್ಯ. ನಾನು ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲೂ ಇದು ಬೆಳಕಿಗೆ ಬಂದಿತು. ನಾನು ಸಂದರ್ಶಿಸಿದ ಮತ್ತು ಇತರರಿಂದ ಕೇಳಿದ ಒಂದು ಸತ್ಯವೆಂದರೆ ಎಲ್ಲ ಗ್ರಾಮ ಹಾಗೂ ಪಟ್ಟಣ ಪಂಚಾಯತಿ ಮಹಿಳಾ ಸದಸ್ಯ, ಅಧ್ಯಕ್ಷರಿಗೆ ಶಿಕ್ಷಣ ಇಲ್ಲದಿರುವುದು. ಇದು ಹೀಗೆ ಮುಂದುವರೆದರೆ ಮಹಿಳೆಯರಿಗೆ ಕೊಟ್ಟ ಮೀಸಲಾತಿಯು ಮುಂದೆ ಇನ್ನೂ ದೊಡ್ಡ ಪ್ರಮಾಣದಲ್ಲಿ ದುರುಪಯೋಗವಾಗಿ ಮೀಸಲಾತಿಯ ಮೂಲ ಉದ್ದೇಶವೇ ಅರ್ಥವನ್ನು ಕಳೆದುಕೊಳ್ಳುತ್ತದೆ. ಪರೋಕ್ಷವಾಗಿ ಪುರುಷನೇ ತನ್ನ ಅಧಿಕಾರವನ್ನು ಚಲಾಯಿಸುತ್ತಾನೆ. ಮಹಿಳೆ ಬರೀ ರಬ್ಬರ್ ಸ್ಟ್ಯಾಂಪ್ ಪ್ರತಿನಿಧಿಯಾಗಿ

ಕಾರ್ಯ ನಿರ್ವಹಿಸಬೇಕಾಗುತ್ತದೆ. ಹಾಗಾಗಿ ಈ ರೀತಿಯ ದುರಂತವನ್ನು ತಪ್ಪಿಸಬೇಕಾದರೆ ಆಯ್ಕೆಯಾದ ಮಹಿಳೆಯೇ ರಾಜಕೀಯ ವ್ಯವಹಾರಗಳನ್ನು ನೇರವಾಗಿ ಎದುರಿಸುವಂತಹ ಸಾಮರ್ಥ್ಯವನ್ನು ಹೊಂದಬೇಕಾಗಿದೆ. ಆಕೆಗೆ ಇಂದು ರಾಜಕೀಯ ಶಿಕ್ಷಣ, ತರಬೇತಿ ಅತ್ಯಗತ್ಯವಾಗಿ ನೀಡಬೇಕು. ಸರ್ಕಾರದ ಯೋಜನೆಗಳ ವಿವರಗಳು ಎಲ್ಲವೂ ಲಿಖಿತವಾಗಿರುವುದರಿಂದ ಅವುಗಳನ್ನು ಓದಲು, ಬರೆಯಲು, ಪರಿಶೀಲಿಸಲು ಅಕ್ಷರಜ್ಞಾನದ ಅವಶ್ಯಕತೆ ಇದೆ. ಆದ್ದರಿಂದ ರಾಜಕಾರಣಕ್ಕೆ ಧುಮುಕುವ ಪ್ರತಿಯೊಬ್ಬ ಮಹಿಳೆಗೆ ಶಿಕ್ಷಣದ ಅವಶ್ಯಕತೆ ಇದೆ. ಈ ನಿಟ್ಟಿನಲ್ಲಿ ಮಹಿಳೆಯು ರಾಜಕಾರಣದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡರೆ ಸರ್ಕಾರ ಕಲ್ಪಿಸಿದ ಮಹಿಳಾ ಮೀಸಲಾತಿಗೆ ತಕ್ಕಮಟ್ಟಿನ ನ್ಯಾಯವನ್ನು ಒದಗಿಸಲು ಸಾಧ್ಯವಾಗುತ್ತದೆ. ಆ ಮೂಲಕ ರಾಜಕಾರಣದಲ್ಲಿ ಲಿಂಗ ಅಸಮಾನತೆಯನ್ನು ತೊಡೆದುಹಾಕಿ ಉತ್ತಮ ಸಮಾಜ ನಿರ್ಮಾಣಕ್ಕೆ ಸಹಕಾರಿಯಾಗಬಲ್ಲದು. ಇಂದು ರಾಜಕಾರಣದಲ್ಲಿ ನಿರ್ಮಾಣವಾಗಿರುವ ದೊಡ್ಡ ಪ್ರಮಾಣದ ಭ್ರಷ್ಟಾಚಾರಕ್ಕೆ ಶಿಕ್ಷಿತ ಮಹಿಳಾ ರಾಜಕಾರಣಿಯಿಂದ ತಕ್ಕಮಟ್ಟಿನ ಸುಧಾರಣೆಯನ್ನು ಕಾಣಬಹುದೇನೊ?

ಒಟ್ಟಾರೆಯಾಗಿ ಈಗಿನ ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರು ಹೆಚ್ಚಿನ ಪ್ರಮಾಣದಲ್ಲಿ ಪ್ರವೇಶ ಹೊಂದುತ್ತಲೇ ರಾಜಕೀಯ ಪ್ರಜ್ಞೆ, ತಿಳುವಳಿಕೆ, ತರಬೇತಿಗಳನ್ನು ಪಡೆದು ಸಮಾಜದಲ್ಲಿ ಹೊಸ ಬದಲಾವಣೆಯನ್ನು ಮಾಡಬಲ್ಲಳು. ಇದು ಪಂಚಾಯತ್ ವ್ಯವಸ್ಥೆಗೆ ಸೀಮಿತವಾದ ಮೀಸಲಾತಿ ಎಂಬ ತಾತ್ಸಾರವಾಗಲಿ, ನಿರುತ್ಸಾಹವಾಗಲೀ ತೋರಲಾಗದು. ಲಭ್ಯ ಅವಕಾಶಗಳನ್ನು ಅಧಿಕವಾಗಿ ಬಳಸಿಕೊಳ್ಳುತ್ತಲೇ ದೇಶದ ಮುಖ್ಯ ವಾಹಿನಿಯಲ್ಲಿ ತಮ್ಮ ಪ್ರಾತಿನಿಧ್ಯವನ್ನು ಉಳಿಸಿಕೊಳ್ಳುವ, ಬೆಳೆಸುವ ಗುರುತರ ಜವಾಬ್ದಾರಿ ಸಮಾಜದೊಂದಿಗೆ ಮಹಿಳೆಯರಲ್ಲಿ ಇರಬೇಕಾದದ್ದು ಅವಶ್ಯವಾಗಿದೆ.

೪. ಮತದಾನದ ಹಕ್ಕು, ಮೀಸಲಾತಿಯ ಸವಲತ್ತುಗಳು ಮಹಿಳಾ ಸಶಕ್ತೀಕರಣವನ್ನು ಯಾವ ನೆಲೆಯಲ್ಲಿ ಸಾಧ್ಯವಾಗಿಸಬಲ್ಲವು

೧೯೯೨ರ ವರೆಗೆ ಗ್ರಾಮಮಟ್ಟದ ರಾಜಕಾರಣದಲ್ಲಿ ಮತದಾನದ ಹಕ್ಕಿಗೆ ಮಾತ್ರ ಸೀಮಿತವಾಗಿದ್ದ ಮಹಿಳೆಯರ ಸ್ಥಾನಮಾನ ೧೯೯೨ರ ನಂತರ ರಾಜಕೀಯದಲ್ಲೂ ಅವಕಾಶವನ್ನು ಕೊಟ್ಟಿದ್ದಲ್ಲದೆ ಮಹಿಳಾ ಮೀಸಲಾತಿಯನ್ನು ಕುಟುಂಬ ನಿರ್ವಹಣೆಗೆ ಸೀಮಿತವಾಗಿದ್ದ ಅವಳ ಜವಾಬ್ದಾರಿ ಸಮಾಜಕ್ಕೂ ವಿಸ್ತಾರಗೊಂಡಿತು. ಗ್ರಾಮಪಂಚಾಯತಿ ಚುನಾವಣೆಗಳಲ್ಲಿ ಇಂದು ಮಹಿಳೆ ಸಕ್ರಿಯವಾಗಿ ಪಾಲುಗೊಳ್ಳುತ್ತಿದ್ದಾಳೆ. ಮಹಿಳೆ ತನ್ನ ಕುಟುಂಬ ನಿರ್ವಹಣೆಯ ಜೊತೆಗೆ ತನ್ನ ಬಿಡುವಿನ ಸಮಯವನ್ನು ಕಳೆಯಲು ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ನಗರಗಳಲ್ಲಿ ವಾಸಿಸುತ್ತಿರುವ ಕುಟುಂಬಗಳಲ್ಲಿ ಗಂಡ ಒಬ್ಬನೇ ದುಡಿದು ತಂದ ಆದಾಯದಲ್ಲಿ ಕುಟುಂಬ ನಿರ್ವಹಣೆ ಹೊರೆಯಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಮಹಿಳೆ ಮನೆಯ ಹೊರಗೂ ದುಡಿದು ಕುಟುಂಬ ನಿರ್ವಹಣೆಯ ಹೊರೆಯನ್ನು ಕಡಿಮೆ ಮಾಡಲು ಹವಣಿಸುತ್ತಿದ್ದಾಳೆ. ಉದ್ಯೋಗದಲ್ಲಿ ಮಹಿಳೆಯರಿಗೆ ಮೀಸಲಾತಿ ಇರುವುದರಿಂದ ಸರ್ಕಾರಿ ಹಾಗೂ ಖಾಸಗಿ ವಲಯಗಳು ಸೇರಿದಂತೆ

ಸಾರ್ವಜನಿಕ ಸಂಸ್ಥೆಗಳಲ್ಲಿ, ವಿವಿಧ ವಲಯದ ಹುದ್ದೆಗಳಲ್ಲಿ ಮಹಿಳೆ ಪುರುಷನಿಗೆ ಸಮಾನವಾಗಿ ದುಡಿಯುತ್ತಿರುವುದು ನಮಗೆಲ್ಲ ತಿಳಿದ ವಿಚಾರ, ಅದೇ ರೀತಿ ರಾಜಕೀಯದಲ್ಲೂ ಮಹಿಳೆಗೆ ಮೀಸಲಾತಿಯನ್ನು ನೀಡಿ ಸಮಾಜ ಸೇವೆಗೆ ಅವಳಿಗೆ ಮುಕ್ತ ಅವಕಾಶವನ್ನು ನೀಡಿದೆ. ಮಹಿಳಾ ಮೀಸಲಾತಿ ಸವಲತ್ತುಗಳಿಂದಾಗಿ ಗ್ರಾಮಪಂಚಾಯತಿ ಆಡಳಿತದಲ್ಲಿ ಮಹಿಳೆಯರೆ ಮೇಲುಗೈ ಸಾಧಿಸಿದ್ದಾರೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ಗ್ರಾಮಪಂಚಾಯತಿ ಅಧ್ಯಕ್ಷ, ಸದಸ್ಯ ಸಂಖ್ಯೆಯಲ್ಲಿ ಸಾಕಷ್ಟು ಮಹಿಳೆಯರು ಸ್ಥಾನ ಪಡೆದಿದ್ದಾರೆ. ಈಗಿನ ಶೇಕಡಾ ೩೩ ರಷ್ಟು ಇರಬೇಕಾದ ಮೀಸಲಾತಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಸ್ಥಾನವನ್ನು ಪಡೆದುಕೊಂಡಿದ್ದಾರೆ. ಇದು ಆಕೆಯು ಸಶಕ್ತೀಕರಣಗೊಳ್ಳುವ, ರಾಜಕೀಯ ಅಧಿಕಾರವನ್ನು ಹಿಡಿಯುವ ಮುಖ್ಯ ಸಂಘರ್ಷದ ಕಡೆಗೆ ದಾಪುಗಾಲು ಹಾಕುತ್ತಿದ್ದಾಳೆನ್ನಬಹುದು.

ಇತ್ತೀಚಿನ ತಿದ್ದುಪಡಿಗಳಿಂದಾಗಿ ಸ್ಥಳೀಯ ಸಂಸ್ಥೆಗಳಾದ ಗ್ರಾಮಪಂಚಾಯತಿ ಮತ್ತು ನಗರ ಪಾಲಿಕೆಗಳಲ್ಲಿ ಸಂವಿಧಾನಾತ್ಮಕವಾಗಿ ಮಹಿಳೆಯರಿಗೆ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟಿರುವುದು ಸರಿಯಷ್ಟೆ. ಆದರೆ ಇಂದು ಗ್ರಾಮಪಂಚಾಯತಿ ಆಡಳಿತದಲ್ಲಿ ಅವರು ಭಾಗವಹಿಸುವಿಕೆ, ನಾಮಕಾವಸ್ಥೆಯಾಗಿ ಮಾತ್ರ ಉಳಿದಿದೆ. ಪಂಚಾಯತಿ ಸದಸ್ಯರ ಹಾಗೂ ಅಧ್ಯಕ್ಷರಾಗಿ ಆಯ್ಕೆಯಾಗಿರುವ ಬಹುತೇಕ ಮಹಿಳಾ ಅಭ್ಯರ್ಥಿಗಳಿಗೆ ಕನಿಷ್ಟ ಶಿಕ್ಷಣ ಇಲ್ಲದಿರುವುದು. ಜೊತೆಗೆ ಇವರಲ್ಲಿ ನೇರವಾಗಿ ಆಡಳಿತವನ್ನು ನಡೆಸದೆ ಅವರ ತಮ್ಮಂದಿರನ್ನೋ, ಗಂಡದಿರನ್ನೋ, ಮಕ್ಕಳನ್ನೋ ಅವಲಂಬಿಸುತ್ತಿದ್ದಾರೆ. ಹೀಗಾದರೆ ಮಹಿಳೆ ಸಶಕ್ತೀಕರಣ ಹೊಂದಲು ಹೇಗೆ ಸಾಧ್ಯ. ಬರೀ ಮೀಸಲಾತಿಯನ್ನು ಕೊಟ್ಟರೆ ಮಾತ್ರ ಮಹಿಳೆ ಸಶಕ್ತೀಕರಣವನ್ನು ಹೊಂದುವುದಿಲ್ಲ. ಮಹಿಳೆಗೆ ರಾಜಕೀಯದಲ್ಲಿನ ಮೀಸಲಾತಿಯನ್ನು ಕೊಡುವುದು ಎಷ್ಟು ಮುಖ್ಯವೋ ರಾಜಕೀಯ ಶಿಕ್ಷಣದ ತರಬೇತಿ ಕೊಡುವದೂ ಸಹ ಅಷ್ಟೇ ಮುಖ್ಯವಾಗಿದೆ. ರಾಜಕೀಯವನ್ನು ಪ್ರವೇಶಿಸುವ ಪ್ರತಿಯೊಬ್ಬ ಮಹಿಳೆಗೆ ಶಿಕ್ಷಣದ ಅವಶ್ಯಕತೆ ಇದೆ.

ಭಾರತದ ಮಹಿಳಾ ಚಳುವಳಿಯೂ ಇದನ್ನು ಮುಂದಿಟ್ಟುಕೊಂಡು ಉದಯಿಸಿದ್ದು. ಪ್ರಸ್ತುತ ದಿನಮಾನದ ಚರ್ಚೆಯೂ ರಾಜಕೀಯ ಮೀಸಲಾತಿಯನ್ನು ಕೇಂದ್ರವಾಗಿರಿಸಿಕೊಂಡಿದೆ. ರಾಜಕೀಯದಲ್ಲಿನ ಮಹಿಳಾ ಮೀಸಲಾತಿ ಪ್ರಶ್ನೆಯು ಇಂದು ಮಹಿಳಾ ರಾಜಕಾರಣದ ಚರ್ಚೆಯನ್ನು ವಿದ್ವತ್‌ಲೋಕದ ಕೇಂದ್ರಸ್ಥಾನಕ್ಕೆ ತಂದಿದೆ.

ಕ್ರಿ.ಶ. ೧೮೪೮ರ ಸಮಯದಲ್ಲಿ ನ್ಯೂಯಾರ್ಕಿನಲ್ಲಿ ಮತದಾನದ ಹಕ್ಕಿಗಾಗಿ ಸುಸಾನ ಆಂತೋನಿಯ ನೇತೃತ್ವದಲ್ಲಿ ದನಿ ಎತ್ತಿದ್ದರೂ ಅಲ್ಲಿ ಮತದಾನದ ಹಕ್ಕು ದೊರೆತಿದ್ದು ಕ್ರಿ.ಶ. ೧೯೨೦ ರಲ್ಲಿ. ಜಗತ್ತಿನಲ್ಲಿ ಮತದಾನದ ಹಕ್ಕನ್ನಿತ್ತ ಮೊದಲ ದೇಶ ನ್ಯೂಜಿಲೆಂಡ್ ಆಗಿದೆ. ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಮೊಟ್ಟಮೊದಲಿಗೆ ಮಹಿಳಾ ಮತದಾನದ ಹಕ್ಕಿನ ವಿಷಯವನ್ನು ಕ್ರಿ.ಶ. ೧೯೧೭ ರಲ್ಲಿ ಮಂಡಿಸಲಾಯಿತು. ಆಗಿನ ಬ್ರಿಟಿಷ್ ಸರಕಾರ ತನ್ನ ಅಭಿಪ್ರಾಯವನ್ನು ನೇರವಾಗಿ ತಿಳಿಸದೆ ಅದರ ಜವಾಬ್ದಾರಿಯನ್ನು Individual

provinicial Legislatures ಮುಂದೆ ಇಟ್ಟಿತು. ಮಹಿಳಾ ರಾಜಕಾರಣದ ಪ್ರಶ್ನೆಯೇ ಇಲ್ಲದಾಗ ಕೂಡ ಅನಿಬಿಸೆಂಟ್, ಸರೋಜಿನಿನಾಯ್ಡು ಮುಂತಾದವರು ವ್ಯಕ್ತಿಗತವಾಗಿ ತಮ್ಮ ರಾಜಕೀಯ ಸಾಮರ್ಥ್ಯವನ್ನು ಸಾಬೀತುಪಡಿಸಿದ್ದರ ಹಿನ್ನೆಲೆಯಲ್ಲಿ ಸಭೆಗೆ ಇದನ್ನು ತಿರಸ್ಕರಿಸುವ ಸಾಧ್ಯತೆ ಇರಲಿಲ್ಲ. ಪರಿಣಾಮವಾಗಿ ೧೯೧೯ರ ಮಾಂಟೆಗ್ಯೂ ಚೆಮ್ಸ್‌ಫರ್ಡ್ ಸುಧಾರಣಾ ಕಾಯ್ದೆಯು State Legislature ಚುನಾವಣೆಯಲ್ಲಿ ಮತದಾನದ ಹಕ್ಕನ್ನು ನೀಡಿತು. ಮಹಿಳೆಗೆ ಮತದಾನದ ಹಕ್ಕು ನೀಡಿದ ಕೆಲವು ರಾಷ್ಟ್ರಗಳ ಪಟ್ಟಿಯನ್ನು ಈ ಕೆಳಗೆ ಗಮನಿಸಬಹುದು.

| ದೇಶ | ವರ್ಷ |
|---|---|
| ನ್ಯೂಜಿಲೆಂಡ್ | ೧೮೯೩ |
| ಆಸ್ಟ್ರೇಲಿಯಾ | ೧೮೯೭ |
| ಫಿನ್‌ಲ್ಯಾಂಡ್ | ೧೯೦೬ |
| ಸ್ಕ್ಯಾಂಟಿನೋವಿಯನ ದೇಶಗಳು | ೧೯೧೪ |
| ಕೆನಡಾ (ಕ್ಯೂಬಾವನ್ನು ಹೊರತುಪಡಿಸಿ) | ೧೯೧೬ |
| ಇಂಗ್ಲೆಂಡ್, ಸೋವಿಯತ್ ಯೂನಿಯನ್, ನೆದರಲ್ಯಾಂಡ್, ಉಕ್ರೇನ್ | ೧೯೧೮ |
| ಯು.ಎಸ್.ಎ. | ೧೯೨೦ |
| ಶ್ರೀಲಂಕಾ | ೧೯೩೧ |
| ಥಾಯಲ್ಯಾಂಡ್ | ೧೯೩೨ |
| ಬರ್ಮಾ | ೧೯೩೪ |
| ಜಪಾನ್ | ೧೯೪೬ |

ಇರಾಕ್, ಜೊರ್ಡಾನ್, ಸೂಡಾನ್ ಮುಂತಾದ ದೇಶಗಳು ಇನ್ನೂ ಇದನ್ನು ಒಪ್ಪಿಲ್ಲ ಕೂಡ. ಮೇಲಿನ ಅಂಕಿ ಅಂಶವು ಹಲವಾರು ದೇಶಗಳಲ್ಲಿ ಮಹಿಳಾ ರಾಜಕಾರಣದ ಪ್ರಶ್ನೆಯು ಮತದಾನದ ಹಕ್ಕಿನ ನೆಲೆಯಲ್ಲೇ ಇನ್ನು ಉಳಿದಿರುವುದನ್ನು ತೋರಿಸುತ್ತವೆಯಲ್ಲದೆ ಭಾರತದಲ್ಲಿನ ಅವರ ಸುಧಾರಿತ ಸ್ಥಾನವನ್ನು ಸೂಚಿಸುತ್ತದೆ. ಇದರ ಫಲವಾಗಿ ಬ್ರಿಟಿಷ್ ಸರಕಾರ ಕ್ರಿ.ಶ. ೧೯೩೫ರ ಭಾರತ ಕಾಯಿದೆಯನ್ನು ಜಾರಿಗೊಳಿಸಿ, ಮತದಾನದ ಹಕ್ಕನ್ನು ಗೃಹಿಣಿಯರಿಗೆ ಮತ್ತು ವಿಧವೆಯರಿಗೆ ಮಾತ್ರ ನೀಡಿತು. ಆದರೆ ಅಂದಿನ ಮಹಿಳಾ ಸಂಘಟನೆಗಳು ಇದನ್ನು ವ್ಯಾಪಕವಾಗಿ ಪ್ರತಿಭಟಿಸಿದವು. ಏಕೆಂದರೆ ವಿವಾಹ ಮತ್ತು ರಾಜಕೀಯಕ್ಕೆ ಸಂಬಂಧವನ್ನು ಕಲ್ಪಿಸಿರುವುದು ಪುರುಷ ರಾಜಕಾರಣದ ಸಂಚು ಹುನ್ನಾರ. ಅವಳ ರಾಜಕೀಯ ಪ್ರವೇಶವನ್ನು, ಮತದಾನದ ಹಕ್ಕನ್ನು ಕೇವಲ ವಿವಾಹದಿಂದ ನಿರ್ಧರಿಸಬಹುದಾದರೆ, ಅವಳನ್ನು ಮತ್ತೊಂದು ಬಗೆಯಲ್ಲಿ ಸಾಂಸ್ಕೃತಿಕ ಸುಳಿಯಲ್ಲಿಯೇ ಸಿಲುಕಿಸಿದಂತಾಯಿತು. ಈ ಕುರಿತು ರಾಷ್ಟ್ರೀಯ ಮತ್ತು ಮಹಿಳಾ ಚಳುವಳಿಯ ಹೋರಾಟಗಾರ್ತಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ (೧೯೦೩-೧೯೮೮) ಕಟುವಾಗಿ ಹೀಗೆ ಬರೆದರು 'ಮಹಿಳೆಯರ ನಾಗರೀಕ ಹಕ್ಕುಗಳು ಅವಳ ಕೇವಲ ವಿವಾಹವನ್ನು ಮಾತ್ರ ಅವಲಂಬಿಸಿರುವುದೆಂದು ನಾನು ಭಾವಿಸುವುದಿಲ್ಲ (ಕುಮಾರ್

೧೯೯೩). ಯಾವ ಸಂಕೋಲೆಯಿಂದ ಹೊರಬಂದು ತನ್ನ ಇಚ್ಛಾ ಸಾಮರ್ಥ್ಯವನ್ನು ಪ್ರದರ್ಶಿಸಲು, ಸಾಬೀತುಪಡಿಸಲು ಕಾತುರಳಾಗಿದ್ದಾಳೋ, ಪುನಃ ಅವಳನ್ನು ಇನ್ನೊಂದು ಬಗೆಯಲ್ಲಿ ಬಂಧಿಸಿಡಲು ನಡೆಸಿರುವ ಹುನ್ನಾರವಾಗಿತ್ತು.

ಇದಲ್ಲದೆ ಕೂಡ ವಿವಾಹದೊಂದಿಗೆ ರಾಜಕೀಯ ಹಕ್ಕನ್ನು ಜೋಡಿಸುವುದು ಸಮರ್ಪಕವಾದುದಲ್ಲ. ಏಕೆಂದರೆ ಭಾರತದ ರಾಜಕಾರಣದಲ್ಲಿ ಎಷ್ಟೋ ಜನ ಮಹಿಳೆಯರು ವಿವಾಹವು ತಮ್ಮ ರಾಜಕೀಯ ಸಾಧನೆಗೆ ತೊಡಕಾದುದೆಂದು ಭಾವಿಸಿದ್ದಾರೆ. ವಿವಾಹವು ಮಹಿಳೆಗೆ ಹೊಸ ಎಚ್ಚರಿಕೆಯನ್ನು ಕೊಡುತ್ತದೆ ಎಂಬುವುದಕ್ಕೂ ಕೂಡ ಯಾವುದೇ ಆಧಾರವಿಲ್ಲ. ಹಾಗೆ ನೋಡಿದರೆ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆ ಅನಿವಾರ್ಯವಾಗಿ ರಾಜಕೀಯವನ್ನು ಒಳಗೊಂಡಂತೆ ಹಲವು ಬಗೆಯ ತನ್ನ ಆಸಕ್ತಿಗಳನ್ನು ಕಳೆದುಕೊಳ್ಳಬೇಕಾದ ಪರಿಸ್ಥಿತಿ ಏರ್ಪಡುತ್ತದೆ. ಅತ್ಯಂತ ಸಣ್ಣ ವಯಸ್ಸಿನಲ್ಲಿಯೇ ಹೆಣ್ಣುಮಕ್ಕಳು ವಿವಾಹ ಸಂಸ್ಥೆಯನ್ನು ಪ್ರವೇಶಿಸುತ್ತಾರೆ ಕೂಡ. ಹಾಗಾಗಿಯೇ ಹೆಣ್ಣುಮಕ್ಕಳ ವಿವಾಹ-ಪ್ರೌಢತೆ-ರಾಜಕೀಯ ಪ್ರಜ್ಞೆ-ಮತದಾನದ ಹಕ್ಕು ಇವುಗಳನ್ನು ಸಮೀಕರಿಸುವುದರಲ್ಲಿ ಯಾವುದೇ ವೈಜ್ಞಾನಿಕತೆ ಇಲ್ಲ. ಪುರುಷನ ಸಂದರ್ಭದಲ್ಲಿ ಗಣನೆಗೆ ಬಾರದ ವಿವಾಹವು ಹೆಣ್ಣಿನ ಸಂದರ್ಭದಲ್ಲಿ ಮುಖ್ಯವಾಗುವುದು ಲಿಂಗ ತಾರತಮ್ಯವನ್ನು ತನ್ನಲ್ಲಿಗೆ ಮತ್ತೇನನ್ನು ಸೂಚಿಸದು. ಹಾಗಾಗಿ ಇದನ್ನು ಅಂದಿನ ಪ್ರಜ್ಞಾವಂತ ಮಹಿಳೆಯರು ಪ್ರತಿಭಟಿಸಿದರು.

ಹತ್ತೊಂಭತ್ತನೆ ಶತಮಾನದಲ್ಲಿ ಕೈಗೆತ್ತಿಕೊಳ್ಳಲಾದ ಹಲವಾರು ಮಹಿಳಾ ಸುಧಾರಣೆಯ ಕಾರ್ಯಕ್ರಮ ಅದರಲ್ಲೂ ೧೮೫೦ರ ನಂತರ ಚುರುಕುಗೊಂಡ ಸ್ತ್ರೀ ಶಿಕ್ಷಣದ ಪ್ರಭಾವದಿಂದಾಗಿ ಸಾಂಪ್ರದಾಯಿಕ ನಂಬಿಕೆಗಳಲ್ಲಿ ಹುದುಗಿಹೋಗಿದ್ದ ಮಹಿಳೆಯರ ಸಾಮಾಜೀಕರಣದ ಸಾಧ್ಯತೆಯ ಕಿಂಡಿಗಳನ್ನು ತೋರಿಸಿಕೊಟ್ಟಿತು. ಮಹಿಳೆಯರ ಸಾಮಾಜೀಕರಣದ ಸಾಧ್ಯತೆಯ ಪಾಶ್ಚಿಮಾತ್ಯೀಕರಣವನ್ನು ಹಾದು ಭಾರತೀಯ ಸಮಾಜದ ಸುಧಾರಣೆಯ ಹಾದಿಯನ್ನಿಡಿಯಿತು. ಪರಿಣಾಮವಾಗಿ ಮಹಿಳೆಯರಿಗೆ ಪುನರ್‌ವಿವಾಹ, ಶಿಕ್ಷಣ ಇತ್ಯಾದಿ ಅವಕಾಶಗಳು ದೊರೆತವು. ಸಾರ್ವಜನಿಕ ಶಾಲೆಗಳಲ್ಲಿನ ಶಿಕ್ಷಣ ಅವಕಾಶವು ಮಹಿಳೆಯರಿಗೆ ಬಾಹ್ಯದ ಬದುಕಿನ ಅನುಭವವನ್ನು ನೀಡುವುದರೊಂದಿಗೆ ಸಂಘಟನೆಯ, ಸಾಮೂಹಿಕ ಚಾಲನೆಯ ಸಾಧ್ಯತೆಯನ್ನು ತೋರಿಸಿಕೊಟ್ಟಿತು. ಪರಿಣಾಮವಾಗಿ ಪುರುಷ, ಪ್ರೇರಣೆಯೊಂದಿಗೆ ಆರಂಭಗೊಂಡ ಮಹಿಳಾ ಸಂಘಗಳು ಅತ್ಯಂತ ಪರಿಣಾಮಕಾರಿಯಾಗಿ ಮಹಿಳಾ ವಿಷಯಗಳ ಬಗ್ಗೆ ಕೆಲಸ ಮಾಡತೊಡಗಿದವು. ಹೀಗೆ ತಮಗಾಗಿ ತೆಗೆದುಕೊಂಡ ಅವಕಾಶಗಳನ್ನು ಸದುಪಯೋಗ ಪಡಿಸಿಕೊಂಡ ಕೆಲವು ಮಹಿಳೆಯರು ಮಹಿಳೆಯರ ಬಗ್ಗೆ ವಿಶೇಷವಾಗಿ ಮಾತನಾಡುವುದರೊಂದಿಗೆ ಪುರುಷರೊಂದಿಗೇ ಸರಿಸಮಾನವಾಗಿ ನಿಲ್ಲುವ ತಮ್ಮ ಇಚ್ಛಾ ಸಾಮರ್ಥ್ಯವನ್ನು ಪ್ರಕಟಿಸಿದರು. ಅಂದಿನ ಸ್ತ್ರೀಯ ಈ ಇಚ್ಛಾ ಶಕ್ತಿಯ ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಪ್ರಕಟಗೊಂಡಿತು.

ಗಾಂಧಿಯುಗದ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರು ಅಪಾರ ಸಂಖ್ಯೆಯಲ್ಲಿ ಹಲವಾರು ಹಂತಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರಲ್ಲದೆ ಅವರಲ್ಲಿ ಸರೋಜಿನಿನಾಯ್ಡು, ಅನಿಬೆಸೆಂಟ್, ಕಮಲಾದೇವಿ

ಚಟ್ಟೋಪಾಧ್ಯಾಯ ಮುಂತಾದವರು ಮಹಿಳಾ ರಾಜಕೀಯ ಪ್ರಾತಿನಿಧ್ಯದ ಚರ್ಚೆಗೆ ಮೊದಲೇ ರಾಷ್ಟ್ರೀಯ ನಾಯಕರಾಗಿ ಬೆಳೆದರು. ಉದಯಗೊಳ್ಳುತ್ತಿದ್ದ ಮಹಿಳಾ ಪ್ರಶ್ನೆ ಹಾಗೂ ರಾಷ್ಟ್ರೀಯ ಚಳುವಳಿಯ ನಡುವೆ ಕೊಂಡಿಯಂತೆ ನಿಂತು ಅವುಗಳ ನಡುವೆ ಅವಿನಾಭಾವ ಸಂಬಂಧವೇರ್ಪಡಲು ಇವರು ಶ್ರಮಿಸಿದರು. ಕ್ರಿ.ಶ. ೧೯೧೭ರಲ್ಲಿ ಸರೋಜಿನಿನಾಯ್ಡು ನೇತೃತ್ವದಲ್ಲಿ ಮಹಿಳಾ ನಿಯೋಗವೊಂದನ್ನು ಆರಂಭಿಸಿ ಮತದಾನದ ಹಕ್ಕಿಗಾಗಿ ಮನವಿ ಸಲ್ಲಿಸಿದರು. ಈಗಾಗಲೇ ಭಾರತೀಯ ಪುರುಷರು ಆರಂಭಿಸಿದ್ದ ಆಡಳಿತಾತ್ಮಕ ಪ್ರಾತಿನಿಧ್ಯದ ಬೇಡಿಕೆಗೆ ಹಾಗೂ ಮಹಿಳೆಯರ ಹಕ್ಕೊತ್ತಾಯಗಳೆರಡರ ಸಂಗಮವಾಗಿ ಈ ಪ್ರಶ್ನೆ ಎದ್ದಿತ್ತು. ಮತದಾನದ ಒತ್ತಾಯ ತರುವ ಸಮಯದಲ್ಲಿ ಅನಿಬೆಸೆಂಟ್ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದರು ಎಂಬ ಅಂಶ ಭಾರತದ ರಾಜಕಾರಣದಲ್ಲಿ ಮಹಿಳೆ ಹಾಗೂ ರಾಜಕಾರಣದ ಹಕ್ಕೊತ್ತಾಯಗಳ ನಡುವಿರುವ ಸಂಬಂಧವನ್ನು ವಿವರಿಸುವುದಾಗುತ್ತದೆ ಸಹ.

ರಾಷ್ಟ್ರೀಯ ಹೋರಾಟದಲ್ಲಿನ ಮಹಿಳೆಯರ ಪಾಲ್ಗೊಳ್ಳುವಿಕೆ ಅದಕ್ಕೆ ಪೂರಕವಾಗಿ ಹೋರಾಟವು ತೋರಿದ ಆಸಕ್ತಿಯ ಪರಿಣಾಮವಾಗಿ ಸ್ವಾತಂತ್ರ್ಯ ಭಾರತದ ಸಂವಿಧಾನ ರಚನೆಯ ಸಂದರ್ಭದಲ್ಲಿ ಲಿಂಗ ತಾರತಮ್ಯದ ಪ್ರಶ್ನೆಯು ಪ್ರಮುಖವಾದುದಾಯಿತು. ೧೯೪೬ ರಲ್ಲಿ ರಚನೆಗೊಂಡ ಸಂವಿಧಾನ ರಚನಾ ಸಮಿತಿಯು ೧೪ ಜನ ಮಹಿಳಾ ಸದಸ್ಯರನ್ನು ಒಳಗೊಂಡಿತು. ಸಂವಿಧಾನವು ಮಹಿಳೆಯರ ರಾಜಕೀಯ ಹಕ್ಕನ್ನು ೩೨೬ನೇ ಕಲಂನ ಲಿಂಗ ನಿರಪೇಕ್ಷ ನೆಲೆಯಲ್ಲಿ ದೃಢಗೊಳಿಸಿತು. ಮಹಿಳಾ ರಾಜಕಾರಣದ ಪ್ರಶ್ನೆಯು ಸದ್ಯಕ್ಕೆ ತಾತ್ವಿಕವಾಗಿ ಬಗೆಹರಿದುದಾಯಿತು. ಹೀಗೆ ಹೆಚ್ಚಿನ ವಿರೋಧವಿಲ್ಲದಿದ್ದರೂ ಒಂದು ಮಿತಿಯೊಳಗೆ ಭಾರತದ (೧೯೫೦ ಜನವರಿ ೨೬ ರಿಂದ ಜಾರಿಗೊಳಿಸಿದಂತೆ) ೨೧ ವರ್ಷದ ಸ್ತ್ರೀ ಪುರುಷರಿಗೂ ವಯಸ್ಕ ಮತದಾನದ ಹಕ್ಕು ಲಭಿಸಿತು.

ಮಹಿಳಾ ಮತದಾನದ ಹಕ್ಕಿನ ವಿಷಯವು ಭಾರತೀಯ ಇತಿಹಾಸದಲ್ಲಿ ಹೆಚ್ಚಿನ ವಿರೋಧವಿಲ್ಲದೆ, ಪಶ್ಚಿಮವೂ ಬೆರಗಾಗುವಂತೆ ಭಾರತವು ನಡೆದುಕೊಂಡಿತು ಎಂದು ನಿರ್ವಚನಗೊಂಡಿತು. ಆದರೆ ಇದು ವಾಸ್ತವದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಪೂರಕ ರಾಜಕೀಯ ಚಟುವಟಿಕೆಯಾಗಿ, ಒಂದು ಮಿತಿಯೊಳಗೆ ದೊರೆತ ಅವಕಾಶವಾಗಿತ್ತು. ಹಾಗಾಗಿಯೇ ಮಹಿಳಾ ರಾಜಕೀಯದ ಈ ಹೆಗ್ಗಳಿಕೆಯು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಹೆಚ್ಚಿನ ಫಲವನ್ನೇನು ನೀಡಲಿಲ್ಲ ಮತ್ತು ೮೦ ರ ದಶಕದಲ್ಲಿ ಮಹಿಳಾ ರಾಜಕೀಯದ ಹಕ್ಕಿನ ಪ್ರಶ್ನೆಯನ್ನು ಸ್ವಾಯತ್ತ ನೆಲೆಯಲ್ಲಿ ಪ್ರಸ್ತಾಪಿಸಬೇಕಾಯಿತು, ಹೋರಾಟಕ್ಕಿಳಿಯಬೇಕಾಯಿತು. ಪ್ರಸ್ತುತ ಅಧ್ಯಯನದ ಹೊತ್ತಿಗೆ ಕೂಡ ಈ ವಿಚಾರವು ಹಲವಾರು ಭಿನ್ನಾಭಿಪ್ರಾಯಗಳ ನಡುವೆ ನೆನೆಗುದಿಗೆ ಬಿಟ್ಟಿರುವುದು ಈ ಅಧ್ಯಯನದ ಹಿಂದಿನ ಪ್ರಮುಖ ಪ್ರೇರಣೆಯಾಗಿದೆ.

## ಅಧ್ಯಯನದ ಉದ್ದೇಶ

ನೈಸರ್ಗಿಕವಾಗಿ ಭಾರತದ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ (ಶೇ. ೪೮) ಮಹಿಳೆಯರು ಅಧಿಕಾರ ಹಂಚಿಕೆಯ ಸಂದರ್ಭದಲ್ಲಿ ನಗಣ್ಯರಾಗಿದ್ದಾರೆ. ಗುಲಾಮರಾಗಿ ಪರಿವರ್ತಿತರಾಗಿದ್ದಾರೆ. ರಾಷ್ಟ್ರೀಯ ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಪುರುಷರ ಸರಿಸಮಾನವಾಗಿ ಅವಕಾಶ ದೊರಕಿಸಿಕೊಳ್ಳುವಲ್ಲಿ ವಂಚಿಸಲ್ಪಟ್ಟಿದ್ದಾರೆ. ಅಲ್ಪಸ್ವಲ್ಪ ಅವಕಾಶ ದೊರಕಿದ್ದರೂ ಕೂಡ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಛಾಪು ಮೂಡಿಸುವಲ್ಲಿ ಸೋತಿದ್ದಾರೆ. ಸ್ವತಂತ್ರ ಭಾರತದ ಸಂಸತ್ತಿನ ಸದಸ್ಯತ್ವದಲ್ಲಿ ಅವರ ಸಂಖ್ಯೆಯು ಎಂದಿಗೂ ಶೇ. ೮.೨ ನ್ನು ಮೀರಿಲ್ಲ ಎನ್ನುವುದೇ ಇದಕ್ಕೆ ಸಾಕ್ಷಿ. ಪ್ರತಿ ಜನಗಣತಿಯಲ್ಲೂ (Census) ಮಹಿಳೆಯರ ಸಂಖ್ಯೆ ಪುರುಷನ ಸಂಖ್ಯೆಯ ಆಸುಪಾಸಿನಲ್ಲೇ ಇರುತ್ತದೆ. ಸಾಮಾನ್ಯ ಹೇಳಿಕೆಯ ಪ್ರಕಾರ ಪ್ರತಿ ೧೦೦೦ ಪುರುಷರಿಗೆ ೯೩೫ ಮಹಿಳೆಯರಿದ್ದಾರೆ ಎನ್ನುವುದು.

ಪ್ರತಿ ಹತ್ತು ವರ್ಷಗಳ ಜನಗಣತಿ ಕೂಡ ಈ ವಿಚಾರವನ್ನು ಮಹತ್ವದ್ದಾಗಿ ಪರಿಗಣಿಸಿ ಪ್ರಸ್ತುತಪಡಿಸುತ್ತದೆ. ಆದರೆ ಪ್ರಸ್ತುತಪಡಿಸುವಿಕೆಯ ಹಿಂದೆ ಅದು ಹೆಣ್ಣು ಶಿಶುಹತ್ಯೆ ಇತ್ಯಾದಿ ಸ್ತ್ರೀ ಪುರುಷರ ನಡುವೆ ಉಂಟಾಗುವ ನೈಸರ್ಗಿಕ, ಸಾಮಾಜಿಕ ಅಸಮತೋಲನದ ಬಗೆಗಿನ ಆತಂಕ ವ್ಯಕ್ತವಾಗುತ್ತದೆಯೇ ಹೊರತು ಸ್ತ್ರೀ ಪುರುಷರ ಅನುಪಾತಕ್ಕನುಗುಣವಾಗಿ ದೊರೆಯಬೇಕಾದ ಹಕ್ಕುಗಳು, ಅವಕಾಶಗಳು ಪ್ರತಿನಿಧಿತ್ವಗಳ ಬಗ್ಗೆ ಹೆಚ್ಚು ಮಾತನಾಡುವುದಿಲ್ಲ. ಅದನ್ನು ಗೌಣವಾಗಿಯೆ ಪರಿಗಣಿಸಲಾಗಿದೆ.

ಪ್ರಜಾಪ್ರಭುತ್ವದ ಬಹುಮುಖ್ಯ ಅಂಶವಾದ ಚುನಾವಣೆಯ ಸಂದರ್ಭದಲ್ಲಿ ಕೂಡ ಪುರುಷರ ಪ್ರತಿಶತವನ್ನು ಸ್ತ್ರೀಯರು ಸರಿಗಟ್ಟುತ್ತಿರುವುದನ್ನು ಅಧ್ಯಯನಗಳು ಈಗಾಗಲೇ ಗುರುತಿಸಿವೆ.[೧] ಆದರೆ ಮಹಿಳೆಯರ ಈ ರಾಜಕೀಯಾಸಕ್ತಿಯನ್ನು ಶುದ್ಧ ರಾಜಕೀಯಾಸಕ್ತಿಯಾಗಿ ಪರಿಭಾವಿಸುವುದಕ್ಕೆ ಹಿಂಜರಿಯುತ್ತವೆ. ಅದಕ್ಕೆ ಪ್ರತಿಯಾಗಿ ಭಾರತದಂತಹ ಅನಕ್ಷರಸ್ಥ ಸಮಾಜದಲ್ಲಿ ಓಟ್‌ಬ್ಯಾಂಕ್‌ಗಳ ನಿರ್ಮಾಣವೊಂದು ಚುನಾವಣಾ ರಾಜಕೀಯದ ಪ್ರಧಾನ ಲಕ್ಷಣವಾಗಿದ್ದು ಮಹಿಳೆಯರು ಇದಕ್ಕೆ ವಿಶೇಷವಾಗಿ ಒಳಪಡುವುದನ್ನು ಈ ಅಂಕಿ-ಅಂಶದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಶ್ರೀಮತಿ ಇಂದಿರಾಗಾಂಧಿಯನ್ನು ಒಳಗೊಂಡಂತೆ ಹಲವಾರು ಯಶಸ್ವೀ ನಾಯಕಿರನ್ನು ಮೂರನೇ ಜಗತ್ತಿನ ರಾಷ್ಟ್ರಗಳು ರೂಪಿಸಿದ್ದಾಗಲೂ ಅದನ್ನು ಮಹಿಳಾ ಸಶಕ್ತರಾಜಕಾರಣದ ಸಂಕೇತವಾಗಿ ಕಾಣುವುದು ಸಾಧ್ಯವಾಗುತ್ತಿಲ್ಲ. ಈ ನಾಯಕಿಯರೆಲ್ಲ ಮಹಿಳೆ ಎನ್ನುವುದಕ್ಕಿಂತ ಹೆಚ್ಚಾಗಿ ಕುಟುಂಬ ಮತ್ತು ಜಾತಿ ರಾಜಕಾರಣದಿಂದ ಉದಿಸಿದ ನಾಯಕಿಯರಾಗಿ ಗೋಚರಿಸುತ್ತಾರೆ. ಮಹಿಳಾ ಮೀಸಲಾತಿಯ ಕುರಿತು ಮಾತನಾಡುವಾಗಲೂ ಕುಟುಂಬ ಮತ್ತು ಜಾತಿ ರಾಜಕಾರಣದ ಕುರಿತ ಆತಂಕವನ್ನೇ ಪುನರುಚ್ಚರಿಸಲಾಗುತ್ತಿದೆ.

ಮೇಲಿನೆಲ್ಲ ಅಂಶಗಳನ್ನು ನೋಡುವುದಾದರೆ ಮಹಿಳಾ ರಾಜಕಾರಣದ ಬಗೆಗಿನ ಅಪನಂಬಿಕೆ ಮತ್ತು underestimate ಎಂಬುದು ನಮ್ಮ ಚಿಂತನೆಗಳ ಸಾಮಾನ್ಯ ಲಕ್ಷಣವಾಗಿದ್ದು ಇದು ಒಳಗಿಂದೊಳಗೇ ಸಾಂಪ್ರದಾಯಿಕ ಸಮಾಜದ ಸ್ಥಾಪಿತ ಮೌಲ್ಯಗಳಿಂದ ಪ್ರಭಾವಿತವಾಗಿರುವಂತೆ ತೋರುತ್ತದೆ.

ಶ್ರೀಮತಿ ಇಂದಿರಾಗಾಂಧಿಯಂತಹ ಬಲಿಷ್ಠ ನಾಯಕಿ ಸಮಸ್ತ ಭಾರತವನ್ನು ಪ್ರತಿನಿಧಿಸುವಂತಹ ಪ್ರೇರಣಾ ಶಕ್ತಿಯಾಗಿ ಆಳುತ್ತಿದ್ದಾಗಲೂ ಅದನ್ನು ಸ್ವೀಕರಿಸಿಯೂ ಭಾರತದ ಸಾಮಾನ್ಯ ತಿಳಿವಳಿಕೆ ಎಂದರೆ ಸಾರ್ವಜನಿಕ ಪರಿಸರಗಳು, ರಾಜಕೀಯ, ಮಹಿಳೆಗೆ ಸಂಬಂಧಿಸಿದ ವಿಚಾರವಲ್ಲ. ಆಕೆ ದೇಶವನ್ನಾಳಿ ಆಗಬೇಕಾದುದೇನೂ ಇಲ್ಲ ಎಂಬ ನಿಲುವಿಗೆ ಅಂಟಿಕೊಂಡಿದೆ. ಇದಕ್ಕೆ ಪುರುಷ ಸಮಾಜ ನೀಡುವ ಕಾರಣಗಳು ಅವಾಸ್ತವವಾಗಿವೆ. ಅವಳ ನೈಸರ್ಗಿಕ ಅನರ್ಹತೆಯೊಂದಿಗೆ ಪ್ರಸ್ತುತ ಅಪರಾಧೀಕರಣದ ಹಾಗೂ ಭ್ರಷ್ಟಾಚಾರದಿಂದ ನಾರುತ್ತಿರುವ ರಾಜಕಾರಣವನ್ನು ಆಕೆ ನಿಭಾಯಿಸಲಾರಳು. ಹಾಗೊಂದು ವೇಳೆ ಪ್ರವೇಶಿಸಿದರೂ ಮೂಲತಃ ಮೃದುಸ್ವಭಾವದವಳಾಗಿರುವುದರಿಂದ ಅವಳಿಗೆ ಶಿಶುಪಾಲನೆ, ಸಮಾಜಕಲ್ಯಾಣ, ಶಿಕ್ಷಣ ಕ್ಷೇತ್ರಗಳೇ ಸೂಕ್ತ; ರಾಜಕಾರಣದಿಂದ ಸ್ತ್ರೀತನ ನಾಶವಾಗುತ್ತದೆ ಎಂಬುದು... ಇತ್ಯಾದಿಗಳಾಗಿವೆ.

ಆದರೆ ತನ್ನ ಅಸ್ತಿತ್ವಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಸಾಕಷ್ಟು ಬೆಲೆ ತೆತ್ತಿರುವ ಅವಳಿಂದು ತುಂಬ ಪ್ರಬುದ್ಧೆಯಾಗಿದ್ದಾಳೆ. ಮಕ್ಕಳ ಲಾಲನೆ ಪಾಲನೆ, ಗೃಹಕಾರ್ಯಗಳ ಜತೆಜತೆಗೆ ಇಂದು ಕಂಪ್ಯೂಟರ್‌ಗಳೊಂದಿಗೆ, ಅಧಿಕಾರಿಗಳೊಂದಿಗೆ, ರೋಗಿಗಳೊಂದಿಗೆ, ಸಹೋದ್ಯೋಗಿಗಳೊಂದಿಗೆ ನಿರ್ಭಯಳಾಗಿ, ಸಬಲಳಾಗಿ ವರ್ತಿಸುವ ಅವಳಿಗೆ ರಾಜಕೀಯ ಕ್ಷೇತ್ರ ಹೊರೆ ಎನಿಸದು. ಆದರೆ ಪುರುಷ ಸಮಾಜ ರಾಜಕಾರಣವನ್ನು ಅವಳಷ್ಟಕ್ಕೆ ಅನುಭವಿಸಲು ಬಿಟ್ಟೀತೆ? ಎನ್ನುವುದು ದೊಡ್ಡ ಪ್ರಶ್ನೆಯಾಗಿದೆ.

ಸ್ವತಂತ್ರ ಭಾರತ ಈವರೆಗೂ ೧೩ ಲೋಕಸಭಾ ಚುನಾವಣೆಗಳನ್ನು ಕಂಡರೂ ಅವುಗಳಲ್ಲಿ ಇಂದಿಗೂ ಶೇ. ೧೦ ಕ್ಕಿಂತ ಹೆಚ್ಚಿನ ಮಹಿಳಾ ಪ್ರತಿನಿಧಿಗಳು ಆರಿಸಿಹೋಗಿಲ್ಲ. ಲೋಕಸಭೆಯಲ್ಲಿ ಮಹಿಳಾ ಪ್ರಾತಿನಿಧ್ಯದ ಶೇಕಡಾವಾರು ಏರುಪೇರಿನಿಂದ ಕೂಡಿದೆ. ಇದು ೧೯೭೭ ರಲ್ಲಿ ಶೇ. ೩.೪, ೧೯೮೪ ರಲ್ಲಿ ಶೇ. ೮.೧ ರಷ್ಟಿತ್ತು ಮತ್ತು ೧೯೯೬ ರಲ್ಲಿ ಶೇ. ೭.೧ ಕ್ಕೆ ಇಳಿಮುಖವಾಗಿದೆ. ಎಂಟನೇ ಲೋಕಸಭೆಗೆ ಅತಿಹೆಚ್ಚು ಅಂದರೆ ೪೪ ಮಹಿಳಾ ಪ್ರತಿನಿಧಿಗಳನ್ನು ಹೊಂದಿದ್ದು ಬಿಟ್ಟರೆ, ಈ ಬಾರಿಯೇ ೧೩ನೇ ಲೋಕಸಭೆಯಲ್ಲಿ ಅತಿಹೆಚ್ಚು ಅಂದರೆ ೫೪೨ ಸಂಸದರಲ್ಲಿ ೪೩ ಜನ ಮಹಿಳೆಯರಿರುವುದು.

ಹೀಗಾಗಿ ಈವರೆಗಿನ ೧೩ ಲೋಕಸಭೆಗಳಲ್ಲಿ ಮಹಿಳೆಯರ ಸರಾಸರಿ ಸಂಖ್ಯೆ ಕೇವಲ ೩೧. ನಮ್ಮ ರಾಜ್ಯ ಸರಕಾರದ್ದು ಇದಕ್ಕಿಂತ ಶೋಚನೀಯ ಪರಿಸ್ಥಿತಿ. ಈಗಿನ ೨೨೪ ವಿಧಾನಸಭಾ ಸದಸ್ಯರ ಪೈಕಿ ಕೇವಲ ೬ ಜನ ಮಹಿಳೆಯರಿದ್ದಾರೆ. ಈ ಎಲ್ಲಾ ಚುನಾವಣೆಗಳನ್ನು ಗಣನೆಗೆ ತೆಗೆದುಕೊಂಡರೆ ಈವರೆಗೆ ಸಂಸತ್ತಿನಲ್ಲಿ ಶೇ. ೮, ರಾಜ್ಯ ವಿಧಾನಸಭೆಗಳಲ್ಲಿ ಶೇ. ೧೦, ಮಂತ್ರಿಮಂಡಲಗಳಲ್ಲಿ ಶೇ. ೧೩ ಸ್ಥಾನಗಳನ್ನು ಮಾತ್ರ

ಮಹಿಳೆಯರು ಪ್ರತಿನಿಧಿಸಿದ್ದಾರೆ ಎನ್ನುವುದು ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಹಿಂದುಳಿಯುವಿಕೆಯನ್ನು ತೋರಿಸುತ್ತದೆ. ಮಹಿಳಾ ರಾಜಕೀಯ ಪಾಲ್ಗೊಳ್ಳುವಿಕೆ ಕುರಿತ ಈ ಕೆಳಗಿನ ಕೋಷ್ಟಕವನ್ನು ಗಮನಿಸಬಹುದು.

ಒಟ್ಟಾರೆ ಹೇಳುವುದಾದರೆ ಲಿಂಗತಾಟಸ್ಥ್ಯ, ಲಿಂಗ ಸಮಾನತೆಯ ಬಗ್ಗೆ ರಾಜಕೀಯ ಪಕ್ಷಗಳ ಪ್ರಣಾಳಿಕೆಗಳು ಮಾತನಾಡುತ್ತಿದ್ದರೂ ಸಾರ್ವಜನಿಕ ಸಂದರ್ಭದಲ್ಲಿ ಮಹಿಳಾ ರಾಜಕಾರಣದ ಬಗ್ಗೆ ಧನಾತ್ಮಕ ವಾದ (Positive)ಅಭಿಪ್ರಾಯವನ್ನು ರೂಪಿಸುವ, ಸ್ವತಃ ಮಹಿಳೆಯರಲ್ಲಿಯೇ ಶುದ್ಧರಾಜಕೀಯ ಪ್ರಜ್ಞೆಯನ್ನು ಎಚ್ಚರಿಸುವ ದಿಕ್ಕಿನಲ್ಲಿ ಭಾರತವು ಸೋತಿದೆ.

ಮಹಿಳೆಯರನ್ನು ಸಮಾನವಾಗಿ ಕಾಣದಿರುವುದು, ಆಕೆ ಸದಾ ತನ್ನ ಗುಲಾಮಳಾಗಿ ಕೈಗೆಟುಕದಂತೆ ಬದುಕುತ್ತಿರಲಿ ಎಂದು ಆಶಿಸುವುದು, ಅದಕ್ಕಾಗಿ ಷಡ್ಯಂತ್ರಗಳನ್ನು ಹಗಲಿರುಳೂ ರೂಪಿಸುತ್ತಿರುವುದೇ ಪುರುಷ ಪ್ರಧಾನ ಸಮಾಜದ ಕಾರ್ಯಸೂಚಿ ಎನ್ನುವುದನ್ನು ರಾಜಕೀಯ ಕ್ಷೇತ್ರವೂ ಸಾಬೀತುಪಡಿಸುತ್ತದೆ. ಅದಕ್ಕಾಗಿ ಅದು ಈ ಕೆಳಗಿನ ಅಭಿಪ್ರಾಯಗಳನ್ನು ವ್ಯವಸ್ಥಿತವಾಗಿ ಸಮಾಜದಲ್ಲಿ ಬಿತ್ತುತ್ತಿದೆ.

೧. ಮಹಿಳೆಗೆ ರಾಜಕಾರಣದಂತಹ ಕ್ಷೇತ್ರವನ್ನು ನಿಭಾಯಿಸಲು ಬೇಕಾದ ಬುದ್ಧಿಶಕ್ತಿ, ತರಬೇತಿ ಇಲ್ಲ.
೨. ಮಹಿಳೆಯ ರಾಜಕೀಯ ಪ್ರವೇಶದಿಂದ ಸ್ತ್ರೀತನ ನಾಶವಾಗುತ್ತದೆ. ಸಮಾಜದಲ್ಲಿ ಕುಟುಂಬ, ವಿವಾಹ ಇತ್ಯಾದಿ ಕ್ಷೇತ್ರಗಳಲ್ಲಿ ಕೊರತೆಯುಂಟಾಗುತ್ತದೆ. ಅದೇ ಅವಳ ಪ್ರಾಥಮಿಕ ಕ್ಷೇತ್ರ.
೩. ಮಹಿಳಾ ರಾಜಕಾರಣದಿಂದಾಗಿ ಸ್ತ್ರೀಯರ ಸಾಂಸ್ಕೃತಿಕ ಅಧಃಪತನಕ್ಕೆ ದಾರಿಮಾಡಿ ಕೊಡುತ್ತದೆ.

ಮೇಲಿನಂಶಗಳ ಜೊತೆಗೆ ಅಷ್ಟು ಪ್ರಧಾನವಾಗಿ ಕಂಡುಬರುವ ಅಂಶ ಮೌಲ್ಯಾಧಾರಿತವಾದದ್ದು. ಅದರ ಪ್ರಕಾರ ಆಂಗ್ಲ ಉಕ್ತಿಯಂತೆ 'Politics is the last resort for scoundrals' ಅದು ಗಂಡಸು ಅದರಲ್ಲೂ ಕುತಂತ್ರಿ, ನಿರ್ದಯಿ, ಭ್ರಷ್ಟರು ಮಾತ್ರ ತುಂಬಿರುವ ಕ್ಷೇತ್ರ. ಅದು ಅಂತಹವರಿಗೇ ಲಾಯಕ್ಕು ಎಂಬರ್ಥ ಮೂಡಿಸಲಾಗಿದೆ. ಇಂತಹ ಕ್ಷೇತ್ರಕ್ಕೆ ಮಹಿಳೆಯರು ಕಾಲಿಟ್ಟರೆ ಒಂದೋ ಮಹಿಳೆಯರ ಅಧಃಪತನವಾಗುತ್ತದೆ ಎಂಬುದು. ಈ ಮೂರು ಹಾಗೂ ಅದರ ಸಂಬಂಧಿತವಾದ ಕಲ್ಪಿತ ಅಥವಾ ಸಾಧಿತ ಸತ್ಯಗಳ ಕುರಿತು ಚರ್ಚಿಸುವುದು ಕೂಡ ಈ ಹೊತ್ತಿನ ಅಗತ್ಯವಾಗಿದೆ.

ಪ್ರಸ್ತುತ ಅಧ್ಯಯನವು ಮಹಿಳಾ ರಾಜಕಾರಣಕ್ಕೆ ಸಂಬಂಧಪಟ್ಟ ಮೇಲಿನ ಕೆಲವು ಅಂಶಗಳನ್ನು ಪ್ರಧಾನವಾಗಿಟ್ಟು, ಅವುಗಳಿಗೆ ಹೊಂದಿಕೊಂಡಂತಿರುವ ಹಲವಾರು ಅಂಶಗಳನ್ನು ತನ್ನ ಅಧ್ಯಯನದಲ್ಲಿ ಚರ್ಚಿಸಲು ಪ್ರಯತ್ನಿಸುತ್ತದೆ. ಆ ಮೂಲಕವೇ ಮಹಿಳಾ ರಾಜಕಾರಣದ ಚಲನೆಯ ಸ್ವರೂಪವನ್ನು ಗ್ರಹಿಸಲು,

ಪ್ರಸ್ತುತಪಡಿಸಲು ಆಶಿಸುತ್ತದೆ. ಭಾರತದಲ್ಲಿನ ಮಹಿಳಾ ರಾಜಕಾರಣಕ್ಕೆ ಬೇಕಾದ ಸೈದ್ಧಾಂತಿಕ ನೆಲೆಗಟ್ಟು, ಕಾರ್ಯಸೂಚಿಯನ್ನು ಹುಡುಕುವುದರೊಂದಿಗೆ ಅದಕ್ಕಿರಬೇಕಾದ ಆತ್ಮವಿಮರ್ಶೆಯ ಸ್ವರೂಪದೆಡೆಗೂ ಗಮನಹರಿಸುವುದು ಇದರ ಮುಖ್ಯ ಉದ್ದೇಶವಾಗಿದೆ.

'ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ' ಎಂಬ ಶೀರ್ಷಿಕೆಯ ಪ್ರಸ್ತುತ ಅಧ್ಯಯನವು ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿನ ತಾರತಮ್ಯದ ವ್ಯವಸ್ಥೆಯನ್ನು ಮಹಿಳಾ ರಾಜಕಾರಣ ಜೊತೆಯಲ್ಲಿಟ್ಟು ಪರಿಶೀಲಿಸುವುದಾಗಿದೆ. ಗ್ರಾಮೀಣ ಹಾಗೂ ನಗರ ಎಂಬ ಪ್ರತ್ಯೇಕತೆಯು ಮಹಿಳಾ ರಾಜಕಾರಣದಲ್ಲಿ ಸಮೀಕರಣಗೊಳ್ಳುವ ಸಾಧ್ಯತೆ ಹಾಗೂ ಈ ಸಮೀಕರಣದಿಂದ ಮಹಿಳಾ ರಾಜಕಾರಣದಲ್ಲಿ ಪ್ರತಿಫಲಿತವಾಗುವ ವಿಧಾನಗಳನ್ನು ಪರಿಶೀಲಿಸುವುದಾಗಿದೆ. ಈ ಕೆಳಗಿನ ಕೆಲವು ಅಂಶಗಳನ್ನು ತನ್ನ ವ್ಯಾಪ್ತಿಯಲ್ಲಿ ಪರಿಶೀಲಿಸಲು ಯತ್ನಿಸುತ್ತದೆ.

೧. ನಗರಗಳ ಸವಲತ್ತು ಮಹಿಳಾ ರಾಜಕಾರಣಕ್ಕೆ ಅನುಗುಣವಾಗಿದೆಯೇ?

೨. ನಗರಗಳ ಸವಲತ್ತು (ಸೌಲಭ್ಯ) ಪುರುಷ ರಾಜಕಾರಣವನ್ನೇ ಬಲಪಡಿಸುವುದಾಗಿದೆಯೇ?

೩. ಗ್ರಾಮೀಣ ಪ್ರದೇಶಗಳ ಅವಕಾಶವಂಚಿತ ಸ್ಥಿತಿ ಎಂಬುದು ಮಹಿಳಾ ರಾಜಕಾರಣದ ಮೇಲೆ ಯಾವ ರೀತಿ ಪ್ರಭಾವ ಬೀರುತ್ತದೆ?

೪. ಪಂಚಾಯತ್‌ರಾಜ್ ಹಂತದಲ್ಲಿನ ಮೀಸಲಾತಿ ಗ್ರಾಮೀಣ ಮಹಿಳಾ ರಾಜಕಾರಣ ದಿಕ್ಕನ್ನು ಬದಲಿಸಿದೆಯೇ?

೫. ಗ್ರಾಮೀಣ ಹಾಗೂ ನಗರವೆಂಬ ಪ್ರತ್ಯೇಕತೆಯನ್ನು ಹಾದು ಏಕತ್ರವಾಗಿ ಹರಿಯಬಹುದಾದ ಮಹಿಳಾ ರಾಜಕಾರಣ ಪ್ರಜ್ಞೆಯನ್ನು ಗುರುತಿಸಬಹುದೇ?

೬. ಗ್ರಾಮೀಣ ಹಾಗೂ ನಗರ ಪ್ರದೇಶಗಳ ಭಿನ್ನತೆಗೆ ಅನುಗುಣವಾಗಿ ಮಹಿಳಾ ರಾಜಕಾರಣದಲ್ಲಿಯೇ ಭಿನ್ನತೆಯನ್ನು ಕಾಣಬಹುದಾದ ಸಾಧ್ಯತೆ ಇದೆಯೇ?

ಎಂಬ ಪ್ರಶ್ನೆಗಳನ್ನಿಟ್ಟುಕೊಂಡು ಈ ಮಹಾಪ್ರಬಂಧದ ಅಧ್ಯಯನವು ಆರಂಭಗೊಂಡಿದೆ.

## ಅಧ್ಯಯನದ ವ್ಯಾಪ್ತಿ

ಈಗಾಗಲೇ ಪ್ರಸ್ತಾಪಿಸಿದಂತೆ ಮಹಿಳಾ ರಾಜಕಾರಣದ ವ್ಯಾಪ್ತಿಯು ದೇಶಭಾಷೆಗಳ ಎಲ್ಲೆಯನ್ನು ಮೀರಿದ ಜಾಗತಿಕ ಪ್ರಶ್ನೆಯಾಗಿದ್ದರೂ ಪ್ರಸ್ತುತ ಅಧ್ಯಯನವು ಭಾರತೀಯ ರಾಜಕಾರಣವನ್ನು ಗಮನದಲ್ಲಿಟ್ಟುಕೊಂಡದ್ದಾಗಿದೆ. ಪ್ರಸ್ತುತ ಭಾರತವಾದರೋ ಪ್ರಾಚೀನ ನಾಗರೀಕತೆಗಳ ನಾಡುಗಳಲ್ಲಿ ಒಂದಾಗಿದ್ದು, ಗಣಪದ್ಧತಿಯಿಂದ ಹಿಡಿದು ಊಳಿಗಮಾನ್ಯ, ಸಾಮ್ರಾಜ್ಯಶಾಹಿ, ವಸಾಹತುಶಾಹಿ ಇತ್ಯಾದಿಗಳನ್ನು ಹಾದು ಪ್ರಜಾಪ್ರಭುತ್ವದಲ್ಲಿ ನೆಲೆಗೊಂಡಿದೆ. ಮೇಲಿನ ಪ್ರತಿಯೊಂದು ರಾಜಕೀಯ ಪದ್ಧತಿಯೂ ಇಲ್ಲಿನ ಪರಿಸರಕ್ಕೆ ಅಗತ್ಯವಾದ

ಗುಣಲಕ್ಷಣಗಳನ್ನು ಹೊಂದಿ ತನ್ನದೇ ಆದ ಸಾಂಸ್ಕೃತಿಕ ವೈಲಕ್ಷಣಗಳನ್ನು ಪ್ರಕಟಿಸಿದೆ. ಹಾಗಾಗಿ ಇಲ್ಲಿನ ಯಾವುದೇ ರಾಜಕೀಯ ಪದ್ಧತಿಯೂ ಜಗತ್ತಿನ ಇನ್ನಾವುದೇ ಭಾಗದ ಆ ಪದ್ಧತಿಯೊಂದಿಗೆ ಹಲವಾರು ಸಾಮ್ಯಗಳನ್ನು ಹೊಂದುತ್ತಲೇ ತನ್ನದೇ ಆದ ಭಿನ್ನತೆಗಳನ್ನು ಹೊಂದಿದೆ. ಭಾರತದ ಸಂದರ್ಭದಲ್ಲಿ ಜಾತಿಪದ್ಧತಿ ಇದಕ್ಕೆ ಅತ್ಯುತ್ತಮ ಉದಾಹರಣೆ.

ಈ ದೇಶದ ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಲಕ್ಷಣಗಳಲ್ಲಿ ಒಂದಾದ ವರ್ಣಾಶ್ರಮ ವ್ಯವಸ್ಥೆಯು ತಾನು ಆರಂಭಗೊಂಡಂದಿನಿಂದಲೂ ಈ ದೇಶದ ರಾಜಕಾರಣವನ್ನು ಪ್ರಭಾವಿಸುತ್ತ, ನಿಯಂತ್ರಿಸುತ್ತ ಬಂದಿದೆ. ಆ ಕಾರಣಕ್ಕಾಗಿಯೇ ಭಾರತದ ಸಂದರ್ಭದಲ್ಲಿ ಊಳಿಗಮಾನ್ಯ ಪದ್ಧತಿಯಾಗಲಿ, ಸಾಮ್ರಾಜ್ಯಶಾಹಿ, ವಸಾಹತುಸಾಹಿ ತಡೆಗೆ ಪ್ರಜಾಪ್ರಭುತ್ವವಾಗಲಿ ತನ್ನದೇ ಆದ ಭಿನ್ನತೆಗಳನ್ನು ಹೊಂದಿದೆ. ಅನೇಕ ಸಾರಿ ಈ ಭಿನ್ನತೆ ಎಂಬುದು ಸಮಸ್ಯೆಯ ಸ್ವರೂಪವನ್ನೇ ಹೊಂದಿದ್ದಾಗಿದೆ ಕೂಡ. ಹಾಗಾಗಿ ಭಾರತದ ರಾಜಕಾರಣ ಎನ್ನುವಾಗ ಮೊದಲು ಭಾರತ ಸಮಾಜ ಎಂದರೇನು? ಎಂಬೀ ಪ್ರಶ್ನೆಯನ್ನು ಬಿಡಿಸಿಕೊಂಡು ಆ ಮೂಲಕವೇ ಭಾರತದ ರಾಜಕಾರಣದ ಪ್ರಶ್ನೆಗೆ ಕೈಹಾಕಬೇಕಾಗಿದೆ.

ಹಾಗೆ ಆಧುನಿಕ ಭಾರತದ ನಿರ್ಮಾಣದ ಸಂದರ್ಭದಲ್ಲಿ ನಗರೀಕರಣವು ಉಂಟಾದುದಲ್ಲದೆ ನಗರ ಹಾಗೂ ಹಳ್ಳಿಗಳ ನಡುವಿನ ಅಂತರವು ಅಪಾರವಾಯಿತು. ಇದು ಆಧುನಿಕ ಸಂದರ್ಭದ ಸಾಮಾಜಿಕ, ಆರ್ಥಿಕ, ರಾಜಕೀಯ ವ್ಯವಸ್ಥೆಗಳೆಲ್ಲದರ ಮೇಲೆ ಪ್ರಭಾವ ಬೀರುವಂತಾಯಿತು. ಅದನ್ನು ರಾಜಕಾರಣದ ಮೇಲಿನ ಪರಿಣಾಮಗಳನ್ನು ಲಿಂಗಭೇದದ ನೆಲೆಯಲ್ಲಿ ಗ್ರಹಿಸುವುದು ಬಹುಮುಖ್ಯವಾಗುತ್ತದೆ. ಪ್ರಸ್ತುತ ಅಧ್ಯಯನವು ಭಾರತವನ್ನೊಂದು ಲಿಂಗಭೇದ ವ್ಯವಸ್ಥೆ ಆಧಾರದ ಸಮಾಜವಾಗಿ ಮೂಲಭೂತವಾಗಿ ಗುರುತಿಸಿಕೊಳ್ಳುತ್ತಲೇ, ಅದಕ್ಕೆ ಪೂರಕವಾಗಿ ಭಾರತವು ಹಳ್ಳಿ ಹಾಗೂ ನಗರಗಳೆಂಬ ವ್ಯತ್ಯಯವನ್ನು ಸಮಸ್ಯೆಯ ಸ್ವರೂಪದಲ್ಲಿಯೇ ಹೊಂದಿದ್ದಾಗಿದೆ ಎಂಬುದನ್ನು ಗುರುತಿಸಿಕೊಳ್ಳುತ್ತದೆ. ಭಾರತದ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ತಮ್ಮ ರಾಜಕೀಯ ಹಕ್ಕುಗಳಿಂದ ವಂಚಿತರಾಗಿದ್ದಾರೆ ಎಂಬ ತಾತ್ವಿಕತೆಗೆ ಸಂವಾದಿಯಾಗಿ ಭಾರತದಲ್ಲಿನ ಶೇ. ೬೦ ರಷ್ಟು ಜನ ಗ್ರಾಮೀಣ ಪ್ರದೇಶದವರಾಗಿದ್ದಾರೆ. ಇಲ್ಲಿನ ಸಂಪನ್ಮೂಲದ ಉತ್ಪಾದನೆಯಲ್ಲಿ ಶೇ. ೬೦ ರಷ್ಟು ಶ್ರಮ ಇವರದಾಗಿರುತ್ತದೆ. ಆದರೆ ಅವಕಾಶ ಹಾಗೂ ಅಧಿಕಾರದ ಹಂಚಿಕೆಯ ಪ್ರಶ್ನೆ ಬಂದಾಗ ಶೇ. ೧೦ನ್ನು ದಾಟುವುದಿಲ್ಲ ಎಂಬ ಅಂಶವನ್ನು ಪ್ರಮುಖವಾಗಿ ಗಮನಿಸುತ್ತದೆ. ಇದಕ್ಕೆ ಪರ್ಯಾಯವಾಗಿ ಅವಕಾಶ, ಸೌಲಭ್ಯ ಅಧಿಕಾರ ಎಲ್ಲವೂ ನಗರಗಳಲ್ಲಿ ಕೇಂದ್ರೀಕೃತವಾಗಿದ್ದು, ಅದು ನಿರಂತರವಾಗಿ ಗ್ರಾಮೀಣ ಜನರ ವಲಸೆಯನ್ನು ಸೃಷ್ಟಿಸುತ್ತದೆ. ಪರಿಣಾಮವಾಗಿ ನಗರಗಳು ಇನ್ನೊಂದು ಬಗೆಯಲ್ಲಿ (Over-urbanisation) ಬೃಹತ್ ಸಮಸ್ಯೆಯಾಗಿ ಪರಿವರ್ತಿತವಾಗುತ್ತಿವೆ. ಹೀಗೆ ನಗರ ಹಳ್ಳಿಗಳಲ್ಲಿನ ಅಸಮಾನ ಹಂಚಿಕೆಯ ಫಲವಾಗಿ ಅವೆರಡೂ ಪರಸ್ಪರ ಪೈಪೋಟಿಯ ಮೇಲೆ ತಮ್ಮ ಸಮಸ್ಯೆಗಳನ್ನು ಇನ್ನಷ್ಟು ಬಲಪಡಿಸಿಕೊಳ್ಳುತ್ತಿವೆ. ಇತ್ತ ಹಳ್ಳಿಗಳು ಬಂಡವಾಳವಿಲ್ಲದ, ಕುಶಲಕರ್ಮಿಗಳಿಲ್ಲದೆ ಬಡವಾಗುತ್ತಿದ್ದು ಹಸಿವು, ಅನಕ್ಷರತೆ ಅಜ್ಞಾನ, ದರಿದ್ರ,

ಅಪೌಷ್ಠಿಕತೆಗಳನ್ನು ಸೂಚಿಸುತ್ತಿದೆ. ನಗರಗಳಾದರೋ ಬೃಹತ್ ಬಂಡವಾಳದ ಮೂಲಕ ಯಾಂತ್ರೀಕರಣ ಹಾಗೂ ನಿರುದ್ಯೋಗಗಳನ್ನು ಸೃಷ್ಟಿಸುತ್ತ ದಿನೇ ದಿನೇ ವ್ರಣವಾಗುತ್ತಿವೆ. ಸಮಸ್ಯೆಗಳ ಆಗರವಾಗುವುದಲ್ಲದೆ ಅವು ನಗರ ಹಳ್ಳಿಗಳೆರಡರ ಸಂದರ್ಭದಲ್ಲಿ ಒಂದು ರೀತಿಯಲ್ಲಿ ಮಹಿಳೀಕರಣಗೊಳ್ಳುತ್ತಿದೆ.

ಮಹಿಳೆ ಇನ್ನೊಂದು ಹೆಸರೇ ಸಮಸ್ಯೆ ಎಂಬರ್ಥದಲ್ಲಿ ಬೆಸೆದುಕೊಳ್ಳುತ್ತಿವೆ. ಇದರಿಂದ ಮಹಿಳೆ ಹೆಚ್ಚು ಹೆಚ್ಚು ಒತ್ತಡಕ್ಕೆ ಒಳಗಾಗಿ ಅಸಾಯಕಳಾಗುತ್ತಾಳೆ. ಸಾರ್ವಜನಿಕ ಜೀವನದಲ್ಲಿ ಪ್ರವೇಶಿಸಲಾರದೇ, ಪ್ರವೇಶಿಸಿದರೂ ನಗಣ್ಯಳಾಗಿರುವುದರಿಂದ ಅವಳ ಬೆಳವಣಿಗೆ ಕುಂಠಿತವಾಗಿ ದಾರಿದ್ರ್ಯ ತಾನಾಗಿಯೇ ಆವರಿಸಿಕೊಂಡು ಮಹಿಳೆ ಬಡತನ ಒಂದೇ ಎಂಬ ಅರ್ಥಕ್ಕೆ ದಾರಿಮಾಡಿಕೊಡುತ್ತದೆ. ಇಂತಹ ಸಮಸ್ಯೆಗಳೊಂದಿಗೆ ಉಳಿದ ಸಮಸ್ಯೆಗಳೂ ಹುಟ್ಟಿಕೊಂಡು, ಒಟ್ಟು ವ್ಯವಸ್ಥೆಯಲ್ಲಿ ಸುಧಾರಣೆ ತರುವ ವಿಚಾರ ಹೆಚ್ಚಿನ ಭಿನ್ನತೆಗೆ ಕಾರಣವಾಗುತ್ತದೆ.

ಹಾಗಾಗಿ ದೇಶದ ಸುಧಾರಣೆ ಆದ್ಯತೆಯಲ್ಲಿ ಹಳ್ಳಿ ನಗರಗಳಲ್ಲಿ ಯಾವುದನ್ನು ಆರಿಸಬೇಕು ಎಂಬುದು ತೊಡಕಿನ ಪ್ರಶ್ನೆಯಾಗಿದೆ. ಸಾಮಾಜಿಕ ವ್ಯವಸ್ಥೆಯ ಚಿಂತನೆಯು, ಘೋಷಣೆಯ ಹಂತದಲ್ಲಿ ಹಳ್ಳಿಗಳನ್ನು; ಪ್ರಯೋಗದ ಹಂತದಲ್ಲಿ ನಗರಗಳನ್ನು ಆಯ್ದುಕೊಂಡು ತಾರತಮ್ಯಗಳನ್ನು ಬಲಪಡಿಸುತ್ತಿವೆ ಎಂಬ ಕೂಗು ಕೇಳಿಬರುತ್ತಿದೆ.

ಮಹಿಳಾ ರಾಜಕಾರಣದ ಪ್ರಶ್ನೆ ಸಮಾಜ ರಚನೆಯ ಆರಂಭದಿಂದಲೇ ಕೈಗೆತ್ತಿಕೊಳ್ಳಬಹುದು. ಆದರೆ ಅಂತಹ ಅಧ್ಯಯನವನ್ನು ಬಳ್ಳಾರಿ ಜಿಲ್ಲೆ ಎನ್ನುವ ಪ್ರದೇಶಕ್ಕೆ ನಿರ್ದಿಷ್ಟಗೊಳಿಸಿ ಮಾತನಾಡುವುದು ಹಲವು ಸಮಸ್ಯೆಗಳನ್ನು ಎದುರಿಸುತ್ತದೆ. ಹಾಗಾಗಿ ಒಟ್ಟಾರೆಯಾಗಿ ಭಾರತ ರಾಜಕಾರಣದಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆ ಎಂಥದ್ದು ಎಂಬ ನೆಲೆಯಲ್ಲಿ ಕೆಲವು ಮೀಮಾಂಸೆಗಳನ್ನು ಸಿದ್ಧಪಡಿಸಿಕೊಂಡು ಅದರ ಹಿನ್ನೆಲೆಯಲ್ಲಿ ಆಧುನಿಕ ಸಂಘರ್ಷಕ್ಕೆ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

ವಸಾಹತು ಆಳ್ವಿಕೆ, ಆಧುನಿಕ ಶಿಕ್ಷಣ, ಮಹಿಳಾ ಪ್ರಜ್ಞೆಯ ಜಾಗೃತಿ, ಪ್ರಜಾಪ್ರಭುತ್ವದಂತಹ ಆಧುನಿಕ ರಾಜಕೀಯ ನಿಲುವು ಇವುಗಳ ಹಿನ್ನೆಲೆಯಲ್ಲಿ ರೂಪುಗೊಂಡ ಸ್ವತಂತ್ರ ಭಾರತದ ಸಂವಿಧಾನ ಸಮಾನತೆಯ ನಿಲುವಿನಡಿಯಲ್ಲಿ ಸ್ವಾತಂತ್ರ್ಯೋತ್ತರ ಕಾಲದ ಮಹಿಳಾ ರಾಜಕಾರಣದ ಚರ್ಚೆಯನ್ನು ಆರಂಭಿಸಲಾಗಿದೆ. ಈ ಬಗೆಯ ಪ್ರವೇಶ ಹಾಗೂ ಕಾಲ ನಿರ್ದಿಷ್ಟತೆಗಳು ಸೂಕ್ಷ್ಮ ಅಧ್ಯಯನಕ್ಕೆ ಅತ್ಯಂತ ಉಪಯುಕ್ತವಾಗಿಯೇ ಹೊರತು ಮಿತಿಯಾಗುವುದಿಲ್ಲ.

## ಅಧ್ಯಯನ ಕ್ಷೇತ್ರದ ಮಾಹಿತಿ

ಪ್ರಸ್ತುತ ಅಧ್ಯಯನವು ಭಾರತದ ರಾಜಕಾರಣದ ಸಂದರ್ಭದಲ್ಲಿ ಮಹಿಳಾ ರಾಜಕಾರಣದ ಸಾಧ್ಯತೆ ಸಮಸ್ಯೆಗಳನ್ನು ಕುರಿತದ್ದಾದರೂ ಅದು ಭಾರತದ ರಾಜಕಾರಣದ ಪ್ರಾತಿನಿಧಿಕ ಘಟಕವಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ದುಕೊಂಡಿದೆ. ಈ ಜಿಲ್ಲೆ ಕುರಿತಾದ ಕೆಲವು ಭೌಗೋಳಿಕ ಸ್ವರೂಪಗಳನ್ನು ತಿಳಿಯುವುದು ಉಚಿತ. ಭೌಗೋಳಿಕ ವೈಶಿಷ್ಟ್ಯದ ಜೊತೆಗೆ, ಐತಿಹಾಸಿಕವಾಗಿ ಮೆರೆದ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿಯನ್ನು ತನ್ನೊಡಲಲ್ಲಿ ಇರಿಸಿಕೊಂಡಿದೆ. ಹೇರಳವಾಗಿ ಸಿಗುವ ಕಬ್ಬಿಣದ ಅದಿರು, ಕೈಗಾರಿಕಾ ಸಂಪನ್ಮೂಲ ಹಾಗೂ ಕೃಷಿ ಸಂಪನ್ಮೂಲಗಳಿಂದ ಕೂಡಿದೆ. ಆದರೂ ಈ ಪ್ರದೇಶವನ್ನು ಇಂದು ಕರ್ನಾಟಕದ ಹಿಂದುಳಿದ ಜಿಲ್ಲೆಗಳಲ್ಲಿ ಒಂದೆಂದು ಗುರುತಿಸಲಾಗಿದೆ.

ಇದಕ್ಕೂ ಪೂರ್ವ ಈ ಬಳ್ಳಾರಿಯು ಒಂದು ಜಿಲ್ಲೆಯಾಗಿ ರೂಪುಗೊಂಡ ಕುತೂಹಲಕಾರಿಯಾದ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದರೆ ವಿಜಯನಗರ ಸಾಮ್ರಾಜ್ಯದ ಅವಧಿ ಮಧ್ಯಕಾಲೀನ ಚರಿತ್ರೆಯಲ್ಲಿ ನಿರ್ಣಾಯಕ ಕಾಲಘಟ್ಟವಾಗಿದೆಯೆನ್ನಬಹುದು. ಈ ಕುರಿತು ಸಂಶೋಧನೆಗಳು, ಹೊಸ ಸಂಗತಿಗಳು ಬೆಳಕಿಗೆ ಬರಲು ಕಾರಣವಾದವು. ವಿಜಯನಗರದ ತರುವಾಯ ಈ ಜಿಲ್ಲೆಯ ಎಲ್ಲ ಕ್ಷೇತ್ರಗಳಿಗೆ ಹೊಸತಿರುವುದು ನೀಡಿದ ಇನ್ನೊಂದು ಚಾರಿತ್ರಿಕ ಸಂದರ್ಭವೆಂದರೆ ಆಂಗ್ಲರ ಆಡಳಿತಾವಧಿ ಎಂದರೆ ತಪ್ಪಾಗಲಾರದು. ಮೊದಲು, ಮಧ್ಯಕಾಲೀನ ಮುಸ್ಲಿಮರ ಅರಬ್ಬರ ಆಕ್ರಮಣದ ಕಾಲಕ್ಕೆ ನಿಂತಾಗ ಬಳ್ಳಾರಿ ಪ್ರದೇಶವನ್ನು ಬಿಜಾಪುರ ಸುಲ್ತಾನನನ್ನು ಕ್ರಿ.ಶ. ೧೬೪೦ರಲ್ಲಿ, ಹೈದರಾಲಿಯು ೧೭೬೮ರಲ್ಲಿ ಟಿಪ್ಪುಸುಲ್ತಾನನು ೧೭೮೬ರಲ್ಲಿ ಆಕ್ರಮಿಸಿಕೊಂಡು ಆಳ್ವಿಕೆ ನಡೆಸಿದ್ದರೆನ್ನುವುದು ಚರಿತ್ರೆಯಿಂದ ತಿಳಿದುಬರುವ ಸಂಗತಿ. ೧೭೯೯ ರಲ್ಲಿ ಹೈದರಾಬಾದ್ ನಿಜಾಮನು ಬ್ರಿಟಿಷ್‌ರ ಈಸ್ಟ್ ಇಂಡಿಯಾ ಕಂಪನಿ ಸಹಾಯದಿಂದ ವಶಪಡಿಸಿಕೊಂಡ. ಅಂತಿಮವಾಗಿ ಕ್ರಿ.ಶ. ೧೮೦೦ ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯು ಬ್ರಿಟಿಷರ ನೇರ ಆಳ್ವಿಕೆಗೊಳಪಟ್ಟಿತು. ಆಗ ತಾಲೂಕುಗಳ ಸಂಖ್ಯೆ ೧೮. ಆದರೆ ೧೮೦೮ ರಲ್ಲಿ ೧೫ ತಾಲೂಕುಗಳಿಗೆ ಸೀಮಿತವಾಯಿತು. ಈಗಿನ ಕರ್ನಾಟಕ-ಆಂಧ್ರದ ಗಡಿಜಿಲ್ಲೆಗಳು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಗೆ ಸೇರಿದವಾಗಿದ್ದವು. ಅವೆಂದರೆ ೧. ಧರ್ಮಾವರಂ ೨. ಗೂಟಿ (ಗುತ್ತಿ) ೩. ತಾಡಪತ್ರಿ ೪. ಪೆನುಗೊಂಡ ೫. ಹಿಂದೂಪುರ ೬. ಮಡಕಶಿರ ೭. ಅನಂತಪುರ ೮. ಬಳ್ಳಾರಿ ೯. ಹೊಸಪೇಟೆ ೧೦. ಕೂಡ್ಲಿಗಿ ೧೧. ಹಡಗಲಿ ೧೨. ಹರಪನಹಳ್ಳಿ ೧೩. ರಾಯದುರ್ಗ ೧೪. ಆಲೂರು ಮತ್ತು ೧೫. ಆದವಾನಿ

ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ಈಗಿನ ಬಳ್ಳಾರಿ ಜಿಲ್ಲೆಯನ್ನೊಳಗೊಂಡಂತೆ ಆಂಧ್ರದ ಅನಂತಪುರ, ಕರ್ನೂಲು ಹಾಗೂ ಕಡಪಗಳನ್ನು ದತ್ತಿ ಮಂಡಲಗಳೆಂದು ಘೋಷಿಸಿ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿಸಲಾಯಿತು. ಆಗ ಈ ಜಿಲ್ಲೆಗಳನ್ನು ಸೀಡೆಡ್ ಡಿಸ್ಟ್ರಿಕ್ಸ್ ಎಂದು ವಿಂಗಡಿಸಿದರು. ಇದರ ಭೂಪಟವನ್ನು ಈ ಮುಂದೆ ನೋಡಬಹುದು.




ಕ್ರಿ.ಶ. ೧೮೮೨ ರಲ್ಲಿ ಬಳ್ಳಾರಿ ಮತ್ತು ಅನಂತಪುರಗಳನ್ನು ಎರಡು ಜಿಲ್ಲೆಗಳಾಗಿ ವಿಂಗಡಿಸಲಾಯಿತು. ಮೇಲಿನ ಪಟ್ಟಿಯಲ್ಲಿನ ಮೊದಲ ಏಳು ತಾಲೂಕುಗಳನ್ನು ಅನಂತಪುರ ಜಿಲ್ಲೆಗೂ ಉಳಿದ ಎಂಟು ತಾಲೂಕು ಗಳನ್ನು ಸೇರಿಸಿ ಬಳ್ಳಾರಿ ಜಿಲ್ಲೆಯಾಗಿ ೧೮೮೨ರಲ್ಲಿ ಅಧಿಕೃತವಾಗಿ ನಿರ್ಮಾಣವಾಯಿತು. ಇದರೊಂದಿಗೆ ೧೯೧೦ ರಲ್ಲಿ ಸಿರುಗುಪ್ಪ ತಾಲೂಕು ಅಸ್ತಿತ್ವಕ್ಕೆ ಬಂತು. ಆಗ ಜಿಲ್ಲೆಗಳ ಸಂಖ್ಯೆ ಒಂಭತ್ತಕ್ಕೇರಿತು. ಸ್ವತಂತ್ರ ದೇಶೀಯ ರಾಜ ಸಂಸ್ಥಾನವಾಗಿದ್ದ ಸಂಡೂರು ೧೯೪೮ರಲ್ಲಿ ಭಾರತ ಗಣ ರಾಜ್ಯದಲ್ಲಿ ವಿಲೀನಗೊಂಡು, ಪ್ರತ್ಯೇಕ ಸ್ಥಾನ ಪಡೆಯಿತು. ಹೀಗಾಗಿ ಬಳ್ಳಾರಿ ಜಿಲ್ಲೆಗೆ ಒಟ್ಟು ಹತ್ತು ತಾಲೂಕುಗಳನ್ನು ಸೇರಿಸಲಾಗಿತ್ತು. ೧೯೫೩ರ ಹೊತ್ತಿಗೆ ಭಾಷಾವಾರು ರಾಜ್ಯವಿಂಗಡಣೆಯೊಂದಿಗೆ ಆಲೂರು, ಆದವಾನಿ ಮತ್ತು ರಾಯದುರ್ಗಗಳನ್ನು ಆಂಧ್ರಪ್ರದೇಶಕ್ಕೆ ವರ್ಗಾವಣೆಯಾಗುವುದರೊಂದಿಗೆ ಏಳು ತಾಲೂಕುಗಳು ಕೊನೆಗುಳಿದವು.

ತುಂಗಭದ್ರಾ ನೀರಾವರಿ ಯೋಜನೆ ನಿರ್ಮಾಣ ಹಂತದಲ್ಲಿ ೧೯೬೦ ರಲ್ಲಿ ರಚಿಸಲಾಗಿದ್ದ ಮಲ್ಲಾಪುರಂ ಉಪತಾಲೂಕನ್ನು ರದ್ದುಗೊಳಿಸಿ ಹಗರಿಬೊಮ್ಮನಹಳ್ಳಿಯನ್ನು ರಚಿಸಲಾಯಿತು. ಬಳ್ಳಾರಿ ಜಿಲ್ಲೆಯ ೧೯೧೧ರ ನಕಾಶೆಯು ಎಂಟು ತಾಲೂಕುಗಳನ್ನು ಒಳಗೊಂಡಂತೆ ಹೀಗಿದೆ.

### ೮ ತಾಲೂಕುಗಳನ್ನೊಳಗೊಂಡ ಬಳ್ಳಾರಿ ಭೂಪಟ




ಪುನಃ ೧೯೯೭ರಲ್ಲಿ ರಾಜ್ಯದಲ್ಲಾದ ಜಿಲ್ಲೆಗಳ ಮರುವಿಂಗಡಣೆಯಿಂದಾಗಿ ಬಳ್ಳಾರಿಗೆ ಸೇರಿದ ಹರಪನಹಳ್ಳಿ ತಾಲೂಕನ್ನು ಹೊಸದಾಗಿ ರಚಿತಗೊಂಡ ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಅಂತಿಮವಾಗಿ ೨೦೦೧ ರಲ್ಲಿಯಂತೆ ಈಗಿನ ಏಳು ತಾಲೂಕುಗಳ ಬಳ್ಳಾರಿಯ ರಾಜಕೀಯ ಭೂಪಟ ಹೀಗಿದೆ.

### ಹರಪನಹಳ್ಳಿ ಹೊರತುಪಡಿಸಿ ಬಳ್ಳಾರಿ ಭೂಪಟ



ಈ ಜಿಲ್ಲೆಗೆ ಸಂಬಂಧಿಸಿದ ಕೆಲವು ಪ್ರಾಥಮಿಕ ಸಂಗತಿಗಳನ್ನು ಅವಲೋಕಿಸುವುದು ಅಧ್ಯಯನದ ದೃಷ್ಟಿಯಿಂದ ಪ್ರಯೋಜನಕಾರಿಯಾಗುವುದು. ೨೦೦೦ರ ಜೂನ್ ೨ ಮತ್ತು ೬ ರಂದು ನಡೆದ ಚುನಾವಣೆಯಲ್ಲಿದ್ದಂತೆ ರಾಜಕೀಯ ಸಾಂಸ್ಥಿಕ ರಚನೆಯಲ್ಲಿ ಎರಡು ನಗರಸಭೆಗಳಿವೆ, ಹೊಸಪೇಟೆ ಮತ್ತು ಬಳ್ಳಾರಿ ನಗರಗಳು. ಒಂದು ಪುರಸಭೆ ಕಂಪ್ಲಿಯಲ್ಲಿದೆ. ಏಳು ಪಟ್ಟಣ ಪಂಚಾಯಿತಿಗಳಿದ್ದು, ಅವುಗಳೆಂದರೆ ಸಿರುಗುಪ್ಪ, ಕೊಟ್ಟೂರು, ಕೂಡ್ಲಿಗಿ, ಹಡಗಲಿ, ಕಮಲಾಪುರ, ತೆಕ್ಕಲಕೋಟೆ ಹಾಗೂ ಸಂಡೂರು.

೧೯೯೧ ರ ಜನಗಣತಿಯ ಪ್ರಕಾರ ೩೨ ಜಿಲ್ಲಾ ಪಂಚಾಯಿತಿ, ೧೧೨ ತಾಲೂಕು ಪಂಚಾಯತಿ ಹಾಗೂ ೧೮೫ ಗ್ರಾಮಪಂಚಾಯತಿಯ ಕ್ಷೇತ್ರಗಳಿವೆ. ಜಿಲ್ಲೆಯ ಒಟ್ಟು ಜನಸಂಖ್ಯೆ ೧೬.೫೬ ಲಕ್ಷ, ಇದರಲ್ಲಿ ಪುರುಷರ ಮತ್ತು ಮಹಿಳೆಯರ ಸಂಖ್ಯೆ ಹೆಚ್ಚು ಕಡಿಮೆ ಸಮಾನವಾಗಿದೆ. ಪುರುಷರು ೮.೪೨ ಲಕ್ಷದಷ್ಟಿದ್ದರೆ, ಮಹಿಳೆಯರು ೮.೧೪ ಲಕ್ಷದಷ್ಟಿದ್ದಾರೆ. ಗ್ರಾಮಾಂತರ ಪ್ರದೇಶದ ಜನಸಂಖ್ಯೆ ನಗರ ಪ್ರದೇಶಗಳ ಜನಸಂಖ್ಯೆಗಿಂತ ಅಧಿಕವಾಗಿಯೇ ಇದೆ. ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆ ೧೧.೨೬ ಲಕ್ಷ ಅಂದರೆ ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ. ೬೮ ರಷ್ಟಿದೆ. ಸ್ತ್ರೀ-ಪುರುಷರ ಜನಸಂಖ್ಯೆಯ ಸರಾಸರಿ ಪ್ರಮಾಣ ರಾಜ್ಯದಲ್ಲಿರುವಂತೆ ಜಿಲ್ಲೆಯಲ್ಲಿ ಸ್ವಲ್ಪ ಏರಿಕೆಯಿದೆ. ಪ್ರತಿ ಸಾವಿರ ಪುರುಷರಿಗೆ ೯೬೦ ಸ್ತ್ರೀಯರು ರಾಜ್ಯದಲ್ಲಿದ್ದರೆ, ಬಳ್ಳಾರಿ ಜಿಲ್ಲೆಯಲ್ಲಿ ೯೬೬ ಸ್ತ್ರೀಯರಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಸಂಖ್ಯೆ ಒಟ್ಟು ೪.೫೯ ಲಕ್ಷವಿದ್ದು (ಶೇ.೨೮ರಷ್ಟು) ಅದರಲ್ಲಿ ಕ್ರಮವಾಗಿ ೩.೧೧ ಲಕ್ಷ ಮತ್ತು ೧.೪೮ ಲಕ್ಷದಷ್ಟು ಇದ್ದಾರೆ.

ಭಾರತದಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಅತ್ಯಂತ ಕಡಿಮೆ. ಪ್ರತಿ ನೂರು ಮಹಿಳೆಯರ ಪೈಕಿ ಕೇವಲ ಇಪ್ಪತ್ತೈದು ಮಂದಿಗೆ ಮಾತ್ರ ಓದು ಬರಹ ಗೊತ್ತು (ಅಕ್ಷರಸ್ಥ) ಎಂದು ಅಂದಾಜು ಮಾಡಲಾಗಿದೆ. ಆದರೆ ಗಂಡಸರಲ್ಲಿ ಪ್ರತಿನೂರು ಮಂದಿಗೆ ಐವತ್ಮೂರು ಜನ ಅಕ್ಷರಸ್ಥರು. ಹಳ್ಳಿಗಳಲ್ಲಿ ಪ್ರತಿ ನೂರು ಮಹಿಳೆಯರ ಪೈಕಿ ಕೇವಲ ಹದಿನೆಂಟು ಮಂದಿ ಮಾತ್ರ ಓದು ಬರಹ ಬಲ್ಲವರು. ಇನ್ನು ಕಲಿತ ಮಹಿಳೆಯರೆಲ್ಲ ಬಹುತೇಕ ಜನ ನಗರಗಳಲ್ಲಿರುವವರೇ. ದೇಶದ ಅರ್ಧದಷ್ಟು ಜಿಲ್ಲೆಗಳಲ್ಲಿ ಪ್ರತಿ ನೂರು ಮಹಿಳೆಯರ ಪೈಕಿ ೧೨ ಜನ ಮಹಿಳೆಯರು ಓದು ಬರಹ ಬಲ್ಲವರು. ಪರಿಶಿಷ್ಟ ಜಾತಿಯ ಮಹಿಳೆಯರಲ್ಲಿ ಪ್ರತಿ ನೂರಕ್ಕೆ ಐದು ಮಂದಿಗೆ ಮಾತ್ರ ಓದು ಬರಹ ಗೊತ್ತಿರುವುದು. ಬಳ್ಳಾರಿ ಜಿಲ್ಲೆಯ ಸ್ಥಿತಿಯೂ ಈ ದೇಶದ ಒಟ್ಟು ಸ್ಥಿತಿಯದಕ್ಕಿಂತ ಭಿನ್ನವಾಗಿಲ್ಲ. ಆದರೂ ಜಿಲ್ಲೆಯ ಒಟ್ಟು ಸಾಕ್ಷರತೆ ಪ್ರಮಾಣ ೧೯೯೬ರಲ್ಲಿರುವಂತೆ ಶೇ. ೫೧.೪೫ರಷ್ಟಿದೆ. ಇದರಲ್ಲಿ ಮಹಿಳಾ ಸಾಕ್ಷರತಾ ದರ ಅತಿ ಕಡಿಮೆ. ಅಂದರೆ ಶೇ ೩೮.೧೦ ರಷ್ಟಿದ್ದರೆ, ಪುರುಷ ಸಾಕ್ಷರತಾ ದರ ಇದರ ದುಪ್ಪಟ್ಟು ಅಂದರೆ ಶೇ. ೬೪.೩೦ ರಷ್ಟಿದೆ. ಹೀಗಾಗಿ ಪುರುಷರು ಸಹಜವಾಗಿ ಅಧಿಕಾರ ರಾಜಕಾರಣದೊಂದಿಗೆ ಉಳಿದ ಕ್ಷೇತ್ರಗಳಲ್ಲಿ ತಮ್ಮ ಹಿಡಿತವನ್ನು ಸಾಧಿಸಿದ್ದಾರೆ. ಅನಕ್ಷರಸ್ಥ ವಯಸ್ಕ ಮಹಿಳೆಯರು ಶೇ. ೭೪.೦೬ ರಷ್ಟಿದ್ದರೆ ಪುರುಷ (ವಯಸ್ಕ) ಅನಕ್ಷರಸ್ಥರು ಶೇ. ೫೮.೯೬ ರಂತಿದ್ದಾರೆ.

ಕರ್ನಾಟಕದ ಹಿಂದುಳಿದ ಜಿಲ್ಲೆಗಳಲ್ಲಿ ಒಂದೆಂದು ಗುರುತಿಸಲಾಗಿರುವ ಪ್ರಸ್ತುತ ಜಿಲ್ಲೆಯು ೧೯೯೯ರ ಚುನಾವಣೆಯ ಸಂದರ್ಭದಲ್ಲಿ ಇಡೀ ದೇಶವನ್ನೇ ತನ್ನತ್ತ ಕೇಂದ್ರೀಕರಿಸಿಕೊಂಡು ಎರಡನೇ 'ಅಮೇಥಿ'ಯಾಗಿ ವಿಜೃಂಭಿಸಿತ್ತು. ಈಗಿನ ಆಡಳಿತ ಹಾಗೂ ವಿರೋಧ ಪಕ್ಷಗಳ ನಡುವಿನ ಹಣಾಹಣಿ ಕ್ಷೇತ್ರವಾಗಿದ್ದಲ್ಲದೆ ಅದು ಇಬ್ಬರು ಮಹಿಳೆಯರ ಹಣಾಹಣಿಯಾಗಿತ್ತು. ಕಾಂಗ್ರೆಸ್ ಪಕ್ಷದ ಭದ್ರಕೋಟೆಯೆಂದೇ ಕರೆಯಲಾಗುವ ಇಲ್ಲಿ ಶ್ರೀಮತಿ ಇಂದಿರಾಗಾಂಧಿಯ ಸೊಸೆ ಶ್ರೀಮತಿ ಸೋನಿಯಾಗಾಂಧಿ ತಮ್ಮ ಅಭಿವೃದ್ಧಿ ಕಾರ್ಯಕ್ರಮದ ಸೋನಿಯಾ ಪ್ಯಾಕೇಜ್‌ಗಳ ಮೂಲಕ ಚುನಾವಣೆ ಎದುರಿಸಿದರೆ, ಭಾರತೀಯ ಸಂಸ್ಕೃತಿಯ ಪ್ರತೀಕ ಭಾರತೀಯ ನಾರಿ ಭಾರತೀಯ ಜನತಾ ಪಕ್ಷದ ಅಭ್ಯರ್ಥಿ ಶ್ರೀಮತಿ ಸುಷ್ಮಾಸ್ವರಾಜ್ ಹರಿಸಿಣ ಕುಂಕುಮ ಬಗೆಗಿನ ಸೋಗಿಲು ಮುಂತಾದ ಸಾಂಸ್ಕೃತಿಕ ಮೌಲ್ಯಗಳ ಮೂಲಕ ಮನೆಮನೆಯ ಬಾಗಿಲು ತಟ್ಟಿದ್ದರು. ಆದರ್ಶ ನಾರಿಯಾಗಿ ಈ ಜಿಲ್ಲೆಯ ಮನೆಮಗಳಾಗಿ ತಾನು ಮನೆಬಾಗಿಲಿಗೆ ಮತಯಾಚಿಸಿದ ಶ್ರೀಮತಿ ಸುಷ್ಮಾಸ್ವರಾಜ್‌ರಿಗೆ ಪೈಪೋಟಿಯಾಗಿ ಸೋನಿಯಾ ತಮ್ಮನ್ನು ಬಳ್ಳಾರಿಯ ಮನೆಸೊಸೆಯಂತಿರಲು, ಈ ಮನೆಯ (ಜಿಲ್ಲೆಯ) ನಿಜವಾದ ವಾರಸುದಾರಳು ಎಂಬುದಾಗಿಯೂ ಪ್ರಚಾರ ಕೈಗೊಂಡಿದ್ದರು. ಇಬ್ಬರು ಮಹಿಳೆಯರ ಈ ಹೋರಾಟದಲ್ಲಿ ಮಹಿಳಾ ರಾಜಕಾರಣ ಅಥವಾ ಪಕ್ಷ ರಾಜಕಾರಣ ಇವೆರಡರಲ್ಲಿ ಯಾವುದು ಪ್ರಬಲವಾಗಿತ್ತು, ಕಲ್ಪನೆಗೆ ನಿಲುಕುವ ಸತ್ಯವಾಗಿತ್ತು. ಹಾಗಿದ್ದೂ ಈ ಹಣಾಹಣಿಯನ್ನು ನೆಪವಾಗಿಟ್ಟುಕೊಂಡು ಇಲ್ಲಿನ ಮಹಿಳಾ ರಾಜಕಾರಣದ ಸಾಧ್ಯತೆಯನ್ನು ಹುಡುಕುವುದು ಪ್ರಧಾನ ಅಂಶವಾಗಿದೆ.

ಮೇಲಿನ ಅಂಶಗಳನ್ನು ಗಮನಿಸುವುದಾದರೆ ಪ್ರಸ್ತುತ ಅಧ್ಯಯನವು ತನ್ನ ವ್ಯಾಪ್ತಿಯನ್ನು ಒಂದು ಹಿಂದುಳಿದ ಜಿಲ್ಲೆಗೆ ಕೇಂದ್ರೀಕರಿಸಿಕೊಂಡಿದ್ದರೂ ಅದೊಂದು ಕೊರತೆಯಂತೆ ಭಾಸವಾಗಲಾರದು. ಹಿಂದುಳಿದ ಪ್ರದೇಶವಾದ್ದರಿಂದಲೇ ಪಕ್ಷ ರಾಜಕಾರಣದ ಪ್ರಭಾವವು ಇಲ್ಲಿ ಹೆಚ್ಚಾಗಿರುವುದನ್ನು ೧೯೯೯ರ ಚುನಾವಣಾ ಸಂದರ್ಭ ಮನದಟ್ಟಾಗಿಸುತ್ತದೆ. ವಸಾಹತು ಆಳ್ವಿಕೆಯಿಂದ ಹಿಡಿದು ಇತ್ತೀಚಿನವರೆಗೂ ಈ ಜಿಲ್ಲೆಯ ಭೌಗೋಳಿಕ ವ್ಯಾಪ್ತಿ ಬದಲಾಗುತ್ತಲೇ ಇರುವುದು ರಾಜಕಾರಣದ ವಿವಿಧ ಆಸಕ್ತಿಗಳನ್ನು ಪ್ರತಿನಿಧಿಸುತ್ತದೆ. ಈ ಆಸಕ್ತಿಯು ಈ ಜಿಲ್ಲೆಯ ದ್ವಿಭಾಷಿಕತೆಯೊಂದಿಗೆ ನೈಸರ್ಗಿಕ ಸಂಪತ್ತನ್ನೂ ಅವಲಂಬಿಸಿದೆ. ಬಳ್ಳಾರಿ ಜಿಲ್ಲೆ ಪ್ರಾಚೀನ ಕಾಲದಿಂದಲೂ ಹೊಂದಿರುವ ಸಾಂಸ್ಕೃತಿಕ ಹಿರಿಮೆ, ನೈಸರ್ಗಿಕ ಸಂಪತ್ತು ಆಧುನಿಕ ಸಂದರ್ಭದಲ್ಲಿ ಪ್ರವಾಸೋದ್ಯಮ, ಗಣಿಗಾರಿಕೆ ಆಧಾರಿತ ಕೈಗಾರಿಕೆ ಇತ್ಯಾದಿ ಹಲವು ಬೆಳವಣಿಗೆಗೆ ಕಾರಣವಾಗಿದ್ದರೂ ಅಭಿವೃದ್ಧಿಯ ದೃಷ್ಟಿಯಿಂದ ಮಾತ್ರ ಹಿಂದುಳಿದ ಪ್ರದೇಶವಾಗಿಯೇ ಉಳಿದಿರುವುದೇಕೆ? ಎಂಬ ಪ್ರಶ್ನೆಯನ್ನು ಮುಂದಾಗಿಸುತ್ತದೆ. ಈ ಹಿಂದುಳಿದಿರುವಿಕೆಗೆ ಹಲವು ಕಾರಣಗಳಿದ್ದರೂ ಅದರ ರಾಜಕೀಯ ಕಾರಣವನ್ನು ಗುರುತಿಸಿಕೊಳ್ಳುವುದು ಅತ್ಯಂತ ಮುಖ್ಯವಾದುದಾಗಿದೆ. ಅದಕ್ಕಾಗಿಯೇ ಪ್ರಸ್ತುತ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

## ಅಧ್ಯಯನದ ವೈಧಾನಿಕತೆ

ಗ್ರಾಮ ಪಂಚಾಯತಿ, ನಗರಸಭೆ, ವಿಧಾನಸಭೆ ಹಾಗೂ ಲೋಕಸಭಾ ಕ್ಷೇತ್ರಗಳನ್ನು ಅನುಕ್ರಮವಾಗಿ ಹೊಂದಿರುವ ಬಳ್ಳಾರಿ ಜಿಲ್ಲೆಗೆ ತನ್ನ ಅಧ್ಯಯನದ ವ್ಯಾಪ್ತಿಯನ್ನು ನಿಗದಿಗೊಳಿಸಿಕೊಂಡಿರುವ ಪ್ರಸ್ತುತ ಅಧ್ಯಯನವು ಸ್ತ್ರೀವಾದಿ ಚಿಂತನೆಯ ರಾಜಕೀಯ ನಿಲುವುಗಳನ್ನು ತನ್ನ ಅಧ್ಯಯನದ ತಾತ್ವಿಕತೆಯಾಗಿ ಸ್ವೀಕರಿಸಿದೆ. ಪ್ರಸ್ತುತ ಸಂದರ್ಭದಲ್ಲಿ ರಾಜಕೀಯ ಅವಕಾಶಗಳು ಮಹಿಳೆಯ ನಿರ್ಧಾರಗಳನ್ನು ರೂಪಿಸುವ ಸ್ಥಾನಕ್ಕೆ ಕೊಂಡೊಯ್ಯುವುದು ಹಾಗೂ ಅಂತಹ ಸ್ಥಾನಗಳನ್ನು ಪಡೆಯುವುದು ಮಹಿಳಾ ಅಭಿವೃದ್ಧಿಯ ಪ್ರಮುಖ ಹೆಜ್ಜೆಯಾಗಿದೆ ಎಂಬುದನ್ನು ಸ್ವೀಕರಿಸಿದೆ. ಮಹಿಳಾ ಸಶಕ್ತೀಕರಣದ ಪರಿಕಲ್ಪನೆ ರಾಜಕೀಯ ಕ್ಷೇತ್ರದಿಂದಲೇ ಆರಂಭಗೊಳ್ಳಬೇಕಾಗಿದೆ ಎಂಬುದನ್ನು ಗಂಭೀರವಾಗಿ ಪರಿಗಣಿಸುವುದರೊಂದಿಗೆ ಆ ಸಶಕ್ತೀಕರಣದ ಹೆಜ್ಜೆಗುರುತುಗಳನ್ನು ಹುಡುಕುವ, ಅಡೆತಡೆಗಳನ್ನು ಬೆಳಕಿಗೆ ತರುವ ಆಶಯವನ್ನು ಹೊಂದಿದೆ. ಪ್ರಸ್ತುತ ಆಶಯದ ಈಡೇರಿಕೆಗಾಗಿ ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಿಸುವ, ವಿಶ್ಲೇಷಣೆಗೆ ಒಳಪಡಿಸುವ ಸಾಮಗ್ರಿಗಳಾಗಿ ಸ್ವಾತಂತ್ರ್ಯೋತ್ತರ ಕಾಲಘಟ್ಟಕ್ಕೂ ಸಂಬಂಧಿಸಿದ ಚುನಾವಣಾ ಅಂಕಿ ಅಂಶಗಳನ್ನು ಪ್ರಧಾನವಾಗಿ ಬಳಸಿಕೊಳ್ಳಲಾಗುವುದು.

೧. ಆರ್ಥಿಕ ಅಭಿವೃದ್ಧಿ ಹೊಂದಿದ ನಗರ-ಗ್ರಾಮೀಣ, ಹಿಂದುಳಿದ ನಗರ-ಗ್ರಾಮೀಣ ಪ್ರದೇಶ ಗಳಿಂದ ರಾಜಕೀಯದಲ್ಲಿ ಮಹಿಳಾ ಪಾತ್ರಗಳನ್ನು ರ್‍ಯಾಂಡಮ್ ಮಾದರಿಯಲ್ಲಿ ಆಯ್ಕೆ ಮಾಡಿಕೊಳ್ಳಲಾಗುವುದು. ಈ ಅಧ್ಯಯನವು ಗ್ರಂಥಾಧಾರಿತ ಅಂದರೆ Library Oriented, ನಗರ-ಗ್ರಾಮೀಣ ಕಚೇರಿಗಳಿಂದ ಲಭ್ಯವಿರುವ ಮಾಹಿತಿಗಳು, ಸರ್ಕಾರದ ವಾರ್ಷಿಕ ವರದಿಗಳು, ಯೋಜಿಸಲಾದ ಕಾರ್ಯಕ್ರಮುಗಳು, ಈ ಕುರಿತಾದ ಲೇಖನಗಳಿಂದ ಅಧ್ಯಯನಗಳು ಸರ್ಕಾರದ ಪ್ರಕಟಣೆಗಳು, ಪುಸ್ತಕಗಳಿಂದ ವಿಷಯ ಸಂಗ್ರಹಿಸಿ ತೌಲನಿಕವಾಗಿ ವಿಶ್ಲೇಷಣೆಗೊಳಪಡಿಸುವುದಾಗಿದೆ.

೨. ಈ ಅಧ್ಯಯನವು ಸೂಕ್ಷ್ಮಸ್ತರ ಆಗಿರುವುದರಿಂದ ಕ್ಷೇತ್ರಕಾರ್ಯವನ್ನು ಕೈಗೊಳ್ಳವುದಾಗಿದೆ. ಕೆಲವು ನಿರ್ದಿಷ್ಟ ಮಹಿಳೆಯರ ನಗರ-ಗ್ರಾಮೀಣ ರಾಜಕೀಯ ಸಂಸ್ಥೆಗಳ ಸದಸ್ಯರನ್ನೂ ಸಂದರ್ಶಿಸಿ ಪ್ರಶ್ನಾವಳಿಗಳ ಮೂಲಕ ಆಯ್ದ ಕ್ಷೇತ್ರವೊಂದರಲ್ಲಿ ಮಹಿಳಾ ರಾಜಕಾರಣದ ಕುರಿತ ಜನತೆಗಿರುವ ಒಲವು-ನಿಲುವುಗಳನ್ನು ಗ್ರಹಿಸುವುದು. ಇಂತಹ ರಾಜಕಾರಣದಲ್ಲಿ ಪಾಲ್ಗೊಳ್ಳುವ ಮಹಿಳೆಯರ ಸ್ವಾನುಭವವನ್ನು ಕ್ರೋಢೀಕರಿಸಿ, ಕಂಡುಕೊಳ್ಳಬಹುದಾದ ಮಹಿಳಾ ರಾಜಕಾರಣದ ಸಾಧ್ಯತೆಯನ್ನು ಗಮನಿಸುವುದು.

೩. ಜೊತೆಗೆ ಹೀಗೆ ಕೆಲವು ನಿರ್ದಿಷ್ಟ ಮಹಿಳೆಯರ ಸಂದರ್ಶನ ಆಧಾರದ ಮೇಲೆ ಪ್ರೊಫೈಲ್ ಗಳನ್ನು ರಚಿಸುವುದು. ಆ ಮೂಲಕ ರಾಜಕಾರಣದ ಸಂದರ್ಭದಲ್ಲಿ ಮಹಿಳೆಯು

ಕಾಣುವ, ಅನುಭವಿಸುವ ಏಳು-ಬೀಳುಗಳನ್ನು ತಾತ್ವಿಕರಿಸಲು (Ideolise) ಯತ್ನಿಸುವುದು. ಸರಕಾರದಿಂದ ದೊರೆತ ಅಂಕಿ ಅಂಶಗಳನ್ನು ಹಾಗೂ ಪ್ರಾಯೋಗಿಕವಾಗಿ ಕೈಗೊಂಡ ಕ್ಷೇತ್ರಕಾರ್ಯ-ಸಂದರ್ಶನದಲ್ಲಿ ದೊರೆತ ವಿವರಗಳು, ಪ್ರಶ್ನಾವಳಿಗಳಿಗೆ ಸದಸ್ಯರಿಂದ ಸಿಕ್ಕ ಉತ್ತರ. ಇವುಗಳನ್ನು ಪರಸ್ಪರ ಮುಖಾಮುಖಿಯಾಗಿವೆ ಹೊಸ ವಾಸ್ತವಿಕ ಅಂಶಗಳನ್ನು ಕಂಡುಕೊಳ್ಳುವುದು. ಇಲ್ಲಿ ಸ್ವಾತಂತ್ರ್ಯೋತ್ತರ ಕಾಲಘಟ್ಟಕ್ಕೆ ಸಂಬಂಧಿಸಿದ ಅಂಕಿ ಅಂಶಗಳನ್ನು ಪ್ರಧಾನವಾಗಿ ಬಳಸಿಕೊಂಡ Profileಗಳನ್ನು ತಯಾರಿಸಿಕೊಳ್ಳಲಾಗುವುದು.

ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯೇ, ಜಯಲಕ್ಷ್ಮಿ ಬಾಯಿ, ಕೋಗಳಿ ರುದ್ರಮ್ಮ, ಡಾ.ಲಕ್ಷ್ಮೀದೇವಿ, ರತ್ನಕಟ್ಟಿ ಚನ್ನಬಸಮ್ಮ, ಆದವಾನಿಯ ಶ್ರೀಮತಿ ರಾಮಲಿಂಗಮ್ಮ ಇತ್ಯಾದಿ ಹಲವಾರು ಮಹಿಳೆಯರು ಹೋರಾಟದಲ್ಲಿ ಪಾಲ್ಗೊಂಡ ದಾಖಲೆಗಳು ದೊರೆಯುವುದಾದರೂ ಪ್ರಸ್ತುತ ಅಧ್ಯಯನವು ಸ್ವಾತಂತ್ರ್ಯೋತ್ತರ ಚುನಾವಣಾ ರಾಜಕಾರಣದ ಕಾಲಘಟ್ಟಕ್ಕೆ ತನ್ನ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳುತ್ತದೆ. ಸಂವಿಧಾನಾತ್ಮಕ ಸಾಮಾಜಿಕ ಬದ್ಧತೆಯ ಹಿನ್ನೆಲೆಯಲ್ಲಿ ಮಹಿಳೆಗೆ ಇಲ್ಲಿ ದೊರಕಿದ ಅವಕಾಶಗಳು ಎಷ್ಟು? ಯಾವ ಹಂತದ್ದು ಇತ್ಯಾದಿ ಅಂಶಗಳನ್ನು ಪರಿಶೀಲಿಸುವುದಾಗಿದೆ. ಕಲೆಹಾಕಿದ ಮಾಹಿತಿಯ ಈ ಕೆಳಕಂಡ ರೀತಿಯಲ್ಲಿ ವಿಶ್ಲೇಷಣೆಗೊಳಪಡಿಸಲಾಗುವುದು.

೧. ತಳಮಟ್ಟದ ಘಟಕವಾದ ಗ್ರಾಮಪಂಚಾಯತಿಯಿಂದ ಹಿಡಿದು ಲೋಕಸಭಾ ಮಟ್ಟದವರೆಗೆ ಪ್ರತಿಯೊಂದು ಘಟಕವನ್ನು ಪ್ರತ್ಯೇಕವಾಗಿ ಪರಿಶೀಲಿಸಿ ಪುರುಷ ಹಾಗೂ ಮಹಿಳೆಯ ರಾಜಕೀಯ ಸ್ವರೂಪವನ್ನು ಗ್ರಹಿಸುವುದು.
೨. ಎಲ್ಲ ಘಟಕಗಳನ್ನು ಪರಸ್ಪರ ತುಲನೆಗೊಳಪಡಿಸಿ ವಿಶ್ಲೇಷಿಸುವುದು.
೩. ಮಹಿಳಾ ರಾಜಕಾರಣ ಹಾಗೂ ಮಹಿಳೆಯ ರಾಜಕೀಯ ಭಾಗವಹಿಸುವಿಕೆಗಳ ನಡುವಿರುವ ವ್ಯತ್ಯಾಸ ಅಥವಾ ಸಾಮ್ಯಗಳನ್ನು ಸಾಂಸ್ಕೃತಿಕ ಸಂದರ್ಭದಲ್ಲಿ ಹಿಡಿದಿಡಲು ಯತ್ನಿಸುವುದು. ಇದಕ್ಕಾಗಿ ಸೂಚಿತ ಮಹಿಳಾ ರಾಜಕಾರಣಿಗಳ ಸಂದರ್ಶನ, ಕೌಟುಂಬಿಕ ಹಿನ್ನೆಲೆ ಇತ್ಯಾದಿಗಳನ್ನು ಬಳಸಲಾಗುವುದು.
೪. ಪುರುಷ ರಾಜಕಾರಣದ ಬಹುಮುಖ್ಯ 'ಏಜೆಂಟ್'ಗಳಾಗಿ ಕೆಲಸಮಾಡುವ ಜಾತಿ, ವರ್ಗ, ಭಾಷೆ, ಇತ್ಯಾದಿ ಅಂಶಗಳು ಮಹಿಳಾ ರಾಜಕಾರಣಿಗಳ ಸಂದರ್ಭದಲ್ಲಿ ತಾಳೆಯಾಗುವುದೇ ಎಂಬುದನ್ನು ಆಧಾರ ಸಹಿತ ವಿಶ್ಲೇಷಿಸಲು ಯತ್ನಿಸುವುದು.
೫. ತಳಮಟ್ಟದ ರಾಜಕಾರಣದಲ್ಲಿ ಹಾಗೂ ಮೇಲ್ಮಟ್ಟದ ರಾಜಕಾರಣದಲ್ಲಿ ಮಹಿಳೆಯ ರಾಜಕೀಯ ಪಾಲ್ಗೊಳ್ಳುವಿಕೆಯಿಂದ ಉಂಟಾಗಿರುವ ಸಾಮಾಜಿಕ ಬದಲಾವಣೆಗಳನ್ನು ಅವಲೋಕಿಸುವುದು.

೬. ಈ ಎರಡೂ ಸ್ತರದ ರಾಜಕೀಯ ಸಂಸ್ಥೆಗಳ ಕಾರ್ಯಾಚರಣೆಗಳನ್ನು ಹಾಗೂ ವ್ಯವಸ್ಥೆಯಲ್ಲಿ ಜಾತಿ ಮತ್ತು ಲಿಂಗ ಸಂವೇದಿ ಆಯಾಮಗಳ ಪಾತ್ರ ಮತ್ತು ಪರಿಣಾಮಗಳನ್ನು ವಿಶ್ಲೇಷಿಸುವುದು.

೭. ಮಹಿಳೆಯ ಅದರಲ್ಲೂ ಚುನಾಯಿತ ಮಹಿಳಾ ಪ್ರತಿನಿಧಿಗಳ ಮೇಲೆ ಶಿಕ್ಷಣ, ಸಾಕ್ಷರತೆ, ರಾಜಕೀಯ ತಿಳುವಳಿಕೆ, ಸಾಮಾಜಿಕ ಹಾಗೂ ಆರ್ಥಿಕ ಅಂಶಗಳ ಪರಿಣಾಮಗಳನ್ನು ಪರೀಕ್ಷಿಸುವುದು.

೮. ಅಧಿಕಾರ ರಾಜಕಾರಣದಿಂದ ನೀತಿ ನಿರ್ಧಾರಕ ಚಟುವಟಿಕೆಗಳಲ್ಲಿ ಚುನಾಯಿತ ಮಹಿಳಾ ಪ್ರತಿನಿಧಿಗಳ ಭಾಗವಹಿಸುವಿಕೆಯನ್ನು ವಿಶ್ಲೇಷಿಸುವುದು.

೯. ರಾಜಕಾರಣದಲ್ಲಿ ಪಾಲ್ಗೊಂಡ ಮಹಿಳೆಯರ ಬಗ್ಗೆ ಜನತೆಗಿರುವ ಸಮಾಜದ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು.

೧೦. ಸರ್ಕಾರದಲ್ಲಿ ದಾಖಲಾದ ಅಂಕಿ-ಅಂಶಗಳು ಹಾಗೂ ಜನರಿಂದ ಸಂಗ್ರಹಿಸಲಾದ ವಾಸ್ತವಾಂಶಗಳನ್ನು ಪರಿಶೀಲಿಸಿ ವಿಶ್ಲೇಷಣೆ ಮಾಡುವುದು.

## ಅಧ್ಯಯನದ ಅಗತ್ಯ

ಜಾಗತಿಕ ಮಟ್ಟದಲ್ಲಿಯೇ ಮಹಿಳಾ ಅಧ್ಯಯನವು ೧೯೬೦ರ ದಶಕದಿಂದೀಚೆಗೆ ಪ್ರವರ್ಧಮಾನಕ್ಕೆ ಬರುತ್ತಿರುವ ಜ್ಞಾನಶಾಖೆಯಾಗಿದೆ. ಭಾರತದಲ್ಲಿ ೧೯೭೦ರಿಂದೀಚೆಗೆ ಇದರ ಬೆಳವಣಿಗೆಯನ್ನು ವಿಶೇಷವಾಗಿ ಕಾಣಬಹುದಾದರೂ ಕನ್ನಡದ ಸಂದರ್ಭದಲ್ಲಿ ಈ ದಿಕ್ಕಿನಲ್ಲಿ ನಡೆದಿರುವ ಅಧ್ಯಯನಗಳು ವಿರಳ.

ಪ್ರಸ್ತುತ ಅಧ್ಯಯನವು ಗುರುತಿಸಿಕೊಂಡಿರುವ ಈಗಾಗಲೇ ವಿವರಿಸಿದಂತೆ ಬಳ್ಳಾರಿ ಜಿಲ್ಲೆಯು ಕರ್ನಾಟಕದಲ್ಲಿ ಹಿಂದುಳಿದ ಪ್ರದೇಶವೆಂದು ಗುರುತಿಸಿಕೊಂಡಿರುವುದೂ ಈ ಪ್ರದೇಶದ ಅದರಲ್ಲೂ ಮಹಿಳೆಯರ ರಾಜಕೀಯ ಸಶಕ್ತೀಕರಣದ ದೃಷ್ಟಿಯಿಂದ (Political Empowerment of Woman) ಅತ್ಯಂತ ಉಪಯುಕ್ತವಾದುದಾಗಿದೆ.

ರಾಷ್ಟ್ರ ಹಾಗೂ ರಾಜ್ಯಮಟ್ಟದ ರಾಜಕಾರಣದಲ್ಲಿ ಬಳ್ಳಾರಿ ಜಿಲ್ಲೆಯನ್ನು ಗಮನಿಸಿದಾಗ ಐದು ಜನ ಮಹಿಳಾ ಅಭ್ಯರ್ಥಿಗಳು ವಿವಿಧ ಸದಸ್ಯರಾಗಿ ಆಯ್ಕೆಯಾಗಿರುವುದು ತಿಳಿದುಬರುತ್ತದೆ. ಮೊದಲನೆಯದಾಗಿ ಶ್ರೀಮತಿ ಬಸವರಾಜೇಶ್ವರಿಯವರು ಸತತವಾಗಿ ಮೂರು ಬಾರಿ ಸಂಸತ್ ಸದಸ್ಯರಾಗಿ, ಒಮ್ಮೆ ಕೇಂದ್ರ ಕ್ಯಾಬಿನೆಟ್ ಸಂಪುಟದ ಸಚಿವೆಯಾಗಿ ಆಯ್ಕೆಯಾದರೆ, ಶ್ರೀಮತಿ ಸೋನಿಯಾಗಾಂಧಿಯವರು ಇತ್ತೀಚೆಗೆ ಲೋಕಸಭೆ ಸದಸ್ಯರಾಗಿ ಆಯ್ಕೆಯಾದರು. ಶ್ರೀಮತಿ ಅಲ್ಲಂ ಸುಮಂಗಳಮ್ಮ ಅವರು ಎರಡು ಬಾರಿ, ಶ್ರೀಮತಿ ಮುರಾರಿ ಕಮಲರವರು, ಶ್ರೀಮತಿ ಭಾಗೀರಥಿ ಮರುಳಸಿದ್ಧನಗೌಡ ಅವರು ಒಂದು ಬಾರಿ ವಿಧಾನಸಭೆ ಸದಸ್ಯರಾಗಿ

ಆಯ್ಕೆಯಾಗಿದ್ದಾರೆ. ಇದನ್ನು ಬಿಟ್ಟರೆ ರಾಷ್ಟ್ರ ಮತ್ತು ರಾಜ್ಯಮಟ್ಟದ ರಾಜಕಾರಣದಲ್ಲಿ ಬಳ್ಳಾರಿ ಜಿಲ್ಲೆಯ ಮಹಿಳೆಯರ ಪಾಲುಗಾರಿಕೆ ಕಡಿಮೆಯೆಂದೇ ಹೇಳಬಹುದು. ಇತ್ತೀಚೆಗೆ ಬದಲಾದ ರಾಜಕೀಯ ನೀತಿಯಿಂದಾಗಿ ಹಾಗೂ ಮಹಿಳೆಯರಿಗೆ ರಾಜಕೀಯದಲ್ಲಿ ಮೀಸಲಾತಿ ನೀಡಿರುವುದರಿಂದಾಗಿ ಗ್ರಾಮ ಪಂಚಾಯಿತಿ ಮಟ್ಟದ ರಾಜಕಾರಣದಲ್ಲಿ ಮಹಿಳಾ ಅಭ್ಯರ್ಥಿಗಳ ಭಾಗವಹಿಸುವಿಕೆ ಹೆಚ್ಚಾಗುತ್ತಾ ಬಂದಿದೆ. ಇದು ಮಹಿಳಾ ಸಶಕ್ತೀಕರಣದ ಸೂಚನೆಯೆಂದೇ ಭಾವಿಸಲಾಗಿದೆ. ಹೀಗೆ ಮಹಿಳಾ ರಾಜಕಾರಣದಲ್ಲಿ ತನಗೆ ಸಿಕ್ಕಂತಹ ಪಾಲುಗಾರಿಕೆಯ ಅವಕಾಶವನ್ನು ಯಾವ ರೀತಿ ಉಪಯೋಗಿಸಿಕೊಳ್ಳುತ್ತಿದ್ದಾಳೆ? ಇದರಿಂದ ಮಹಿಳೆ ರಾಜಕೀಯ ಸಶಕ್ತೀಕರಣ ಹೊಂದುತ್ತಿದ್ದಾಳೆಯೇ? ಕುಟುಂಬ ನಿರ್ವಹಣೆಗಷ್ಟೇ ಸೀಮಿತವಾಗಿದ್ದ ಅವಳ ಕಾರ್ಯಚಟುವಟಿಕೆ ರಾಜಕೀಯಕ್ಕೆ ಬಂದಾಗ ಪುರುಷನಿಗಿಂತ ಭಿನ್ನವಾದ ಕೆಲಸಕಾರ್ಯಗಳನ್ನು ಅವಳು ಹೇಗೆ ಮಾಡಬಲ್ಲಳು? ಎಂಬ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಈ ಅಧ್ಯಯನವನ್ನು ಕೈಗೊಂಡಿದ್ದೇನೆ.

ಪಂಚಾಯತ್‌ರಾಜ್ ವ್ಯವಸ್ಥೆಯಡಿಯಲ್ಲಿ ಮಹಿಳೆಯರಿಗೆ ರಾಜಕೀಯದಲ್ಲೂ ಮೀಸಲಾತಿ ನೀಡಿರುವದರಿಂದ ಹೆಚ್ಚು ಸಶಕ್ತೀಕರಣ ಹೊಂದುತ್ತಿದ್ದಾಳೆ. ನನ್ನ ಅಧ್ಯಯನ ಕ್ಷೇತ್ರವಾದ ಬಳ್ಳಾರಿ ಜಿಲ್ಲೆಯ ರಾಜಕೀಯವನ್ನು ಗಮನಿಸಿದಾಗ ಶೇ. ೩೩ ಕ್ಕಿಂತ ಹೆಚ್ಚಿನ ಮಹಿಳೆಯರು ತಮ್ಮ ಮೀಸಲಾತಿಯ ಹಕ್ಕನ್ನು ಸದುಪಯೋಗ ಪಡಿಸಿಕೊಂಡಿದ್ದಾರೆ. ಆದರೆ ಪಡೆದುಕೊಂಡ ಈ ಮೀಸಲಾತಿಯಿಂದ ಇಲ್ಲಿನ ಮಹಿಳೆಯರೇನು ಗಣನೀಯ ಪ್ರಮಾಣದಲ್ಲಿ ಪ್ರಗತಿಯನ್ನು ಸಾಧಿಸಿಲ್ಲ. ಇದಕ್ಕೆ ಮುಖ್ಯ ಕಾರಣ ಅವರ ಅವಲಂಬಿತ ಬದುಕು. ಅಂದರೆ ಗ್ರಾಮಪಂಚಾಯಿತಿ ಸದಸ್ಯೆ ಹಾಗೂ ಅಧ್ಯಕ್ಷೆಯಾಗಿರುವ ಬಹುತೇಕ ಮಹಿಳೆಯರಿಗೆ ಓದು-ಬರಹ ಬರದೆ ಪ್ರತಿಯೊಂದಕ್ಕೂ ಇತರರನ್ನು ಅವಲಂಬಿಸಿ ಅಧಿಕಾರ ನಡೆಸಬೇಕಾದ ಅನಿವಾರ್ಯತೆ ಉಂಟಾಗಿದೆ. ಹಾಗಾಗಿ ಪರೋಕ್ಷವಾಗಿ ಪುರುಷನೇ ಇಲ್ಲಿ ಮೇಲುಗೈ ಸಾಧಿಸಿದ್ದಾನೆ. ಪುರುಷ ಕೇಂದ್ರಿತವಾಗಿದ್ದ ರಾಜಕೀಯವನ್ನು ವಿಕೇಂದ್ರೀಕರಣಗೊಳಿಸುವ ದೃಷ್ಟಿಯಿಂದ ಮಹಿಳೆಯರಿಗೂ ಮೀಸಲಾತಿ ನೀಡಿರುವ ಈ ನೀತಿ ಮತ್ತೆ ಪುರುಷ ಕೇಂದ್ರಿತವಾಗಿಯೇ ಮುಂದುವರಿಯುತ್ತಿರುವುದು ವಿಪರ್ಯಾಸ. ಇಲ್ಲಿ ಮಹಿಳೆ ನಾಮಮಾತ್ರ. ರಾಜಕೀಯದಲ್ಲಿ ಮೀಸಲಾತಿಯನ್ನು ನೀಡಿದರಷ್ಟೇ ಮಹಿಳೆ ಸಶಕ್ತೀಕರಣವನ್ನು ಹೊಂದುವುದಿಲ್ಲ. ಮೀಸಲಾತಿಯ ಜೊತೆಗೆ ರಾಜಕೀಯವನ್ನು ಪ್ರವೇಶಿಸುವ ಪ್ರತಿಯೊಬ್ಬ ಮಹಿಳೆಗೂ ಸಾಮಾಜಿಕ ಸ್ಥಾನಮಾನಗಳ ಬಗ್ಗೆ ತಿಳುವಳಿಕೆಯನ್ನು ನೀಡಿದಲ್ಲಿ ಅವರದೇ ಆದ ಐಡೆಂಟಿಟಿಯನ್ನು ಕಾಣಬಹುದಾಗಿದೆ. ಈ ನಿಟ್ಟಿನಲ್ಲಿ ಸರ್ಕಾರ ಮತ್ತು ಮಹಿಳಾ ಸಂಘಸಂಸ್ಥೆಗಳು ಬಹು ಮುಖ್ಯ ಪಾತ್ರ ವಹಿಸಬೇಕಾಗುತ್ತದೆ. ಒಟ್ಟಾರೆ ಗ್ರಾಮಪಂಚಾಯತ್ ರಾಜಕಾರಣದಲ್ಲಿ ಮಹಿಳೆಯ ಪಾತ್ರವನ್ನು ಗಮನಿಸಿದಾಗ ಪೂರ್ಣ ಪ್ರಮಾಣದಲ್ಲಿ ಸ್ವಂತ ಅಸ್ತಿತ್ವವನ್ನು ಕಂಡುಕೊಳ್ಳದಿರುವುದು ಅಧ್ಯಯನದ ಮೂಲಕ ತಿಳಿದುಬಂದಿತು.

ಇದುವರೆಗೂ ನಡೆದಿರುವ ಮಹಿಳಾ ರಾಜಕಾರಣದ ಚರ್ಚೆಯು ಪುರುಷ ಮತ್ತು ಮಹಿಳೆ ಎಂಬ ಲಿಂಗ ಪರಿಕಲ್ಪನೆಗಳನ್ನೊಳಗೊಂಡಿದ್ದು ಅದು ಮೀಸಲಾತಿ, ಪಂಚಾಯತ್‌ರಾಜ್ ಇತ್ಯಾದಿ ವಿವರಗಳನ್ನು

ಹೆಚ್ಚು ಕೇಂದ್ರೀಕರಿಸಿದ್ದಾಗಿದೆ. ಪ್ರಸ್ತುತ ಅಧ್ಯಯನವು ಆ ಪರಿಕಲ್ಪನೆಗಳನ್ನು ಬಳಸಿಕೊಳ್ಳುತ್ತಲೇ ನಗರ ಹಾಗೂ ಗ್ರಾಮೀಣಗಳೆಂಬ ಪರಿಕಲ್ಪನೆಗಳನ್ನು ಮುಖಾಮುಖಿಯಾಗಿಸುವುದರಿಂದ ಈ ಅಧ್ಯಯನದ ವ್ಯಾಪ್ತಿ ಭಿನ್ನವಾದುದು, ವಿಸ್ತಾರವಾದದ್ದೂ ಆಗಿದೆ.

ಮಹಿಳಾ ಮೀಸಲಾತಿಯ ಪ್ರಶ್ನೆ ಇನ್ನು ಬಗೆಹರಿಯದ ಹಾಗೂ ಮಹಿಳಾ ಸಶಕ್ತೀಕರಣ-ಸಬಲೀಕರಣದ ಚಿಂತನೆಯು ಸರಕಾರ ಹಾಗೂ ಸ್ವಾಯತ್ತ ನೆಲೆಗಳೆರಡರಿಂದಲೂ ವ್ಯಾಪಕಗೊಳ್ಳುತ್ತಿರುವ ಇಂದಿನ ದಿನಮಾನದಲ್ಲಿ ಮಹಿಳಾ ರಾಜಕೀಯ ಸಬಲೀಕರಣದ ಪ್ರಶ್ನೆಯನ್ನು ವಿಸ್ತೃತವಾದ ಅಧ್ಯಯನಕ್ಕೊಳಪಡಿಸುವುದು, ನಿಶ್ಚಿತ ತೀರ್ಮಾನಗಳನ್ನು ಪಡೆಯುವುದು ಹೆಚ್ಚು ಪ್ರಸ್ತುತವೂ, ಉಪಯುಕ್ತವೂ ಆಗುವುದಾಗಿದೆ.

ನಮ್ಮ ಸಾಮಾಜಿಕ ಸಂದರ್ಭದಲ್ಲಿ ಮಹಿಳಾ ರಾಜಕಾರಣ ಕುರಿತಂತೆ ಹಲವಾರು ಬಯಾಸ್ (ಪೂರ್ವಗ್ರಹ ಪೀಡಿತ)ಗಳು ರೂಪುಗೊಂಡಿದ್ದು ಅವುಗಳ ವಾಸ್ತವತೆಯ ಬಗ್ಗೆ ಹೆಚ್ಚಿನ ಅಧ್ಯಯನಗಳು ಆಗಬೇಕಿದೆ. ಸಾಂಪ್ರದಾಯಿಕ ಸಮಾಜ ಹಾಗೂ ಸ್ತ್ರೀವಾದಿ ಚಿಂತನೆಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ನಿಂತು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿರುವ ಸಂದರ್ಭದಲ್ಲಿ ಮಹಿಳಾ ಅಧ್ಯಯನವು ಅವೆರಡರ ನಡುವಿರುವ ವಾಸ್ತವವನ್ನು ಸಾದರಪಡಿಸ ಬೇಕಿದೆ. ಈ ಸಾಂಪ್ರದಾಯಿಕ ನಂಬಿಕೆಗಳು ನಿವಾರಣೆಗೊಂಡು ಸ್ತ್ರೀವಾದದ ಆಶಯಗಳು ಅನುಷ್ಠಾನಗೊಳ್ಳಲು ಬೇಕಾಗುವ ಸಾಮಾಜಿಕ ಸಂದರ್ಭದ ನಿರ್ಮಾಣದಲ್ಲಿ ಮಹಿಳಾ ಅಧ್ಯಯನದ ಕೆಲಸವು ವಿಶೇಷ ಮಹತ್ವದ್ದಾಗಿದ್ದು, ಅಂತಹ ಒಂದು ಮಹತ್ವದ ಆಶಯವನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನದ ರೂಪುರೇಶೆಗಳನ್ನು ನಿರ್ಮಿಸಿಕೊಳ್ಳಲಾಗಿದೆ.

ಪ್ರಸ್ತುತ ಮಹಾಪ್ರಬಂಧವು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳ ಸ್ವರೂಪ ಹೀಗಿದೆ :

**ಅಧ್ಯಾಯ - ೧ : ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ**

ಈ ಅಧ್ಯಾಯದಲ್ಲಿ ಮಹಿಳಾ ರಾಜಕಾರಣಕ್ಕೆ ಸಂಬಂಧಪಟ್ಟ ಕೆಲವು ಸ್ತ್ರೀ ಪರ ಇರುವ ಅತಿ ಉದಾರದ ನಿಲುವುಗಳು ಹಾಗೂ ಪೂರ್ವಗ್ರಹಪೀಡಿತ ಹೇಳಿಕೆಗಳನ್ನು ಪ್ರಧಾನವಾಗಿಟ್ಟುಕೊಂಡು ಅವುಗಳಿಗೆ ಹೊಂದಿಕೊಂಡಂತಹ ಹಲವಾರು ಅಂಶಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಆ ಮೂಲಕವೇ ಮಹಿಳಾ ರಾಜಕಾರಣದ ಚಲನೆಯ ಸ್ವರೂಪವನ್ನು ಗ್ರಹಿಸಲು, ಪ್ರಸ್ತುತಪಡಿಸಲು ಆಶಿಸಲಾಗುತ್ತದೆ. ಭಾರತದಲಿನ ಮಹಿಳಾ ರಾಜಕಾರಣಕ್ಕೆ ಬೇಕಾದ ಸೈದ್ಧಾಂತಿಕ ನೆಲೆಗಟ್ಟು, ಕಾರ್ಯಸೂಚಿಯನ್ನು ಹುಡುಕುವುದರೊಂದಿಗೆ ಅದಕ್ಕಿರಬೇಕಾದ ಆತ್ಮವಿಮರ್ಶೆಯ ಸ್ವರೂಪದೆಡೆಗೂ ಗಮನಹರಿಸುವುದಾಗಿದೆ. ಇದುವೇ ಮುಖ್ಯ ಉದ್ದೇಶವಾಗಿದೆ.

ಮಹಿಳಾ ರಾಜಕಾರಣದ ವ್ಯಾಪ್ತಿಯು ದೇಶ ಭಾಷೆಗಳ ಎಲ್ಲೆಯನ್ನು ಮೀರಿದ ಜಾಗತಿಕ ಪ್ರಶ್ನೆಯಾಗಿದ್ದರೂ ಪ್ರಸ್ತುತ ಅಧ್ಯಾಯಗಳಲ್ಲಿ ಭಾರತೀಯ ರಾಜಕಾರಣವನ್ನು ಗಮನದಲ್ಲಿಟ್ಟುಕೊಂಡದ್ದಾಗಿದೆ. ಭಾರತೀಯ ಸಮಾಜವನ್ನು ವರ್ಣಾಶ್ರಮ ವ್ಯವಸ್ಥೆಯೊಂದಿಗೆ ಲಿಂಗಭೇದ ವ್ಯವಸ್ಥೆ ಆಧಾರಿತ ಸಮಾಜವೆಂದು ಮೂಲಭೂತವಾಗಿ ಗುರುತಿಸಿಕೊಂಡಿರುತ್ತಾರೆ. ಹೀಗೆ ಗುರುತಿಸಿಕೊಳ್ಳುತ್ತಲೇ ಇದಕ್ಕೆ ಪೂರಕವಾಗಿ ಭಾರತವು ಹಳ್ಳಿಗಳ ಹಾಗೂ ನಗರಗಳೆಂಬ ವ್ಯತ್ಯಯವನ್ನು ಸಮಸ್ಯೆಯ ಸ್ವರೂಪದಲ್ಲಿಯೇ ಹೊಂದಿದೆ ಎಂಬುದನ್ನು ಪ್ರಸ್ತುತಪಡಿಸಲಾಗಿದೆ. ನಗರ ಹಾಗೂ ಗ್ರಾಮೀಣ ಎಂಬ ಪ್ರತ್ಯೇಕತೆಯು ಮಹಿಳಾ ರಾಜಕಾರಣದಲ್ಲಿ ಪ್ರತಿಫಲಿತಗೊಳ್ಳುವ ವಿಧಾನಗಳನ್ನು ಪರಿಶೀಲಿಸಿ ಕೆಲವು ಅಂಶಗಳನ್ನು ತನ್ನ ವ್ಯಾಪ್ತಿಯಲ್ಲಿಟ್ಟು ನೋಡಲೆತ್ನಿಸುತ್ತದೆ. ಪ್ರಸ್ತುತ ಅಧ್ಯಯನವು ಭಾರತದ ರಾಜಕಾರಣ ಕುರಿತದ್ದಾದರೂ ಅದು ಭಾರತದ ರಾಜಕಾರಣದ ಪ್ರಾತಿನಿಧಿಕ ಘಟಕವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಆಯ್ದುಕೊಂಡಿದೆ. ಭಾರತದ ಮಹಿಳಾ ರಾಜಕಾರಣದ ಇತಿಹಾಸವನ್ನು ಆಧುನಿಕ ಪೂರ್ವ ಹಾಗೂ ಆಧುನಿಕ ಭಾರತಗಳ ಕಾಲಘಟ್ಟಗಳಲ್ಲಿ ಎಂಬುದಾಗಿ ಪ್ರಸ್ತಾಪಿಸಲಾಗಿದೆ. ರಾಷ್ಟ್ರೀಯ ಹೋರಾಟದಲ್ಲಿನ ಮಹಿಳಾ ಪಾಲ್ಗೊಳ್ಳುವಿಕೆ ಹಾಗೂ ಪಂಚಾಯತ್‌ರಾಜ್ ಮೀಸಲಾತಿಯಿಂದಾದ ಮಹಿಳೆಯರ ರಾಜಕೀಯ ಪ್ರವೇಶಗಳನ್ನು ವಿಶ್ಲೇಷಿಸಲಾಗಿದೆ.

ಮಹಿಳಾ ಸಶಕ್ತೀಕರಣದ ಪರಿಕಲ್ಪನೆ, ರಾಜಕೀಯ ಕ್ಷೇತ್ರದಿಂದಲೇ ಆರಂಭಗೊಳ್ಳಬೇಕಾಗಿದೆ ಎಂಬ ಗಂಭೀರ ಆಲೋಚನೆಯೊಂದಿಗೆ ಆ ಸಶಕ್ತೀಕರಣದ ಹೆಜ್ಜೆ ಗುರುತುಗಳನ್ನು ಹುಡುಕುವ ಅಡೆ ತಡೆಗಳನ್ನು ಬೆಳಕಿಗೆ ತರುವ ಆಶಯವನ್ನು ಹೊಂದಲಾಗಿದೆ. ಈ ಆಶಯ ಈಡೇರಿಕೆಗಾಗಿ ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಿಸುವ, ವಿಶ್ಲೇಷಣೆಗೆ ಒಳಪಡಿಸುವ ಸಾಮಗ್ರಿಗಳಾಗಿ ಚುನಾವಣಾ ಅಂಕಿ-ಅಂಶಗಳನ್ನು ಪ್ರಧಾನವಾಗಿ ಬಳಸಿಕೊಳ್ಳಲಾದ ಸಂದರ್ಶನಾಧಾರಿತವಾದ (ಕೆಲವು ನಿರ್ದಿಷ್ಟ ಮಹಿಳೆಯರ) profile ಗಳನ್ನು ರಚಿಸುವ ಆ ಮೂಲಕ ಮಹಿಳೆಯು ಕಾಣುವ ಏಳುಬೀಳುಗಳನ್ನು ತಾತ್ವೀಕರಿಸಲು ಯತ್ನಿಸುವುದು. ಆಯ್ದ ಕ್ಷೇತ್ರವೊಂದರಲ್ಲಿ Questionaire ಮೂಲಕ ಮಹಿಳಾ ರಾಜಕಾರಣದ ಕುರಿತ ಜನತೆಯಿರುವ ಒಲವು ನಿಲುವುಗಳನ್ನು ಗ್ರಹಿಸುವುದು ಇತ್ಯಾದಿ ಕ್ಷೇತ್ರಕಾರ್ಯಾಧಾರಿತ ಅಧ್ಯಯನವು ಇದಾಗಿದೆ.

## ಅಧ್ಯಾಯ - ೨ : ಭಾರತದಲ್ಲಿ ಮಹಿಳಾ ರಾಜಕಾರಣದ ಸಾಧ್ಯತೆಗಳು

ಇಲ್ಲಿ ಮಹಿಳಾ ರಾಜಕಾರಣದ ಕುರಿತ ಐತಿಹಾಸಿಕ ನೆಲೆಗಳನ್ನು ಎರಡು ಅಂಶಗಳಲ್ಲಿ ಗ್ರಹಿಸಲಾಗಿದೆ. ಅದರಲ್ಲಿ ಒಂದು ರಾಷ್ಟ್ರೀಯ ಹೋರಾಟದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಹಾಗೂ ಎರಡು ಪಂಚಾಯತ್ ರಾಜ್ ಮೀಸಲಾತಿಯಿಂದಾದ ಮಹಿಳೆಯರ ರಾಜಕೀಯ ಪ್ರವೇಶದ ನೆಲೆಗಳಲ್ಲಿ ವಿಶ್ಲೇಷಣೆಗೊಳಪಡಿಸುವುದು. ರಾಷ್ಟ್ರೀಯ ಹೋರಾಟದಲ್ಲಿನ ಮಹಿಳೆಯರ ಪಾಲ್ಗೊಳ್ಳುವಿಕೆ ಮಹಿಳಾ ಪ್ರಶ್ನೆಯು ಜಾಗೃತಿ ಮಹಿಳಾ ಚಳುವಳಿಯ ಉದಯವನ್ನು ನಿರ್ಲಕ್ಷಿಸಿದ್ದು, ಇದನ್ನು ವಿರೋಧಿಸಿ ಮಹಿಳಾ ಅಧ್ಯಯನವು ಮಹಿಳಾ ಚಳುವಳಿಯ ಚರಿತ್ರೆಯನ್ನು ನಿರ್ಮಿಸುವ ಪ್ರಯತ್ನಮಾಡಿರುವುದನ್ನು ಪ್ರಸ್ತುತಪಡಿಸಲು ಯತ್ನಿಸಲಾಗಿದೆ. ಪಂಚಾಯತ್

ರಾಜ್‌ಗಳಲ್ಲಿನ ಮಹಿಳೆಯರ ಪಾಲ್ಗೊಳ್ಳುವಿಕೆ ಕುರಿತಂತೆ ಇದುವರೆಗೆ ನಡೆದಿರುವ ಅಧ್ಯಯನವನ್ನು ಸಾಂರೂಪಗೊಳಿಸಲಾಗಿದೆ. ಮಹಿಳಾ ರಾಜಕೀಯ ಪ್ರವೇಶದಿಂದ ಪ್ರಸ್ತುತ ರಾಜಕಾರಣದ ಸಂರಚನೆಯಲ್ಲಿಯೇ ಆಮೂಲಾಗ್ರ ಬದಲಾವಣೆಯಾಗುತ್ತದೆ ಎನ್ನುವ ಆಶಯವನ್ನು ಬಿಂಬಿಸಲಾಗಿದೆ. ಮಹಿಳಾ ಪರ ತಳೆದಿರುವ ನಿಲವುಗಳು ವಿರುದ್ಧವಾಗಿ ವ್ಯಕ್ತಪಡಿಸಿರುವ ನಿಲುವುಗಳನ್ನು ಮುಖಾಮುಖಿಯಾಗಿಸಿ ತೌಲನಗೊಳಪಡಿಸುವ ಪ್ರಯತ್ನ ಮಾಡಲಾಗಿದೆ. ಆಧುನಿಕ ಪೂರ್ವ ಹಾಗೂ ಆಧುನಿಕ ಭಾರತದ ರಾಜಕಾರಣದಲ್ಲಿ ಮಹಿಳಾ ರಾಜಕಾರಣದ ಸಾಧ್ಯತೆಗಳನ್ನೂ ವಿಶ್ಲೇಷಿಸಲಾಗಿದೆ.

## ಅಧ್ಯಾಯ - ೩ : ನಗರ ಹಾಗೂ ಗ್ರಾಮೀಣ ಪರಿಕಲ್ಪನೆಗಳು

ಮಹಿಳಾ ರಾಜಕಾರಣದ ಚರ್ಚೆಯನ್ನು ನಗರ ಗ್ರಾಮೀಣ ಎಂಬ ವಿಭಜನೆಯ ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಭಾರತದ ವರ್ಣವ್ಯವಸ್ಥೆ ಈ ದೇಶದ ರಾಜಕಾರಣವನ್ನು ಪ್ರಭಾವಿಸುತ್ತ, ನಿಯಂತ್ರಿಸುತ್ತ ಬಂದ ಮಾದರಿಯಲ್ಲೆ ಅದರ ಮುಂದುವರಿಕೆಯಾಗಿ ಪ್ರಸ್ತುತ ರಾಜಕಾರಣವು ಕುಟುಂಬ, ಜಾತಿ, ವರ್ಗಗಳ, ಪ್ರಾದೇಶಿಕ, ಭಾಷೆಗಳ ಹಿನ್ನೆಲೆಯಲ್ಲಿ ಹೇಗೆ ಕಾರ್ಯನಿರತವಾಗಿದೆ ಎಂಬುದನ್ನು ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನವು ಭಾರತವನ್ನೊಂದು ಲಿಂಗಭೇದ ವ್ಯವಸ್ಥೆ ಆಧಾರಿತ ಸಮಾಜವಾಗಿ ಮೂಲಭೂತವಾಗಿ ಗುರುತಿಸಿಕೊಳ್ಳುತ್ತಲೇ ಅದಕ್ಕೆ ಪೂರಕವಾಗಿ ಭಾರತವು ಹಳ್ಳಿಗಳ ಹಾಗೂ ನಗರಗಳೆಂಬ ಭೇದವನ್ನು ಸಮಸ್ಯೆಯ ಸ್ವರೂಪದಲ್ಲಿಯೇ ಹೊಂದಿದ್ದಾಗಿದೆ ಎಂಬುದನ್ನು ಗುರುತಿಸಿಕೊಳ್ಳುತ್ತದೆ. ನಗರ ಹಾಗೂ ಗ್ರಾಮೀಣ ಎಂಬ ಪ್ರತ್ಯೇಕತೆಯ ಮಹಿಳಾ ರಾಜಕಾರಣದಲ್ಲಿ ಸಮೀಕರಣಗೊಳ್ಳುವ ಸಾಧ್ಯತೆ, ಈ ಸಮೀಕರಣದಿಂದ ಮಹಿಳಾ ರಾಜಕಾರಣದಲ್ಲಿ ಪ್ರತಿಫಲಿತವಾಗುವ ವಿಧಾನಗಳನ್ನು ಹಲವು ಅಂಶಗಳ ವ್ಯಾಪ್ತಿಯಲ್ಲಿ ಪರಿಶೀಲಿಸಲು ಯತ್ನಿಸಿದೆ. ನಗರಗಳು ಹಳ್ಳಿಗಳ ವಲಸೆಯಿಂದ ಸಮಸ್ಯೆಗಳನ್ನು ಎದುರಿಸುತ್ತಿವೆ. ಅತಿಯಾದ ಜನಸಂಖ್ಯೆಯಿಂದ ಕೈಗಾರಿಕೀಕರಣದಂದ ನಗರಗಳು ಆಡಳಿತಕ್ಕೆ ತಲೆನೋವಾಗಿದೆ. ಹಳ್ಳಿಗಳು ಅಬ್ಬರದ ಅಭಿವೃದ್ಧಿ ಯೋಜನೆಗಳ ಪ್ರಚಾರದ ನಡವೆಯಲ್ಲಿ ಮೂಲಭೂತ ಸೌಕರ್ಯಗಳಿಲ್ಲದೆ ಸರಕಾರಗಳಿಗೆ ಸಮಸ್ಯೆಯಾಗಿ ಪರಿಣಮಿಸಿರುವುದನ್ನು ನೋಡಲಾಗಿದೆ. ಇವೆರಡು ಪರಸ್ಪರ ಪೈಪೋಟಿ ಮೇಲೆ ತಮ್ಮ ಸಮಸ್ಯೆಗಳನ್ನು ಇನ್ನಷ್ಟು ಬಲಪಡಿಸಿಕೊಳ್ಳುವುದರ ಹಿಂದೆ ಮಹಿಳೆಯರ ಬಗೆಗಿನ ನಿರ್ಲಕ್ಷ್ಯ ಅನಾದರವನ್ನು ಗುರುತಿಸಲಾಗಿದೆ. ಮಹಿಳೆ-ಬಡತನ-ಸಮಸ್ಯೆಯ ಸ್ವರೂಪವೇ ಎಂಬುದನ್ನು ವಿಶ್ಲೇಷಿಸಲಾಗಿದೆ. ನಗರ ನಿರ್ಮಾಣ ಹಾಗೂ ಹಳ್ಳಿಗಳ ನಿರ್ಮಾಣದ ರೂಪದಲ್ಲಿ ಅವಿಷ್ಕಾರಗೊಂಡ ಪರಿಯನ್ನು ಚರ್ಚಿಸಲಾಗಿದೆ. ನಗರ-ಹಳ್ಳಿಗಳ ನಡುವಿನ ಅಸಹಜವಾದ ಅಂತರವು ದೇಶದ ಎಲ್ಲಾ ಅಂಶಗಳ ಮೇಲೆ ಪ್ರಭಾವ ಬೀರಿರುವುದನ್ನು ವಿವರಿಸಲಾಗಿದೆ. ನಗರ-ಗ್ರಾಮೀಣ ಎಂಬೀ ಪ್ರಾಂತ್ಯಗಳಲ್ಲಿ ಮಹಿಳೆ ಭೌಗೋಳಿಕವಾಗಿ ಆಯಾ ಪ್ರಾಂತ್ಯಗಳ ಲಕ್ಷಣಗಳನ್ನು ಹೇಗೆ ಮೈಗೂಡಿಸಿಕೊಂಡಿದ್ದಾಳೆ ಎಂಬುದನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ - ೪ : ಸ್ವಾತಂತ್ರ್ಯೋತ್ತರ ಕಾಲದ ಬಳ್ಳಾರಿ ಜಿಲ್ಲೆಯ ರಾಜಕಾರಣ ಮತ್ತು ಮಹಿಳೆ**

ಬಳ್ಳಾರಿ ನಗರದ ರಾಜಕಾರಣದಲ್ಲಿ ಮಹಿಳೆ ನಗರಸಭೆ, ಲೋಕಸಭೆ, ವಿಧಾನಸಭೆ ಕ್ಷೇತ್ರಗಳಲ್ಲಿ ಹೊಂದಿದ ಪ್ರವೇಶವನ್ನು ಅಂಕಿ-ಅಂಶಗಳ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ. ಇಲ್ಲಿನ ಮಹಿಳಾ ಪ್ರವೇಶದ ಹಿನ್ನೆಲೆ, ರಾಜಕಾರಣದ ಸಾಧ್ಯತೆಗಳನ್ನು ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದ ಸಮಕಾಲೀನ ರಾಜಕಾರಣದವರೆಗೆ ಚರ್ಚಿಸಲಾಗಿದೆ. ಈ ನಗರ ಪ್ರವೇಶಗಳಲ್ಲಿ ಮಹಿಳಾ ರಾಜಕಾರಣದಿಂದ ಉಂಟಾಗುವ ಬದಲಾವಣೆಗಳನ್ನು ಹಳ್ಳಿಗಳ ಮಹಿಳಾ ರಾಜಕಾರಣದ ಜೊತೆಗೆ ತೌಲನೆಗೊಳಪಡಿಸಲಾಗಿದೆ. ೧೯೫೨ ರಿಂದ ೧೯೯೯ರ ಎಲ್ಲಾ ಚುನಾವಣೆಗಳಲ್ಲಿ ಮಹಿಳೆಯರು ಪಾಲ್ಗೊಂಡ ಬಗ್ಗೆ ಅಂಕಿ-ಅಂಶಗಳನ್ನು ಅವಲೋಕನ ಮಾಡಿ ಸಂರೂಪಗೊಳಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರಾಂತ್ಯದ ಮಹಿಳಾ ರಾಜಕಾರಣ, ರಾಷ್ಟ್ರ ರಾಜಕಾರಣದ ಮೇಲೆ ಹೇಗೆ ಪ್ರಭಾವ ಬೀರಿದೆ ಹಾಗೂ ತಳಮಟ್ಟದ ರಾಜಕೀಯ ಸ್ತರಗಳಲ್ಲಿ ಹೇಗೆ ಪ್ರಭಾವಿಸಿದೆ ಎಂಬುದನ್ನು ಮುಖ್ಯವಾಗಿ ಗಮನಿಸಲಾಗಿದೆ.

**ಅಧ್ಯಾಯ - ೫ : ಬಳ್ಳಾರಿ ಜಿಲ್ಲೆಯ ನಗರಸಭೆ ಹಾಗೂ ಪಂಚಾಯತಿಗಳ ಸದಸ್ಯೆಯರ ಪ್ರೊಫೈಲ್**

ಬಳ್ಳಾರಿ ಜಿಲ್ಲೆಯ ಗ್ರಾಮದ ಪ್ರದೇಶಗಳ ರಾಜಕಾರಣದಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆಯನ್ನು ಗುರುತಿಸಲಾಗಿದೆ. ಇದು ಪಟ್ಟಣ ಪಂಚಾಯತ, ಗ್ರಾಮ ಪಂಚಾಯತಿ, ತಾಲೂಕು ಪಂಚಾಯತಿ ಇತ್ಯಾದಿ ಅಂಕಿ-ಅಂಶಗಳ ಸಹಿತವಾದ ವಿಶ್ಲೇಷಣೆಯನ್ನು ಮಾಡಲಾಗಿದೆ. ಗ್ರಾಮೀಣ, ರಾಜಕಾರಣದಲ್ಲಿ ಮಹಿಳೆಯ ಪ್ರವೇಶದಿಂದಾದ ಬದಲಾವಣೆಯನ್ನು, ಸುಧಾರಣೆಗಳನ್ನು ಅವಲೋಕಿಸುವುದು. ಆಯ್ದ ಚುನಾಯಿತ ಮಹಿಳೆಯರ ಸಂದರ್ಶನ, ಪ್ರಶ್ನಾವಳಿ ಮೂಲಕ ಮಾಹಿತಿ ಸಂಗ್ರಹಿಸಿ ಕೇಂದ್ರೀಕರಿಸಲಾಗಿದೆ. ಪಂಚಾಯತ್ ರಾಜ್ ಕಾಯಿದೆಯಿಂದ ಉಂಟಾದ ಮಹಿಳಾ ಅವಕಾಶಗಳ ಕುರಿತು ಮೇಲಿನಮಶಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಗ್ರಾಮವು ಒಂದು ತಳದಲ್ಲಿರುವ ಸಣ್ಣ ವ್ಯವಸ್ಥೆಯಾಗಿ ಗುರುತಿಸಲ್ಪಟ್ಟಾಗ್ಯೂ ಅದು ರಾಷ್ಟ್ರೀಯ ಅಭಿವೃದ್ಧಿ, ಯೋಜನೆ, ಮತ್ತು ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಜ್ಞೆಗಳಿಂದ ಒಡಮೂಡುತ್ತಿರುವ ಒಂದು ಘಟಕವಾಗಿದೆ. ಈ ಘಟಕದಲ್ಲಿ ಮಹಿಳಾ ರಾಜಕಾರಣ ಮೇಲಿನವುಗಳನ್ನು ಹೇಗೆ ಒಪ್ಪಿಕೊಂಡಿದೆ ಎನ್ನುವುದನ್ನು ಗಮನಿಸಲಾಗಿದೆ.

**ಅಧ್ಯಾಯ - ೬ : ಸಮಾರೋಪ**

ಸಮಾರೋಪ ಭಾಗದಲ್ಲಿ ನಗರ ಹಾಗೂ ಗ್ರಾಮೀಣ ಪ್ರದೇಶದ ಮಹಿಳಾ ರಾಜಕಾರಣದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಕೃತ ಸಂದರ್ಭದಲ್ಲಿ ಉಂಟಾಗುತ್ತಿರುವ ಒಟ್ಟು ಚರ್ಚೆಯನ್ನೂ ಪ್ರವೇಶಿಕೆಯಾಗಿ ನೀಡಿಕೊಂಡು, ಮಹಾಪ್ರಬಂಧದಿಂದ ನಗರ ಹಾಗೂ ಗ್ರಾಮಮಟ್ಟದಲ್ಲಿ ರಾಜಕೀಯದ ಪ್ರವೇಶದಿಂದ ಮಹಿಳೆಯರ ಸ್ಥಾನಮಾನ

ಹಾಗೂ ಅವರು ನಿರ್ವಹಿಸುತ್ತಿರುವ ಅಧಿಕಾರ, ಅವರ ಸಾಮರ್ಥ್ಯದ ಅವಲಂಬನೆ, ಪರಾವಲಂಬನೆ ಮುಂತಾದ ವಿಷಯಗಳನ್ನು ಅಧ್ಯಯನದ ಮುಖ್ಯ ಫಲಿತಗಳೆಂದು ಹದಿನೈದು ಅಂಶಗಳಲ್ಲಿ ಗುರುತಿಸಲಾಗಿದೆ. ಅಲ್ಲದೇ ಪ್ರಸ್ತುತ ಅಧ್ಯಯನವು ಕಂಡುಕೊಂಡ ಪರಿಸ್ಥಿತಿಗನುಗುಣವಾಗಿ ಮುಂದಿನ ದಿನಗಳಲ್ಲಿ ಕೈಗೊಳ್ಳಬಹುದಾದ ಕೆಲವು ಅಂಶಗಳನ್ನು ಸಲಹೆಯೇ ರೂಪದಲ್ಲಿ ನೀಡಲಾಗಿದೆ. ಅನುಬಂಧದಲ್ಲಿ ಗ್ರಂಥಸೂಚಿಯನ್ನು ಕೊಡಲಾಗಿದೆ. ಇದು ಈ ಮಹಾಪ್ರಬಂಧದ ಒಟ್ಟು ಸ್ವರೂಪವಾಗಿದೆ.



# ೨

# ಭಾರತದಲ್ಲಿ ಮಹಿಳಾ ರಾಜಕಾರಣದ ಸಾಧ್ಯತೆಗಳು

ರಾಜಕೀಯ ಎಂಬುದು ನಿರ್ಧಾರಕ ಶಕ್ತಿ. ಅಧಿಕಾರ ಹಾಗೂ ಸವಲತ್ತುಗಳನ್ನು ಕೈಗೂಡಿಸಿಕೊಂಡ ಒಂದು ಸಾಮಾಜಿಕ ಸಂಸ್ಥೆ. ಹಾಗಾಗಿ ಅದನ್ನು ಪಡೆಯಬೇಕೆಂಬುದು, ನಿರಂತರವಾಗಿ ತಮ್ಮ ಸ್ವಾಧೀನದಲ್ಲೇ ಉಳಿಸಿಕೊಳ್ಳಬೇಕೆಂಬುದು ಹಾಗೂ ಮತ್ತೊಬ್ಬರಿಗೆ ದೊರೆಯದಂತಾಗಿಸುವುದು ರಾಜಕಾರಣದ ಅಘೋಷಿತ ಚಟುವಟಿಕೆ ಮತ್ತು ಅಲಿಖಿತ ನೀತಿ ಸಂಹಿತೆಯಾಗಿರುತ್ತದೆ. ಈ ನೀತಿ ಸಂಹಿತೆ ಹಾಗೂ ಚಟುವಟಿಕೆಯನ್ನು ಆಧರಿಸಿಯೇ ಸ್ತ್ರೀ ಪುರುಷರ ನಡುವಿನ ರಾಜಕೀಯ ಸಂಘರ್ಷ ಹಾಗೂ ಒಪ್ಪಂದಗಳು ಘಟಿಸಿವೆ. ಆಧುನಿಕ ಭಾರತದ ಸಂದರ್ಭದಲ್ಲಾದರೂ ಅಷ್ಟೇ, ತಮ್ಮ ರಾಜಕೀಯ ಹಕ್ಕುಗಳನ್ನು ಕುರಿತಂತೆ ಮಹಿಳಾ ಚಳುವಳಿಗಳು ನಡೆಸುತ್ತಿರುವ ಸಂಘರ್ಷಗಳು ಅದಕ್ಕೆ ಉತ್ತರ ರೂಪವಾಗಿ ಸಮಾಜವು ಏರ್ಪಡಿಸಿಕೊಳ್ಳುತ್ತಿರುವ ಒಪ್ಪಂದಗಳ ಒಟ್ಟು ಮೊತ್ತವೇ ಮಹಿಳಾ ರಾಜಕಾರಣದ ಸ್ವರೂಪ ಸಾಧ್ಯತೆಗಳನ್ನು ನಿರ್ಧರಿಸುವುದಾಗಿದೆ.

ಭಾರತದಲ್ಲಿನ ಮಹಿಳಾ ರಾಜಕಾರಣವನ್ನು ಕುರಿತಾದ ಇದುವರೆಗಿನ ಅಧ್ಯಯನಗಳು ಮುಖ್ಯವಾಗಿ ಎರಡು ನೆಲೆಗೆ ಸಂಬಂಧಿಸಿದ್ದಾಗಿದೆ.

೧. ರಾಷ್ಟ್ರೀಯ ಹೋರಾಟದಲ್ಲಿನ ಮಹಿಳೆಯರ ಪಾಲ್ಗೊಳ್ಳುವಿಕೆ
೨. ಪಂಚಾಯತ್‌ರಾಜ್ ಮೀಸಲಾತಿಯಿಂದಾದ ಮಹಿಳೆಯರ ರಾಜಕೀಯ ಪ್ರವೇಶ.

ಮೊದಲ ಬಗೆಯ ಅಧ್ಯಯನವು ರಾಷ್ಟ್ರೀಯ ಚಳುವಳಿಯಲ್ಲಿ ಅದರಲ್ಲೂ ಗಾಂಧಿ ನೇತೃತ್ವದಲ್ಲಿ ನಡೆದ ಚಳುವಳಿಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನು

ವಿವರಗಳಲ್ಲಿ ಶೋಧಿಸುವುದಾದರೂ ಅದು ಮಹಿಳಾ ಪ್ರಜ್ಞೆಯ ಜಾಗೃತಿ, ಮಹಿಳಾ ಚಳುವಳಿಯ ಉದಯವನ್ನು ನಿರ್ಲಕ್ಷಿಸುತ್ತದೆ.ಗಾಂಧೀಜಿಯವರ ನೇತೃತ್ವದ ಅಸಹಕಾರ ಆಂದೋಲನ, ಅಹಿಂಸಾತ್ಮಕ ಸತ್ಯಾಗ್ರಹ ಹೋರಾಟದಂತಹ ಪಾಲ್ಗೊಳ್ಳುವಿಕೆಯನ್ನು ಆದರ್ಶದ ನೆಲೆಯಾಗಿಯೇ ಗುರುತಿಸಲಾಗಿದೆ. ಎದುರಾಳಿಯ ಉದ್ದೇಶದ ಹಿಂಸೆಗೆ ಯಾವುದೇ ಪ್ರತಿರೋಧವನ್ನು ತೋರದೇ, ತಮ್ಮನ್ನು ಒಡ್ಡಿಕೊಳ್ಳುವ ಮೂಲಕ ಹಿಂಸೆ ಬಯಸುವವನ ಮನಃಪರಿವರ್ತನೆಯನ್ನು ಮಾಡುವ ಮಾನಸಿಕ ದೃಢತೆಯೇ ವೀರತ್ವ ಎಂಬುದು ಗಾಂಧೀಜಿಯವರ ವೀರತ್ವದ ಬಗೆಗಿನ ವಿವರಣೆಯಾಗಿತ್ತು. ಈ ವೀರತ್ವಗುಣ ಮಹಿಳೆಯರಿಗೆ ಇದೆ ಎಂಬುದನ್ನರಿತ ಗಾಂಧೀಜಿಯವರು ಅವರನ್ನು ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸುತ್ತಿದ್ದರು. ಸ್ವಭಾವತಃ ಮಹಿಳೆಯರು ಈ ಸ್ವಹಿಂಸೆಗೆ ಒಪ್ಪಿಕೊಳ್ಳುವ ಮನೋಧಾರ್ಢ್ಯವನ್ನು ಹೊಂದಿದ್ದರೆಂದು ಸಮಾಜದ ನಿಲುವೂ ಅವರನ್ನು ಚಳುವಳಿಗೆ ಧುಮುಕುವಂತೆ ಮಾಡಿತ್ತು. ಇದನ್ನೆ ಗಾಂಧೀಜಿಯವರು ವೀರತ್ವ ಎಂದು ಪ್ರತಿಪಾದಿಸತೊಡಗಿದ್ದು. ಅನೇಕರು ಈ ಚಳುವಳಿಯಲ್ಲಿ ಪಾಲ್ಗೊಂಡರು. ಹೀಗಾಗಿ ರಾಷ್ಟ್ರೀಯ ಹೋರಾಟದ ಚಳುವಳಿಯ ಯಶಸ್ಸಿಗೆ ಮಹಿಳೆಯರ ಪಾಲ್ಗೊಳ್ಳುವಿಕೆ, ಸಹಭಾಗಿತ್ವ ಅತ್ಯಗತ್ಯವೆಂದು ಭಾವಿಸಲಾಗಿತ್ತು. ಅದೇ ವೇಳೆಗೆ ಕ್ರಾಂತಿಕಾರಿ ಹೋರಾಟಗಳ ಸಂದರ್ಭದಲ್ಲಿ ಮಹಿಳೆಯರ ಸಹಭಾಗಿತ್ವವನ್ನು ಪೂರ್ಣವಾಗಿ ಒಪ್ಪಿಕೊಳ್ಳಲಿಲ್ಲ ಅಥವಾ ನಿರಾಕರಿಸಿರುವುದನ್ನು ಕಾಣುತ್ತೇವೆ.

ಈ ಬಗೆಯ ಕ್ರಾಂತಿಕಾರಿ ಹೋರಾಟಗಳನ್ನು ದಾಖಲಿಸುವಾಗಲೂ 'ರಾಷ್ಟ್ರೀಯತಾವಾದಿ ಚರಿತ್ರೆಕಾರರು ಭಾರತೀಯ ಸಮಾಜದ ಪ್ರತಿಷ್ಠಿತ ವರ್ಗದ ಮಹಿಳೆಯರ ಹೋರಾಟಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟರು. ಆ ಹೋರಾಟಗಾರರೆಂದರೆ ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ಹೋರಾಡಿದ ಕಿತ್ತೂರು ರಾಣಿ ಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ, ರಾಣಿ ಅವಂತಿಬಾಯಿ, ಬೇಗಂ ಜೀನತ್ ಮಹಲ್, ಬೇಗಂ ಹಜರತ್ ಮಹಲ್ ಮುಂತಾದವರು' (ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಡಾ.ಪ್ರೀತಿ ಶುಭಚಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು. ೭೧) ಇದರೊಟ್ಟಿಗೆ ಹೋರಾಟ ನಡೆಸಿ ಪ್ರಾಣಾರ್ಪಣೆಗೈದ, ಜೈಲು ಶಿಕ್ಷೆ ಅನುಭವಿಸಿದ, ಅತ್ಯಾಚಾರ ದೌರ್ಜನಕ್ಕೊಳಗಾದ ಆದಿವಾಸಿಗಳ, ಬುಡಕಟ್ಟು ಗ್ರಾಮೀಣ ಪರಿಸರದ ರೈತ ಮಹಿಳೆಯರು, ಕಾರ್ಮಿಕ ಮಹಿಳೆಯರು ಇತ್ತೀಚಿನ ಚರಿತ್ರೆಕಾರರಿಂದ ಪರಿಚಯಿಸಲ್ಪಟ್ಟಿದ್ದಾರೆ. ಈ ಹೋರಾಟಗಳನ್ನು ಗುರುತಿಸುವಾಗ ಎರಡು ಅಂಶಗಳು ಗೋಚರವಾಗುತ್ತವೆ. ಮೊದಲನೆಯದಾಗಿ ಗಾಂಧೀಜಿಯವರ ನೇತೃತ್ವದಲ್ಲಿ ಹೋರಾಟದಲ್ಲಿ ಮಹಿಳಾ ಸಮುದಾಯದ ರಾಷ್ಟ್ರೀಯ ಹೋರಾಟದಲ್ಲಿನ ಪಾಲ್ಗೊಳ್ಳುವಿಕೆ ಹಾಗೂ ಅಲ್ಲಿಯೇ ಎತ್ತಲಾದ ಸಾಮಾಜಿಕ ಸುಧಾರಣೆಯ ವಿಚಾರಗಳು, ಆಲೋಚನೆಗಳ ವಿಶ್ಲೇಷಣೆ ಇವುಗಳು ಮಹಿಳಾ ಹೋರಾಟಗಳನ್ನು, ವಿಚಾರಗಳನ್ನು ನಿರ್ಲಕ್ಷಿಸಿರುವುದು ಮುಂದಿನ ಸ್ತ್ರೀವಾದ ನಿರ್ವಚನೆಗೆ ದಾರಿಯಾಯಿತು. ಎರಡನೆಯದಾಗಿ ಅಂದಿನ ಮಹಿಳಾ ಪಾಲ್ಗೊಳ್ಳುವಿಕೆಯನ್ನು ಚಿತ್ರಿಸುವಾಗ ತಾರತಮ್ಯವಿರುವುದನ್ನು ತೋರಿಸುತ್ತಲೇ ಇನ್ನೊಂದೆಡೆ ಗ್ರಾಮೀಣ ನೆಲೆಯಲ್ಲಿ ಗ್ರಾಮೀಣ, ಬಡ ಸಮಾಜದ ಕೆಳಸ್ತರದ ಮಹಿಳೆಯರ ಹೋರಾಟಗಳ ಕುರಿತು ಇತ್ತೀಚಿನ ಚರಿತ್ರೆಕಾರರು ಒದಗಿಸುತ್ತಿರುವ ವಿಶ್ಲೇಷಣೆ.

ರಾಷ್ಟ್ರೀಯ ಹೋರಾಟದಲ್ಲಿನ ಮಹಿಳಾ ಪಾಲ್ಗೊಳ್ಳುವಿಕೆ, ನಡೆಸಿದ ಮಹಿಳಾಪರ ಚಳುವಳಿಗಳು, ಸ್ತ್ರೀವಾದದ ಚಿಂತನೆ, ಆಲೋಚನೆಗಳೆಲ್ಲವೂ ದೇಶ ವಿಮುಕ್ತಿಯ ಅಂಗವಾಗಿ ಪರಿಗಣಿಸಲ್ಪಟ್ಟಿವೆ. ಮಹಿಳಾ ಪ್ರಜ್ಞೆ, ಜಾಗೃತಿ, ಆ ಮೂಲಕ ಹುಟ್ಟಿಕೊಂಡ ಮಹಿಳಾ ಚಳುವಳಿಯ ಕುಡಿಗಳನ್ನು ನಿರ್ಲಕ್ಷಿಸಿದೆ.ಈ ನಿರ್ಲಕ್ಷ್ಯವನ್ನು ವಿರೋಧಿಸಿ ಮಹಿಳಾ ಅಧ್ಯಯನವು ಮಹಿಳಾ ಚಳುವಳಿಯ ಚರಿತ್ರೆಯನ್ನು ನಿರ್ಮಿಸುವ ಪ್ರಯತ್ನವನ್ನು ಮಾಡಿದೆ.

ಎರಡನೆಯ ನೆಲೆಯಲ್ಲಿ ಅಧ್ಯಯನವು ಇತಿಹಾಸದ ಶೋಧಕ್ಕಿಂತ ಸಮಕಾಲೀನ ವಿಷಯಗಳನ್ನು ಆಧರಿಸಿ ರೂಪುಗೊಳ್ಳಬೇಕಾಗಿದ್ದರಿಂದ ಈ ಚರ್ಚೆಯಲ್ಲಿನ ವಾಗ್ವಾದಗಳು ಈ ಸಮಾಜದ ರಾಜಕಾರಣದಲ್ಲಿನ ಲಿಂಗತಾರತಮ್ಯದ ಘರ್ಷಣೆ ಹಾಗೂ ಒಪ್ಪಂದಗಳನ್ನು ಮುಖಾಮುಖಿಯಾಗಿಸುತ್ತದೆ. ಪಂಚಾಯತ್ ರಾಜ್ಯಗಳಲ್ಲಿನ ಮಹಿಳೆಯ ಪಾಲ್ಗೊಳ್ಳುವಿಕೆ ಕುರಿತಂತೆ ಇದುವರೆಗೆ ನಡೆದಿರುವ ಅಧ್ಯಯನವನ್ನು ರೂಪುಗೊಳಿಸುವುದಾಗಿದೆ. ಅದರಲ್ಲಿ ಎರಡು ಅಭಿಪ್ರಾಯ ಸ್ಪಷ್ಟವಾಗಿ ಗೋಚರಿಸುತ್ತವೆ. ಒಂದು ಮಹಿಳೆಯರ ಪರವಾದ ಅತ್ಯಂತ ಉಮೇದಿನಿಂದ ಕೂಡಿದ ವಿಶ್ಲೇಷಣೆ. ಎರಡು, ಮಹಿಳೆಯರ ರಾಜಕೀಯ ಪ್ರವೇಶವನ್ನು ಪೂರ್ವಾಗ್ರಹ ನಿಲುವಿನಿಂದ ಅನುಮೋದಿಸುವ ವಿಶ್ಲೇಷಣೆ.

ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ರಾಜಕೀಯ ಪ್ರವೇಶಿಸುವುದರಿಂದ ಪ್ರಸ್ತುತ ರಾಜಕಾರಣದ ಸಂರಚನೆಯಲ್ಲಿಯೇ ಆಮೂಲಾಗ್ರ ಬದಲಾವಣೆಯೊಂದು ಆಗುತ್ತಿದೆ. ಇವರ ಪ್ರವೇಶದಿಂದಾಗಿ ಇಡೀ ರಾಜಕಾರಣಕ್ಕೆ ಭಿನ್ನ ಮೌಲ್ಯ, ಆದ್ಯತೆ, ಹಾಗೂ ದೃಷ್ಟಿಕೋನವನ್ನು ಒದಗಿಸುತ್ತಾರೆ. ಈಗಾಗಲೇ ಸ್ಥಾಪಿತಗೊಂಡಿರುವ ಮೌಲ್ಯಗಳಿಗಿಂತ ಭಿನ್ನವಾದ ಮೌಲ್ಯಗಳು ಆಲೋಚನೆಗಳನ್ನು ಹುಟ್ಟು ಹಾಕುತ್ತಾರೆ. ಕುಟುಂಬದ, ಸಮಾಜದ ಸಹಕಾರ ದೊರೆತಿರುವ ಮಹಿಳೆಯರು ಸ್ವಸಾಮರ್ಥ್ಯದಿಂದ ಮೇಲೆ ಬಂದಿರುವವರು, ಅಪೂರ್ವ ಸಂಘಟನಾಶಕ್ತಿ ಹೊಂದಿರುವವರು, ಚುನಾಯಿತರಾದ ಮೇಲೆ ಎಲ್ಲವನ್ನು ಕಲಿತು ಇತರರಿಗಿಂತ ಮುಂದೆ ಬಂದು ಪಂಚಾಯತ್‌ಗಳಲ್ಲಿ ಆದ್ಯತೆಗಳ ಪಟ್ಟಿಯನ್ನು ಬದಲಿಸಿದ್ದಾರೆ.

ಪಂಚಾಯತ್ ಸಂಸ್ಥೆಗಳಲ್ಲಿ ಅದರಲ್ಲೂ ಗ್ರಾಮಪಂಚಾಯತ್‌ಗಳಲ್ಲಿ ಮಹಿಳೆಯ ಅಧಿಕ ಪಾಲ್ಗೊಳ್ಳುವಿಕೆಯಿಂದ ಅನೇಕ ಬದಲಾವಣೆಗಳು, ಸುಧಾರಣೆಗಳು, ಅಭಿವೃದ್ಧಿ ಕಾರ್ಯಗಳು ಆಗಿವೆ. ವೈಯಕ್ತಿಕ ನೆಲೆಯಲ್ಲಿ ಚುನಾಯಿತರಾದ ಮಹಿಳೆಯರು ಆತ್ಮಸ್ಥೈರ್ಯವನ್ನು ಬೆಳೆಸಿಕೊಂಡು, ಸಮಾಜದ ಎಲ್ಲಾ ವರ್ಗಗಳೊಂದಿಗೆ ಮಿಳಿತಗೊಂಡಂತೆಲ್ಲಾ ಅವರ ಅರಿವಿನ ಮಟ್ಟ ಹೆಚ್ಚಿದೆ. ಒಬ್ಬ ಪುರುಷ ಅಕ್ಷರಸ್ಥನಾದರೆ ಅದು ಒಬ್ಬ ವ್ಯಕ್ತಿ ಮಾತ್ರ ಅಕ್ಷರಸ್ಥನಾದಂತೆ ಅದೇ ಒಬ್ಬ ಹೆಣ್ಣು ಮಗಳು ಅಕ್ಷರಸ್ಥಳಾದರೆ, ಒಂದು ಕುಟುಂಬ ಅಕ್ಷರ ಜ್ಞಾನದ ಕಡೆಗೆ ಸಾಗುತ್ತದೆ (ನಾಯಕತ್ವದ ಹೊಸ್ತಿಲಲ್ಲಿ ಮಹಿಳೆ ಕೆ.ಆರ್.ಮಂಗಳಾ, ಪ್ರಜಾವಾಣಿ ದಿನಪತ್ರಿಕೆ, ದಿನಾಂಕ.೫.೩.೨೦೦೦). ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ ಎಂಬ ಸಾಕ್ಷರತಾ ಆಂದೋಲನದ ಘೋಷಣೆಗಳಂತೆ ಹೆಣ್ಣೊಂದು ಅಧಿಕಾರದ ಚುಕ್ಕಾಣಿ ಹಿಡಿದರೆ ನವಸಮಾಜಕ್ಕಾಗಿ ಒಂದು

ಹೆಜ್ಜೆ ಮುಂದಿಟ್ಟಂತೆ ಎಂಬ ಹೇಳಿಕೆಗಳಂತೆ, ಅನೇಕ ಚುನಾಯಿತ ಮಹಿಳೆಯರು ತಾವು ಪಡೆದುಕೊಂಡ ಅರಿವನ್ನು, ಆತ್ಮ ಸ್ಥೈರ್ಯವನ್ನು, ಆರೋಗ್ಯ ಮತ್ತು ನೈರ್ಮಲ್ಯದ ಪಾಠವನ್ನು ಮೊದಲು ತಮ್ಮ ಮನೆಯಲ್ಲಿ ಆಚರಣೆಗೆ ತಂದಿದ್ದಾರೆ.

ಹೀಗೆ ರಾಜಕೀಯ ಪ್ರವೇಶದಿಂದಾಗಿ, ರಾಜಕೀಯ ಪ್ರಜ್ಞೆಯುಳ್ಳ ಮಹಿಳೆಯರು ಪಂಚಾಯತಿ ಸಭೆಗಳಲ್ಲಿ ಪಾಲ್ಗೊಳ್ಳುತ್ತಿರುವುದರಿಂದ ಸಭೆಗೆ ಗಾಂಭೀರ್ಯವನ್ನು ತಂದುಕೊಟ್ಟಿದ್ದಾರೆ. ಬಹಿರಂಗ ಅವ್ಯವಹಾರಗಳಿಗೆ ತಕ್ಕಮಟ್ಟಿಗೆ ಕಡಿವಾಣ ಬಿದ್ದಿದೆ. ಪಂಚಾಯತ್ ಸಭೆಗಳಲ್ಲಿ ಮೊದಲಿದ್ದ ಅಶ್ಲೀಲ ಪದಗಳ ಬಳಕೆ ಕಡಿಮೆಯಾಗುತ್ತಿದೆ. ಹೆಣ್ಣು ಮಕ್ಕಳನ್ನು ಕುರಿತು ಮಾತನಾಡುವಾಗ ಹಗುರವಾಗಿ ವರ್ತಿಸದೆ ಎಚ್ಚರಿಕೆ ವಹಿಸುತ್ತಿದ್ದಾರೆ. ಪಶ್ಚಿಮ ಬಂಗಾಳದ ಕುಲ್ಪಿ ಕೋರಿ ಮಹಿಳಾ ಪಂಚಾಯತ್‌ನ ಕಾರ್ಯದರ್ಶಿ ಖೋಗೇಂದ್ರ ನಾಥ್ ಮೊಹತೋ ಹೇಳುತ್ತಾರೆ, 'ಈ ಹಿಂದೆ ನಾನು ಕೆಲಸ ಮಾಡುತ್ತಿದ್ದ ಪಂಚಾಯತ್‌ಗಳಲ್ಲೆಲ್ಲಾ ಗಂಡಸರು ತಮ್ಮ ಸಿಗರೇಟು, ಪಾನ್‌ಬೀಡಗಳ ವೈಯಕ್ತಿಕ ಖರ್ಚನ್ನು ಪಂಚಾಯತಿ ಲೆಕ್ಕಕ್ಕೆ ಸೇರಿಸುತ್ತಿದ್ದರು. ಆದರೆ ಇಲ್ಲಿನ ಮಹಿಳೆಯರು ಹಣದ ವಿಷಯದಲ್ಲಿ ತುಂಬಾ ಅಚ್ಚುಕಟ್ಟು, ಹಾಗೂ ಕೆಲಸದಲ್ಲಿ ನಿಷ್ಠಾವಂತರು.' ಹೀಗೆ ಮಹಿಳಾ ಪ್ರವೇಶದಿಂದಾಗಿ ರಾಜಕೀಯದಲ್ಲಿದ್ದ ಗಂಡಸರ ಗೂಂಡಾಗಿರಿ, Bossism ತುಂಬಾ ಕಡಿಮೆಯಾಗಿದೆ.

ಸಮಾಜದ ಒಟ್ಟು ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ರಾಜಕೀಯವಾಗಿ ಅಧಿಕ ಪ್ರವೇಶ ಪಡೆದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸ್ಥಿತಿಗತಿಯ ಬಗ್ಗೆ ವಿಶೇಷ ಗಮನವನ್ನು ನೀಡುವಂತಾಗಿ ಮಹಿಳೆಯರ ಆದ್ಯತಾವಲಯಗಳನ್ನು ಗುರುತಿಸುವಂತಾಗುತ್ತದೆ. ಅವರಲ್ಲಿರುವ ಪ್ರತಿಭೆಯನ್ನು ಹೊರತೆಗೆಯಲು ಅದನ್ನು ಸಾರ್ವಜನಿಕವಾಗಿ ಸಾದರಪಡಿಸಲು ಸಹಕಾರಿಯಾಗುತ್ತದೆ. ತಳಮಟ್ಟದಿಂದ ಮೇಲ್ಮಟ್ಟದ ರಾಜಕಾರಣದವರೆಗೆ ಮಹಿಳಾ ರಾಜಕೀಯ ಪ್ರವೇಶದಿಂದಾಗಿ ವ್ಯವಸ್ಥೆಯಲ್ಲಿ ಗಮನಾರ್ಹ ಬದಲಾವಣೆ ತರಲು ಸಾಧ್ಯವಾಗುತ್ತದೆ. ಪುರುಷನಷ್ಟೇ ಸರಿಸಮಾನವಾಗಿರುವ ಮಹಿಳೆಯರ ಜನಸಂಖ್ಯಾ ಬಲದಿಂದಾಗಿ ಈಗಿನ ಎಲ್ಲಾ ರಾಜಕೀಯ ಪಕ್ಷಗಳು ಪ್ರತ್ಯೇಕ ಮಹಿಳಾ ಘಟಕ (Womens unit wing) ಗಳನ್ನು ಆರಂಭಿಸಿವೆ. ಪ್ರತಿಯೊಂದು ಪಕ್ಷವೂ ತನ್ನ ಪ್ರಣಾಳಿಕೆಯಲ್ಲಿ ಮಹಿಳಾ ಆದ್ಯತೆಯನ್ನು ಕಾಯ್ದುಕೊಳ್ಳಬೇಕಾಗಿದೆ. ಚುನಾವಣೆಯಲ್ಲಿ ಗೆದ್ದು ಅಧಿಕಾರಕ್ಕೆ ಬಂದ ನಂತರ ಯಾವುದೇ ಪಕ್ಷವಾಗಲೀ, ಮಹಿಳೆಯರನ್ನು ನಿರ್ಲಕ್ಷಿಸುವಂತಿಲ್ಲ. ಅಧಿಕಾರದ ಚುಕ್ಕಾಣಿ ಹಿಡಿದ ರಾಜಕೀಯ ಪಕ್ಷವು ತನ್ನ ಪ್ರತಿಯೊಂದು ನೀತಿ ನಿರ್ಣಯಗಳಲ್ಲಿ ಸುಧಾರಣೆ ಕಾರ್ಯಕ್ರಮಗಳನ್ನು ಮಹಿಳೆಯರಿಗೆ ವಿಶೇಷವಾಗಿ ರೂಪಿಸಿ, ಜಾರಿಗೊಳಿಸುವುದು ಅನಿವಾರ್ಯವಾಗುತ್ತದೆ, ಇತ್ಯಾದಿ ಹಲವಾರು ಆಶಯಗಳೊಂದಿಗೆ ಮಹಿಳಾ ರಾಜಕಾರಣವನ್ನು, ಅದರಲ್ಲಿನ ಮೀಸಲಾತಿಯನ್ನು ಪ್ರಸ್ತುತಗೊಳಿಸಲಾಗುತ್ತಿದೆ.

ಮೇಲಿನ ವಾದ ಒಂದೆಡೆಯಾದರೆ, ಇದಕ್ಕೆ ಪ್ರತಿಯಾಗಿ ಮೇಲಿನದೆಲ್ಲ ಆಲೋಚನೆಗಳು ಕೇವಲ ಆದರ್ಶಗಳಾಗಿದ್ದು, ಅವು ವಾಸ್ತವಕ್ಕೆ ಇಳಿಯುವ ಯಾವ ಸೂಚನೆಗಳೂ ಕಾಣುತ್ತಿಲ್ಲವೆಂಬ ಅಭಿಪ್ರಾಯವು ದಟ್ಟವಾಗಿಯೇ ಸಮಾಜದಲ್ಲಿದೆ. ಇದುವರೆಗೆ ರಾಜಕೀಯದಲ್ಲಿ ಪಾಲ್ಗೊಂಡ ಮಹಿಳೆಯರ ಚಟುವಟಿಕೆಗಳು ಮೇಲಿನ ಆದರ್ಶಕ್ಕೆ ಯಾವ ಬಗೆಯ ಸಾಕ್ಷ್ಯಾಧಾರಗಳನ್ನು ಒದಗಿಸಿಲ್ಲವೆಂಬುದು ಅದರ ನಿಲುವು. ರಾಜಕೀಯ ಮೀಸಲಾತಿಯಿಂದ ಪಡೆದ ಅಧಿಕಾರವನ್ನು ನಿಜಾರ್ಥದಲ್ಲಿ ಮಹಿಳೆಯರು ಬಳಸಲು ಪುರುಷ ರಾಜಕಾರಣ ಅಡ್ಡಗಾಲು ಹಾಕುತ್ತದೆ ಎಂಬ ಅಭಿಪ್ರಾಯವು ಕೇಳಿಬರುತ್ತಿದೆ. ಈ ರಾಜಕೀಯ ಪ್ರವೇಶದಿಂದ ಮಹಿಳೆಯರು ಸಮಾಜದ ನೈತಿಕ ಅಧಃಪತನಕ್ಕೆ ಕಾರಣವಾಗುತ್ತಾರೆಂಬ ಅತಾರ್ಕಿಕವಾದ ಕೂಗು ಬಹುವಾಗಿದೆ. ಅಧಿಕಾರ ರಾಜಕಾರಣದ ರುಚಿಯನ್ನು ಆರಂಭಿಕ ದಿನಗಳಿಂದಲೂ ಕಂಡು ಅನುಭವಿಸಿದ ಪುರುಷ ಏಕಾಏಕಿ ಈ ಸ್ಥಿತಿಯಿಂದ ಪಕ್ಕಕ್ಕೆ ಸರಿಸಲ್ಪಟ್ಟಾಗ ಸಹಜವಾಗಿಯೇ ಅವನು ವಿರೋಧವನ್ನು ವ್ಯಕ್ತಪಡಿಸುತ್ತಾನೆ. ಪುರುಷ ಸಮಾಜದ ವ್ಯವಸ್ಥೆಯು ಮಹಿಳಾ ರಾಜಕಾರಣದ ಕುರಿತು ಹೊಂದಿರುವ ನೇತ್ಯಾತ್ಮಕ ದೃಷ್ಟಿಯೇ ಇದಕ್ಕೆ ಕಾರಣವೆಂದರೂ, ಈ ಬಗೆಯ ದೃಷ್ಟಿಕೋನ ಹೊಸದೇನೂ ಅಲ್ಲ. ಹೀಗಾಗಿ ಇದುವರೆಗೆ ರಾಜಕೀಯದಲ್ಲಿ ಪಾಲ್ಗೊಂಡ ಅಧಿಕಾರ ರಾಜಕಾರಣ ಮಾಡಿದ ಮಹಿಳೆಯರ ಚಟುವಟಿಕೆಗಳು ಮೇಲಿನ ಆದರ್ಶಕ್ಕೆ ಯಾವ ಬಗೆಯ ಸಾಕ್ಷ್ಯಾಧಾರಗಳನ್ನು ಒದಗಿಸಿಲ್ಲವೆಂಬ ನಿಲುವಿಗೆ ಅಂಟಿಕೊಂಡಂತಿವೆ. ಇದೆಲ್ಲ ಅಧಿಕಾರರೂಢ ವ್ಯವಸ್ಥೆಯು ತನ್ನ ಉಳಿವಿಗಾಗಿ ಹಾಗೂ ತನ್ನ ನಿಯಂತ್ರಣದಲ್ಲಿಯೇ ರಾಜಕಾರಣ ನಡೆಯಬೇಕೆಂಬ ಇಚ್ಛೆಯನ್ನು ಹೊಂದಿರುವುದು ಗಮನಿಸುವಂತಹದ್ದು. ಇದೊಂದು ರಾಜಕೀಯ ಅಥವಾ ತಂತ್ರಗಾರಿಕೆ. ಮಹಿಳೆಯರಿಗೆ ರಾಜಕೀಯ ಕ್ಷೇತ್ರವು ಹೊಸದು ಎನ್ನುತ್ತಲೇ ಅವಳಿಗೆ ಕನಿಷ್ಠ, ಕೆಳಸ್ತರದ ಅಂದರೆ ತಳಮಟ್ಟದ ರಾಜಕೀಯದಲ್ಲಿ ಮೀಸಲಾತಿಯನ್ನು ಕಲ್ಪಿಸಿ, ಸಮುದಾಯದ ಸಮಸ್ಯೆಗಳನ್ನು ಅರಿಯಲು, ಬಗೆಹರಿಸಲು ಸಾಧ್ಯವಾಗಿಸುವಂತೆ ಮಾಡಲಾಗಿದೆ.

ಹಿಂದೆ ಮಹಿಳೆಯರು ಶಿಕ್ಷಣ ಕಲಿಯುವುದೇ ಅಪರಾಧವಾಗಿತ್ತು. ವಿದ್ಯಾಭ್ಯಾಸದ ಬಗೆಗೆ ಇದ್ದ ಅವಕಲ್ಪನೆಗಳನ್ನು, ಮೂಢನಂಬಿಕೆಗಳನ್ನು ಗಮನಿಸಿದರೆ, ಹೆಣ್ಣು ಮಕ್ಕಳಿಗೆ ಓದು ಬರಹಗಳ ಅವಕಾಶ ಕೊಡುವುದೇ ಅಪರಾಧ ಎಂಬ ಸಾಂಪ್ರದಾಯಿಕ ರೂಢಿಯಿತ್ತು. ಹೆಣ್ಣು ಶಿಕ್ಷಣ ಕಲಿತು ಸಾಧಿಸುವುದಾದರೂ ಏನು? ಅವಳು ಶಿಕ್ಷಿತಳಾಗುವುದರಿಂದ ಕುಟುಂಬದ ಜವಾಬ್ದಾರಿಯನ್ನು ನಿರಾಕರಿಸುವುದರೊಂದಿಗೆ ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡುತ್ತಾಳೆ. ಗಂಡನ, ಮಕ್ಕಳ ಲಾಲನೆಪಾಲನೆ, ಮನೆಯನ್ನು ಶುಚಿಯಾಗಿಸುವುದು ಇತ್ಯಾದಿಗಳನ್ನು ಅವಳಲ್ಲದೆ ಬೇರಾರಿಂದಲೂ ಸಾಧ್ಯವಿಲ್ಲವೆಂಬ ಹೊರೆಯನ್ನು ಹಾಕುತ್ತಲೇ ಕುಟುಂಬದೊಳಗೆ ಅವಳನ್ನು ಸೀಮಿತಗೊಳಿಸಿ ಗುರುತಿಸಲಾಗುತ್ತಿತ್ತು. ಶಿಕ್ಷಣದ ಸ್ಥಿತಿಗತಿಗಳನ್ನು ಕುರಿತು ೧೮೩೬ ರಲ್ಲಿ (ಬಂಗಾಳದಲ್ಲಿ) ವಿಲಿಯಂ ಆ್ಯಡಂ ಸಿದ್ಧಪಡಿಸಿದ ವರದಿಯನ್ನು ಗಮನಿಸಿದರೆ (Women in modern India, Geraldine Forbes, 1996, page No.33) ಹಿಂದೂಗಳಲ್ಲೂ, ಮುಸ್ಲಿಮರಲ್ಲಿ ಅಕ್ಷರ ಜ್ಞಾನವು ಹೆಂಗಸರನ್ನು ದಾರಿ ತಪ್ಪಿಸಿ ಬಿಡುತ್ತದೆ ಎಂಬ ಭಯಾನಕವಾದ ಮೂಢನಂಬಿಕೆ ದಟ್ಟವಾಗಿತ್ತು.

ಸಾಂಪ್ರದಾಯಿಕ ಶಿಕ್ಷಣದಲ್ಲಿ ಧಾರ್ಮಿಕ ಸಾಹಿತ್ಯವನ್ನು ಓದಲು ಕಲಿಸುವ ಉದ್ದೇಶವಿತ್ತಾದರೂ ಅದು ಉನ್ನತ ವರ್ಗದ ಕುಟುಂಬಗಳ ಹೆಣ್ಣುಮಕ್ಕಳಿಗೆ ಮಾತ್ರ. ಅದೂ ಮನೆಯಲ್ಲಿಯೇ ಕಲಿಯಬೇಕಿತ್ತು. ಸಾರ್ವಜನಿಕವಾಗಿ ಬರೆಯುವುದನ್ನು, ಶಾಲೆಗಳಿಗೆ ಹೋಗುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿತ್ತು. ಆದರೆ ಕಾಲಕ್ರಮೇಣ ವಸಾಹತುಶಾಹಿಯ ಪರಿಣಾಮದಿಂದಾಗಿ ಅನೇಕ ಭಾರತೀಯ ಚಿಂತಕರು, ಲೇಖಕರು, ಸಮಾಜ ಸುಧಾರಕರು ಶಿಕ್ಷಣದ ಮಹತ್ವವನ್ನು ತಿಳಿಸತೊಡಗಿದರು. ಶಿಕ್ಷಣ ಕಲಿತ ಭಾರತೀಯ ಮಹಿಳೆ ತನ್ನ ಕುಟುಂಬ, ಮನೆ, ಮಕ್ಕಳನ್ನು ಉತ್ತಮವಾಗಿ ನಿಭಾಯಿಸುತ್ತಾಳೆ. ಗಂಡನ ಸಾರ್ವಜನಿಕ ಬದುಕಿಗೆ ಅಡ್ಡಿಯಾಗದಂತೆ, ಮಹಿಳೆ ಕುಟುಂಬದ ನಿರ್ವಹಣೆಯನ್ನು ಮನೆಯಲ್ಲಿದ್ದುಕೊಂಡೇ ಸಹಕರಿಸುತ್ತಾಳೆ ಎಂಬ ವಿಶ್ವಾಸ ಮೂಡತೊಡಗಿತು. ಹೀಗೆ ಮಹಿಳೆಯರು ಶಿಕ್ಷಣ ಕಲಿಯುವುದರಿಂದ ತನಗಾವ ಅಪಾಯವೂ ಇಲ್ಲವೆಂದು ಮನದಟ್ಟಾದ ಕೂಡಲೇ ಪುರುಷ ಅವಳಿಗೆ ಶಿಕ್ಷಣದ ಅಗತ್ಯ ಇದೆ, ಅದನ್ನು ಅವಳಿಗೆ ಕೊಡಲೇ ಬೇಕು ಎಂಬ ಆಲೋಚನೆಗಳನ್ನು ಒಪ್ಪಿದ. ಈ ಬಗೆಗಿನ ಹಿಂದಿನ ಅನುಮಾನ, ಆತಂಕಗಳು ಹುಸಿಯಾದವು.

ಹೀಗೆ ಶಿಕ್ಷಣ ಪಡೆದ ಮಹಿಳೆಯರು ತಮ್ಮ ಅರಿವಿನ ನೆರವಿನಿಂದ ಸಾರ್ವಜನಿಕ ಸಮಸ್ಯೆಗಳಿಗೆ ಸ್ಪಂದಿಸತೊಡಗಿದರು. ಅವರ ಸಮಸ್ಯೆಗಳನ್ನು ಗುರುತಿಸುವ, ಚಿಂತಿಸುವ ನಿಟ್ಟಿನಲ್ಲಿ ಅನೇಕ ಯೋಜನೆಗಳು, ಕಾರ್ಯಕ್ರಮಗಳು ಜಾರಿಗೊಳ್ಳತೊಡಗಿದವು. ಇವರು ಶಾಲೆ, ಕಾಲೇಜು, ಹಾಸ್ಟೆಲ್, ಮಹಿಳಾ ಸಂಘಸಂಸ್ಥೆಗಳನ್ನು ಸ್ವತಂತ್ರವಾಗಿ ಆರಂಭಿಸಿದರು. ಅಲ್ಲಿಯೇ ಶಿಕ್ಷಕರಾಗಿ ಸೇವೆ ಸಲ್ಲಿಸತೊಡಗಿದಾಕ್ಷಣ ಸಮಾಜದಲ್ಲಿ ಶಂಕೆ, ಅಪನಂಬಿಕೆಗಳು ಶುರುವಾಗತೊಡಗಿದವು. ಶಿಕ್ಷಿತ ಮಹಿಳೆಯರು ತಮ್ಮ ರಾಜಕೀಯ ಹಾಗೂ ನಾಗರೀಕ ಹಕ್ಕುಗಳ ಬಗ್ಗೆ ಭಾಷಣಗಳನ್ನು ಮಾಡತೊಡಗಿದರು. ಪುರುಷನಂತೆ ಎಲ್ಲ ಕ್ಷೇತ್ರಗಳಲ್ಲಿಯೂ ಅವಕಾಶಗಳನ್ನು ಕೊಡುವಂತೆ ಚಳುವಳಿಗಳನ್ನು, ಹೋರಾಟವನ್ನು, ವಸಾಹತುಶಾಹಿಯ ಆರಂಭದಿಂದಲೇ ಮಹಿಳೆಯರು ಒತ್ತಾಯಿಸುತ್ತಿದ್ದರು. ಉದ್ಯೋಗಂ ಪುರುಷ ಲಕ್ಷಣಂ ಎಂಬ ಉಕ್ತಿಯನ್ನು ಪ್ರಶ್ನಿಸಲಾರಂಭಿಸಿದ ಮಹಿಳೆಯರು ಸ್ವಯಂ ಉದ್ಯೋಗಗಳನ್ನು ಕೈಗೊಂಡರು. ಬ್ಯಾಂಕು, ಸರಕಾರಿ ಕಛೇರಿ ಮತ್ತು ಸಚಿವಾಲಯಗಳಲ್ಲಿನ ಉದ್ಯೋಗಸ್ಥ ಮಹಿಳೆಯರು ಕುಟುಂಬದ ನಿರ್ವಹಣೆಯನ್ನು ಸಮರ್ಥವಾಗಿ ನಿಭಾಯಿಸಿದ್ದಾರೆ. ಮಕ್ಕಳ ಹಾಗೂ ಗಂಡನ ಆರೈಕೆಗಳನ್ನು ಮಾಡುತ್ತಾ ತಾವು ನಿರ್ವಹಿಸುತ್ತಿರುವ ಉದ್ಯೋಗಗಳಲ್ಲಿಯೂ ಸಾಮರ್ಥ್ಯವನ್ನು ತೋರಿದ ನಿದರ್ಶನಗಳು ನಮ್ಮ ಕಣ್ಣ ಮುಂದೆ ಹೇರಳವಾಗಿವೆ. ಇಂದು ಸಮಾಜ ಮಹಿಳೆಯರ ಉದ್ಯೋಗದಿಂದ ಸಮಾಜಕ್ಕೆ, ಕುಟುಂಬಕ್ಕೆ ಯಾವ ಹಾನಿಯಾಗದೆಂಬುದು ಖಾತ್ರಿಯಾದಂತೆ, ಆವಳಿಗೆ ಉದ್ಯೋಗ ನೀಡುವಿಕೆಯನ್ನು ಸಾಮಾನ್ಯ ಕ್ರಿಯೆ ಎಂಬಂತೆ ಕಾಣಲಾರಂಭಿಸಿತು. ಮೇಲೆ ಹೇಳಲಾದ ಮನೋಭಾವವನ್ನೇ ಮಹಿಳಾ ರಾಜಕಾರಣದ ವಿಷಯದಲ್ಲಿಯೂ ಪುರುಷ ಪ್ರಧಾನ ಸಮಾಜ ತಾಳಿರುವುದು ಸ್ಪಷ್ಟವಾಗಿದೆ. ಅವಳು ಶಿಕ್ಷಣ ಹೊಂದುವುದರ ಬಗೆಗೆ ವ್ಯಕ್ತಪಡಿಸಿದ ಆತಂಕ, ಅಪನಂಬಿಕೆ, ಅನುಮಾನಗಳು ಉದ್ಯೋಗಸ್ಥ ಮಹಿಳೆಯರ ವಿಚಾರದಲ್ಲಿಯೂ ಮುಂದುವರೆದವು. ಕುಟುಂಬ ಕೇಂದ್ರಿತವಾಗಿಯೇ ಮಹಿಳೆಯನ್ನು ನೋಡಲಾಗಿದೆ. ಅವಳನ್ನು ಅದರಿಂದ ಬೇರ್ಪಡಲಾರದಷ್ಟು ಬಿಗಿಯಾದ ಸುಳಿಯೊಳಗಿಟ್ಟೇ ನೋಡಲಾಗುತ್ತಿದೆ.

ರಾಜಕೀಯ ಪ್ರವೇಶವು ಮಹಿಳೆಯರಿಗಲ್ಲ, ಅದು ಅವಳಿಗೆ ಒಗ್ಗುವ ವಾತಾವರಣವಲ್ಲ ಎಂಬ ನಕಾರಾತ್ಮಕ ಧೋರಣೆಯನ್ನು ತಾಳುತ್ತಲೇ ದೂರವಿಡುವ ಪ್ರಯತ್ನ ನಿರಂತರವಾಗಿ ನಡೆದಿದೆ.

ಶಿಕ್ಷಣ ಮತ್ತು ಉದ್ಯೋಗದಂತಹ ವಿಚಾರಗಳಲ್ಲಿ ತೋರಿದ ಸಾಂಪ್ರದಾಯಿಕ ನಿಲುವೇ ರಾಜಕೀಯ ಪ್ರವೇಶದಲ್ಲಿ ಮಹಿಳೆಯ ವಿರುದ್ಧ ಘಟಿಸುತ್ತಿರುವ ಮುಂದುವರಿಕೆಯ ಭಾಗವಾಗಿದೆ. ಪ್ರಗತಿಪರರು, ಸುಧಾರಕರು ಮಹಿಳೆಯ ರಾಜಕಾರಣವನ್ನು ಒಪ್ಪಿಕೊಂಡರೂ ಅದು ಪ್ರಧಾನಧಾರೆಯ ಪೂರಕ ಭಾಗವಾಗಿಯೇ ಇರುವುದನ್ನು ಗಮನಿಸಬಹುದು. ಪುರುಷ ಸಂದರ್ಭದಲ್ಲಿ ರಾಜಕೀಯ ತರಬೇತಿಯಾಗಲೀ, ಶಿಕ್ಷಣವಾಗಲೀ, ವಾತಾವರಣದ ವಿಚಾರವಾಗಲೀ ಗಣನೆಗೆ ಬರುವುದಿಲ್ಲ. ಮೇಲ್ಮಟ್ಟದಿಂದ ತಳಮಟ್ಟದ ರಾಜಕೀಯದಲ್ಲಿ ಎಲ್ಲೂ ಅವನಿಗೆ ಪ್ರವೇಶ ನಿರಾಕರಣೆಯಾಗಲೀ, ಅಧಿಕಾರ ಪಡೆಯುವುದಾಗಲೀ, ಸಕ್ರಿಯ ಪಾಲ್ಗೊಳ್ಳುವಿಕೆಯಾಗಲೀ ಪ್ರಶ್ನಾತೀತವಾಗಿದೆ. ಅಂದರೆ ಅವನಿಗೆ ಯಾವ ಮಾನದಂಡಗಳೂ ರಾಜಕೀಯ ಪ್ರವೇಶ, ಅಧಿಕಾರ ಹೊಂದುವಲ್ಲಿ ಅಗತ್ಯವಾಗಿ ಕಂಡು ಬಂದಂತಿಲ್ಲ.

ಹಾಗಾದಲ್ಲಿ ಮಹಿಳೆಯರ ಸಂದರ್ಭದಲ್ಲಿ ಇಂತಹ ಬಿಗಿ ನಿಲುವುಗಳೇಕೆ? ಕಟ್ಟು ಪಾಡುಗಳೇಕೆ? ಎಂಬ ಪ್ರಶ್ನೆಗಳನ್ನೇ ಮಹಿಳಾ ಅಧ್ಯಯನಗಳು ಹೆಚ್ಚು ಹೆಚ್ಚು ವಿಮರ್ಶೆಗೊಳಪಡಿಸುತ್ತಿರುವುದು ಸಹಜವಾಗಿದೆ. ಒಂದು ವೇಳೆ ಅವಳು ರಾಜಕೀಯ ಅಥವಾ ಸಾರ್ವಜನಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದರೂ ಕೂಡ ಅವಳನ್ನು ರಾಜಕೀಯ ನೇತಾರಳನ್ನಾಗಿ ನೋಡದೇ ಬೇರೆ ಬಗೆಯಲ್ಲಿ ಗುರುತಿಸಲಾಗುತ್ತಿದೆ. ಉದಾಹರಣೆಗೆ ಸ್ವಾತಂತ್ರ್ಯ ಹೋರಾಟದಲ್ಲಿನ ಮಹಿಳೆಯರ ಮನಃಪೂರ್ವಕ ತೊಡುಗುವಿಕೆ ಹಾಗೂ ರಾಷ್ಟ್ರೀಯ ನಾಯಕಿಯರಾಗಿ ಬೆಳೆದ ಕಮಲಾದೇವಿ ಚಟ್ಟೋಪಾಧ್ಯಾಯ, ಆನಿಬೆಸೆಂಟ್, ಸರೋಜಿನಿನಾಯ್ಡು ಇತ್ಯಾದಿ ಮಹಿಳೆಯರ ಸಾಧನೆ ಮುಂತಾದ್ದನ್ನು ಉದಾರವಾಗಿ ಗುರುತಿಸಿ ದಾಖಲಿಸುವ ಕಾರ್ಯಕ್ಕಿಳಿದಾಗಲೂ ಅವರ ಕಾರ್ಯ ಚಟುವಟಿಕೆಯ ಇನ್ನೊಂದು ಭಾಗವಾದ ಮಹಿಳಾ ಹಕ್ಕೊತ್ತಾಯ ಎಂಬುದನ್ನು ಪಕ್ಕಕ್ಕಿಡಲಾಗಿದೆ. ಅವುಗಳ ನಡುವಿರುವ ಸಾಪೇಕ್ಷ ಸಂಬಂಧವನ್ನು ನಿರ್ಲಕ್ಷಿಸುತ್ತದೆ' (ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಡಾ.ಎಂ.ಉಷಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ ೧೩-೧೪).

ಸರೋಜಿನಿ ನಾಯ್ಡು ಅವರನ್ನು ಭಾರತದ ಕೋಗಿಲೆ ಎನ್ನುವ ಸಾಂಸ್ಕೃತಿಕ ಹೆಗ್ಗಳಿಕೆಯನ್ನು ಹೊರಿಸುವುದರ ಮೂಲಕ ಆಕೆಯ ನೈಜ ಹೋರಾಟವನ್ನು 'ಮಹಿಳಾ ಹಕ್ಕು ಮತ್ತು ಸ್ವಾತಂತ್ರ್ಯ ಹೋರಾಟ ಪಾತ್ರವನ್ನು ಸಾಂಸ್ಕೃತಿಕ ಕೊಂಡಿಗಳಿಂದ ಹೊರಬರಲಾರದ ಸ್ಥಿತಿಯಲ್ಲಿರಿಸುತ್ತಲೇ ಅಪ್ರಧಾನವಾಗಿ ಚಿತ್ರಿಸಲಾಗಿದೆ. ಇದರರ್ಥ ಮಹಿಳೆಯರನ್ನು ಕುಟುಂಬ, ಸಮಾಜ, ಮನೆತನ, ಸಂಸ್ಕೃತಿ ನೆಲೆಗಳಲ್ಲಿಯೇ ಕೇಂದ್ರೀಕರಿಸುತ್ತ, ವೈಭವೀಕರಿಸುತ್ತಲೇ ಭಾರತೀಯ ಆದರ್ಶನಾರಿ ಎಂಬ ಹಣೆಪಟ್ಟಿಯನ್ನು ಹಾಕಲಾಗುತ್ತಿದೆ. ಮಹಿಳೆಯ ಮೂಲ ಅಧಿಕಾರ ರಾಜಕಾರಣದ ಪ್ರವೇಶ, ಪಾಲುಗಾರಿಕೆಯ ಪ್ರಶ್ನೆಯನ್ನು ಬದಿಗಿರಿಸಲಾಗಿದೆ. ಅದಕ್ಕೆ ಸೂಕ್ತ ತರಬೇತಿ, ಶಿಕ್ಷಣ, ವಾತಾವರಣವಿಲ್ಲವೆಂದು ನಿರಾಕರಿಸುತ್ತಲೇ ಬಂದಿದೆ. ಇದೀಗ ಪಂಚಾಯತ್

ಕಾಯಿದೆಗಳು ಜಾರಿಗೆ ಬಂದಾಗಿನಿಂದ ಮಹಿಳೆಯರಿಗೆ ತಳಮಟ್ಟದ ರಾಜಕೀಯ ಸಂಸ್ಥೆಗಳಲ್ಲಿ ಮೀಸಲಾತಿ ಪರಿಕಲ್ಪನೆಯಡಿ ಪ್ರವೇಶ ಮತ್ತು ಅಧಿಕಾರಗಳನ್ನು ನೀಡಲಾಗಿದೆ. ಇಲ್ಲಿನ ಶೇ.೩೩ರ ಮಹಿಳಾ ಮೀಸಲಾತಿ ಕೂಡ ಒಂದೇ ಬಾರಿಗೆ ಕಲ್ಪಿಸಲಾಗಿಲ್ಲ. ಅಧಿಕಾರ ವಿಕೇಂದ್ರೀಕರಣದ ತಳಹದಿಯ ಮೇಲೆ ಪ್ರಜಾಪ್ರಭುತ್ವದ ಮೌಲ್ಯಗಳಿಗನುಪಾತವಾಗಿ, ಜನಸಂಖ್ಯಾ ಪ್ರಮಾಣಕ್ಕನುಗುಣವಾಗಿ ಹಿತಾಸಕ್ತಿಗಳನ್ನು ರಕ್ಷಿಸುವುದು ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಮಹಿಳಾ ಪಾಲ್ಗೊಳ್ಳುವಿಕೆಯನ್ನು ಸರಕಾರಗಳು ಪ್ರೋತ್ಸಾಹಿಸುತ್ತಿವೆ. ಮತದಾನದ ಹಕ್ಕು, ಚುನಾವಣೆಗೆ ಸ್ಪರ್ಧಿಸುವ ಹಕ್ಕು ಮುಂತಾಗಿನ ಅವಕಾಶಗಳ ಬಳಸಿಕೊಳ್ಳುವಿಕೆಯೇನೋ ಸರಿ. ಆದರೆ ಅಧಿಕಾರ ಹಂತದಲ್ಲಿ ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯವನ್ನು ದೊರಕಿಸಿಕೊಡುವಲ್ಲಿ ಪ್ರಭುತ್ವಗಳು ಸೋಲುತ್ತಿವೆ.

ಪ್ರಜಾಪ್ರಭುತ್ವದ ಪ್ರಮುಖ ಅಂಶವಾದ ಚುನಾವಣೆಯಂತಹ ಸಂದರ್ಭದಲ್ಲಿಯೂ ಪುರುಷರ ಪ್ರತಿಶತವನ್ನು ಮಹಿಳೆಯರು ಸರಿಗಟ್ಟುತ್ತಿರುವುದನ್ನು ಅನೇಕ ಅಧ್ಯಯನಗಳು ಈಗಾಗಲೇ ಗಮನಿಸಿವೆ. "ಮಹಿಳೆಯರ ಮತದಾನ ಶೇ.೪೪.೪. ಅಂದರೆ ಪುರುಷನ ಅರ್ಧದಷ್ಟು ಸರಿಗಟ್ಟುತ್ತಾರೆ (Caritas India Quarterly, Jan, 1999, Vol.1 Page No.33). ಮಹಿಳೆಯರ ರಾಜಕೀಯ ಪ್ರವೇಶಾಸಕ್ತಿಯನ್ನು ಶುದ್ಧ ರಾಜಕೀಯ ಆಸಕ್ತಿಯಾಗಿ ಪರಿಭಾವಿಸಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಅವಳು ರಾಜಕೀಯ ಪ್ರವೇಶ ಹಾಗೂ ತೊಡಗಿಸಿಕೊಳ್ಳುವಿಕೆಯನ್ನು ತನ್ನ ಸ್ವಯಂ ಆಯ್ಕೆಯಾಗಿ ಎಂದು ಸ್ವೀಕರಿಸಿಲ್ಲ. ಅದೊಂದು ಆಕಸ್ಮಿಕ ಅಥವಾ ಬೇರೊಬ್ಬರ ಒತ್ತಡದಿಂದ ಅಲ್ಲದೆ ಅನಿವಾರ್ಯ ಕಾರಣಗಳಿಂದಾಗಿ ರಾಜಕೀಯ ಪ್ರವೇಶ ಹೊಂದಿರುತ್ತಾಳೆ. ಮತಚಲಾಯಿಸುವಲ್ಲಿಯೂ ಅವಳು ಸ್ವತಂತ್ರವಾಗಿ, ಪ್ರಜ್ಞಾಪೂರ್ವಕವಾಗಿ ಭಾಗವಹಿಸಿಲ್ಲ (Scheduled caste Woman by P.C. Jain, Shashi Jain and Sudha Bhatnagar, Rawat Publication. Page No.201). ಎಂಬಿತ್ಯಾದಿ ಪೂರ್ವಾಗ್ರಹ ಪೀಡಿತ ಹೇಳಿಕೆಗಳು ಮಹಿಳಾ ಸಂಬಂಧದಲ್ಲಿ ಪ್ರಶ್ನಿಸದಂತೆ ಪುರುಷ ಸಂದರ್ಭದಲ್ಲಿ ಇಲ್ಲವಾಗಿಸಿದೆ. ಈ ರಾಜಕೀಯ ಚುನಾವಣೆಯ ಬಗ್ಗೆ ಒಂದು ರೀತಿಯ ನಕಾರಾತ್ಮಕ ಧೋರಣೆಯನ್ನು ಮಹಿಳೆ ಹೊಂದಿದ್ದಾಳೆ. ಭಾರತದಂತಹ ರಾಷ್ಟ್ರಗಳ ಅನಕ್ಷರಸ್ಥ ಸಮಾಜದಲ್ಲಿ ಓಟ್ ಬ್ಯಾಂಕ್ (Vote Bank)ಗಳ ನಿರ್ಮಾಣವೊಂದು ಪುರುಷ ಪ್ರೇರಿತ ಚುನಾವಣಾ ರಾಜಕೀಯದ ಪ್ರಮುಖ ಲಕ್ಷಣವಾಗಿದೆ. ಇಂತಹ ತಂತ್ರಗಳಿಗೆ ಮಹಿಳೆಯರು ವಿಶೇಷವಾಗಿ ಒಳಪಡುತ್ತಿರುವ ಇತ್ಯಾದಿ ವಿಶ್ಲೇಷಣೆಗಳು ಪ್ರಸ್ತುತ ಸಂದರ್ಭಗಳಲ್ಲಿ ಹೇರಳವಾಗಿ ದೊರಕುತ್ತಿವೆ.

ಇಂತಹ ನಿಲುವುಗಳ ಕುರಿತು ಪರಸ್ಪರ ನಡುವಿನ ಸಂಬಂಧ, ಹೋಲಿಕೆ, ವ್ಯತ್ಯಾಸಗಳ ಮುಖಾಮುಖಿಯನ್ನು ನೋಡುವುದು ಅಗತ್ಯ. ಮಹಿಳೆಯರ ರಾಜಕೀಯ ಪ್ರವೇಶ ಆಸಕ್ತಿಯನ್ನು ಶುದ್ಧರಾಜಕೀಯವೆಂದು ಒಪ್ಪಲು ಸಾಧ್ಯವಿಲ್ಲ ಎನ್ನುವುದಾದರೆ ಪುರುಷನ ಪ್ರವೇಶವು ಶುದ್ಧ ರಾಜಕೀಯಾಸಕ್ತಿಯೇ? ಇಲ್ಲಿ ಮಹಿಳೆ ತಾತ್ವಿಕವಾಗಿಯಾದರೂ ರಾಜಕೀಯದಲ್ಲಿ ಪ್ರವೇಶವನ್ನು, ಪ್ರಾತಿನಿಧ್ಯವನ್ನು

ಹೊಂದಿದ್ದಾಳೆನ್ನುವುದನ್ನು ಒಪ್ಪುವಂತಹದ್ದು. ಕುಟುಂಬದ ಹಿನ್ನೆಲೆ, ವರ್ಗದ ಹಿತಾಸಕ್ತಿ, ವರ್ಣದ ಬೆಂಬಲ, ಪ್ರಾದೇಶಿಕ ಸಂಗತಿಗಳು ಇತ್ಯಾದಿ ಹಲವು ಅಂಶಗಳು ಹೇಗೆ ಪುರುಷ ರಾಜಕಾರಣವನ್ನು ರೂಪಿಸುತ್ತವೆಯೋ ಅದಕ್ಕೆ ಮುಖಾಮುಖಿಯಾಗಿ ಸ್ತ್ರೀ ರಾಜಕಾರಣದಲ್ಲೂ ಕೂಡ ಘಟಿಸುತ್ತದೆ ಎಂಬುದನ್ನು ಅಧ್ಯಯನಗಳು ಏಕೆ ಹೇಳುತ್ತಿಲ್ಲ? ಪುರುಷ ರಾಜಕಾರಣದಲ್ಲಿ ಕಂಡುಬರುವ ಎಲ್ಲ ವೈರುಧ್ಯಗಳು ಸ್ತ್ರೀ ರಾಜಕಾರಣದ ಸಂದರ್ಭದಲ್ಲಿಯೂ ಕಾಣಸಿಗುತ್ತವೆ. ಅನಕ್ಷರಸ್ಥರು, ಅಶಿಕ್ಷಿತರು, ಹಿಂದುಳಿದವರು, ಶ್ರೀಮಂತರು, ಗ್ರಾಮೀಣ-ನಗರ ಪ್ರದೇಶಗಳು, ಭಾಷೆ, ಧರ್ಮ ಎಂಬಿತ್ಯಾದಿ ಅಂಶಗಳ ಮೇಲೆ ನಿರ್ಮಾಣಗೊಳ್ಳುವ ಓಟ್ ಬ್ಯಾಂಕ್‌ಗಳು ಕೇವಲ ಮಹಿಳೆಯರ ಸಂದರ್ಭದಲ್ಲಿ ಮಾತ್ರ ಹೆಚ್ಚು ಮಹತ್ವಕ್ಕೆ ಬರುತ್ತವೆ. ಆದರೆ ಇವೆಲ್ಲಾ ಪುರುಷ ರಾಜಕಾರಣದ ಸಂದರ್ಭದಲ್ಲಿ ಪೂರಕವಾಗಿಯೂ ಹಾಗೂ ನಿರ್ಣಾಯಕ ರೀತಿಯಲ್ಲಿಯೂ ನಿರ್ವಚನೆಗೊಳ್ಳುತ್ತಿವೆ ಎಂಬುದನ್ನು ಅಧ್ಯಯನಗಳು ಮುಖ್ಯವಾಗಿಸುತ್ತಿಲ್ಲ.

ಸ್ತ್ರೀ ರಾಜಕಾರಣದ ಸಂದರ್ಭದಲ್ಲಿ ಈ ಅಂಶಗಳು ಹೆಚ್ಚು ಮುಖ್ಯವೆಂಬಂತೆ, ದೀರ್ಘ ಚರ್ಚೆಗೊಳಪಡುವಂತೆ ಮಾಡಲಾಗುತ್ತಿದೆ. ಇದೊಂದು ಆತಂಕಕಾರಿ ವಿಷಯವೆಂಬಂತೆ ಸರಕಾರದ ಹೇಳಿಕೆಗಳು ಪ್ರತಿಬಿಂಬಿಸುತ್ತಿರುವುದನ್ನು ಅವಲೋಕಿಸಿದಾಗ ಇದೊಂದು ಹುನ್ನಾರ ಎಂಬುದು ಸ್ಪಷ್ಟವಾಗುತ್ತದೆ. ಆರಂಭದ ಹಂತದಲ್ಲಿ ಮಹಿಳಾ ಹೋರಾಟಗಳು ಮಹಿಳೆಯರಿಗಾಗಿ ಸುಧಾರಣೆಯಂತಹ ಸಾಮಾಜಿಕ ಬೇಡಿಕೆಗಳನ್ನು ಇಟ್ಟಾಗ ಅದನ್ನು ಪುರುಷ ರಾಜಕಾರಣ ದಾನವೆಂಬಂತೆ ಸಹಾನುಭೂತಿಯನ್ನು ತೋರಿಸುತ್ತಲೇ, ಅದೊಂದು ಹಕ್ಕು ಎಂದು ಮಹಿಳೆಯರು ಒತ್ತಾಯಿಸಿದಾಕ್ಷಣ ತನ್ನ ನಿಜ ಸ್ವರೂಪವನ್ನು ಪುರುಷ ರಾಜಕಾರಣ ಪ್ರದರ್ಶಿಸಿತು. ಇಂತಹ ಹಕ್ಕುಗಳನ್ನು ನಿರಾಕರಿಸುತ್ತಲೋ ಅಥವಾ ವಿಳಂಬ ಮಾಡುತ್ತಲೇ ತನ್ನ ನಿರಾಸಕ್ತಿಯನ್ನು ಸ್ಪಷ್ಟಪಡಿಸಿತು. ಇದೇ ಸ್ಥಿತಿ ದಲಿತರ ಮೀಸಲಾತಿ ಹಕ್ಕೊತ್ತಾಯದಂತಹ ವಿಚಾರಗಳಲ್ಲಿ ಕಂಡುಬರುವುದು.

ಈಗಾಗಲೇ ಪ್ರಸ್ತಾಪಿಸಿದಂತೆ ಮಹಿಳೆ ತನ್ನ ರಾಜಕೀಯ ಪ್ರವೇಶ ಹಾಗೂ ತೊಡಗಿಸಿಕೊಳ್ಳುವಿಕೆಯನ್ನು ತನ್ನ ಸ್ವಂತ ಆಯ್ಕೆಯಾಗಿ ಎಂದು ಸ್ವೀಕರಿಸಿಲ್ಲ. ಅದೊಂದು ಆಕಸ್ಮಿಕ ಅಥವಾ ಬೇರೊಬ್ಬರ ಒತ್ತಡದಿಂದ, ಅನಿವಾರ್ಯವಾಗಿ ರಾಜಕೀಯ ಪ್ರವೇಶ ಹೊಂದಿದ್ದಾಳೆ ಎನ್ನುವ ನಕಾರಾತ್ಮಕ ಹೇಳಿಕೆ ಮಹಿಳೆಯ ಮೇಲೆ ತಳೆದಿರುವ ಪೂರ್ವಾಗ್ರಹ ಪೀಡಿತ ನಿಲುವು. ಮೀಸಲಾತಿಯೊಂದಿಗಿನ ಅವಳ ರಾಜಕೀಯ ಪ್ರವೇಶ ತಾತ್ವಿಕವಾಗಿಯಾದರೂ ಒಪ್ಪುವಂತದ್ದು. ಈ ಅವಕಾಶದಿಂದಾಗಿಯೇ ಅವಳು ಮಹಿಳೆಯರ ಸ್ವಭಾವಕ್ಕೆ ರಾಜಕೀಯ ವಿರುದ್ಧವಾದದ್ದೂ ಎಂಬ ಸಾಂಪ್ರದಾಯಿಕ ನಂಬಿಕೆಯನ್ನು ಅಲ್ಲಗಳೆದು ಚುನಾವಣೆಯಲ್ಲಿ ಭಾಗಿಯಾದಳು. ತಳಮಟ್ಟದ ರಾಜಕೀಯ ಪ್ರವೇಶ, ತೊಡಗಿಸಿಕೊಳ್ಳುವಿಕೆ ಹಾಗೂ ಅಧಿಕಾರ ಹೊಂದುವಿಕೆಗಳು ರಾಜಕೀಯಾಸಕ್ತಿಯನ್ನು ಗಟ್ಟಿಗೊಳಿಸುವುವು. ಪುರುಷರ ಪೂರ್ವಗ್ರಹ ಪೀಡಿತ ನಿಯಮಗಳು ಹುಸಿಗೊಳ್ಳಲಾರಂಭಿಸಿದವು. ಇದಕ್ಕೆ ಕರ್ನಾಟಕದಲ್ಲಿನ ಪಂಚಾಯತ್ ಸಂಸ್ಥೆಗಳು ಮಹಿಳೆಯರಿಗೆ ಅಧಿಕಾರ ನೀಡಿರುವುದು ಉದಾಹರಣೆಯಾಗಿದೆ. ೧೯೮೭ರ ಜನವರಿಯಲ್ಲಿ ಕರ್ನಾಟಕ ಸರಕಾರ ಪಂಚಾಯತ್

ಚುನಾವಣೆಗಳಲ್ಲಿ ಶೇ.೨೫ರಷ್ಟು ಮಹಿಳಾ ಮೀಸಲಾತಿ ಘೋಷಿಸಿತು. ಮತದಾನದ ಹಕ್ಕನ್ನು ೨೧ ವರ್ಷದಿಂದ ೧೮ ವರ್ಷಕ್ಕೆ ಇಳಿಸಲಾಯಿತು. ಇಡೀ ದೇಶದಲ್ಲಿ ಕರ್ನಾಟಕ ಇದನ್ನು ಪ್ರಥಮವಾಗಿ ಜಾರಿಗೆ ತಂದಿತು.' (ಕರ್ನಾಟಕದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಗಳು, ಎ.ಶ್ರೀಧರ, ಕ.ವಿ.ವಿ., ಪ್ರಸಾರಾಂಗ ೨೦೦೦, ಪು.೧೫)

೧೯೮೭ರ ಮಹಿಳಾ ಮೀಸಲಾತಿ ಘೋಷಣೆಯಿಂದಾಗಿ ಸುಮಾರು ೧೪ ಸಾವಿರ ಮಹಿಳೆಯರು ರಾಜಕೀಯ ಕ್ಷೇತ್ರಕ್ಕೆ ಪ್ರವೇಶಿಸುವ ಅವಕಾಶ ಪಡೆದರು. ಇಂತಹ ಅವಕಾಶಗಳನ್ನು ಪಡೆದ ಅನೇಕ ಮಹಿಳೆಯರಲ್ಲಿ ದಲಿತ ಮಹಿಳೆ ಪಾರ್ವತಮ್ಮ ಓರ್ವಳು. ತುಮಕೂರು ಜಿಲ್ಲೆಯ ತುಂಬಾಡಿ ಪಂಚಾಯತಿ ಅಧ್ಯಕ್ಷೆಯಾದ ಈಕೆ, ಆತ್ಮ ವಿಶ್ವಾಸದ ಮಾತುಗಳಲ್ಲಿ ಹೀಗೆ ಹೇಳುತ್ತಾಳೆ. ಗ್ರಾಮಪಂಚಾಯಿತಿಯ ಸದಸ್ಯಳಾಗಿ ಅಥವಾ ಅಧ್ಯಕ್ಷಳಾಗಿ ನನ್ನ ಕರ್ತವ್ಯಗಳ ಬಗ್ಗೆ ನನಗೇನೂ ತಿಳಿದಿರಲಿಲ್ಲ. ಆದರೆ ಆಗ ನನ್ನ ಕ್ಷೇತ್ರದ ಜನ ನನ್ನಿಂದ ಏನನ್ನು ಬಯಸುತ್ತಾರೆ. ನನ್ನ ಜವಾಬ್ದಾರಿ ಮತ್ತು ಕೆಲಸಗಳೇನು ಎಂಬುದರ ಅರಿವಾಗಿದೆ. ನನ್ನ ನಿಲುವನ್ನು ಸಮರ್ಥಿಸಿಕೊಳ್ಳುವ ಧೈರ್ಯವೂ ಬಂದಿದೆ. ಎಷ್ಟೇ ಜನರಿರಲಿ ಅವರೆದುರು ಆತ್ಮ ವಿಶ್ವಾಸದಿಂದ ಮಾತನಾಡಬಲ್ಲೆ. ಯಾವ ಕೀಳರಿಮೆಯೂ ಇಲ್ಲದೆ ಇಂದು ನನ್ನ ಸಾಮರ್ಥ್ಯದಿಂದಲೇ ಅಧ್ಯಕ್ಷಳಾಗಿ ಕಾರ್ಯನಿರ್ವಹಿಸಬಲ್ಲೆ (ನಾಯಕತ್ವದ ಹೊಸ್ತಿಲಲ್ಲಿ ಮಹಿಳೆ, ಕೆ.ಆರ್.ಮಂಗಳ, ಪ್ರಜಾವಾಣಿ ದಿನಪತ್ರಿಕೆ ದಿ.೫.೩.೨೦೦೦). ಹೀಗೆ ಸ್ವಾತಂತ್ರ್ಯದೊಂದಿಗೆ ಸಮಾನತೆಯ ಅವಕಾಶ ಹಕ್ಕನ್ನು ಪಡೆದ ಈ ಮಹಿಳೆ ಮೇಲಿನ ಎಲ್ಲ ಪುರಾವೆಗಳನ್ನು ಬುಡಮೇಲು ಮಾಡಿದ್ದಾಳೆ ಅಥವಾ ಹುಸಿಗೊಳಿಸಿದ್ದಾಳೆ.

ಮಹಿಳೆಯರ ರಾಜಕೀಯ ಪ್ರವೇಶ, ಕೌಟುಂಬಿಕ ಹಿನ್ನೆಲೆ, ಪ್ರಭಾವಗಳಿಂದ ಉನ್ನತ ಅಥವಾ ಮಧ್ಯಮ ವರ್ಗದ ಇನ್ನಾವುದೋ ಪುರುಷ ಪ್ರೇರಿತ ಹಿನ್ನೆಲೆಗಳಿಂದ ಬಂದವಳಾದ್ದರಿಂದ ರಾಜಕೀಯ ಕ್ಷೇತ್ರದಲ್ಲಿ ಅವಳು ಪರಾವಲಂಬಿ ಇಲ್ಲವೇ ಪರಕೀಯಳಾಗಿಯೇ ಉಳಿಯುತ್ತಾಳೆ. ಇತ್ಯಾದಿ ಹೇಳಿಕೆಗಳು ಸಾಮಾನ್ಯ. ಆದರೆ ಇದೇ ಸ್ಥಿತಿ ಪುರುಷ ರಾಜಕಾರಣದಲ್ಲಿಯೂ ಉಂಟೆಂಬುದು ಅಷ್ಟೇ ಸತ್ಯ. ಇಲ್ಲಿಯೂ ಅನಕ್ಷರಸ್ಥ, ವರ್ಗ, ಜಾತಿ, ಕುಟುಂಬದ ಪ್ರಭಾವಿ ಹಿನ್ನೆಲೆಯೊಳಗೆ ರಾಜಕಾರಣ ಕ್ರಿಯಾಶೀಲವಾಗಿದೆ. ಹೀಗೆ ಪುರುಷ ಪ್ರಧಾನ ಸಮಾಜ ರಾಜಕಾರಣ ತನ್ನೊಳಗಿನ ಎಲ್ಲಾ ಗುಣಗಳನ್ನು ಗೌಣವಾಗಿಸುತ್ತಾ ಸ್ತ್ರೀ ರಾಜಕಾರಣದ ವಿಚಾರ ಬಂದಾಗ ಎಲ್ಲಿಲ್ಲದ ಪ್ರಾಮುಖ್ಯತೆಯನ್ನು ಕೊಡುತ್ತ, ಕಾಳಜಿಯನ್ನು ತೋರುತ್ತಲೇ ಸಹಾನುಭೂತಿಯನ್ನು ಅವಳ ಪರವಾಗಿ ಪ್ರದರ್ಶಿಸುತ್ತದೆ.

ಮಹಿಳೆಯ ಸಮಸ್ಯೆಯನ್ನು ಪರಿಹರಿಸಲು ಪುರುಷ ಮತ್ತವನ ರಾಜಕೀಯ ಪಕ್ಷಗಳು ಹಾತೊರೆಯುತ್ತವೆ. ಅನೇಕ ಸುಧಾರಣಾ ಪ್ರಕ್ರಿಯೆ, ಯೋಜನೆಗಳನ್ನು ಜಾರಿಗೊಳಿಸಲೆತ್ನಿಸುತ್ತವೆ. ಆದರೆ ಈ ಕ್ರಿಯೆಗಳೆಲ್ಲಾ ತನ್ನ ಹಿತಾಸಕ್ತಿಯ ಪರವಾಗಿರುವಂಥಹ ನಿಲುವುಗಳು, ಆಲೋಚನೆಗಳು. ಮಹಿಳೆಯರು ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳಬಲ್ಲರು. ಅವುಗಳು ಯಾವುವು ಎಂಬುದನ್ನು ಸಮರ್ಥವಾಗಿ, ಸರಳವಾಗಿಯೂ ಸ್ಪಷ್ಟಪಡಿಸಿ ಇತ್ಯರ್ಥಕಂಡುಕೊಳ್ಳಬಲ್ಲರು. ಇದಕ್ಕೆ ಒಂದು ಸಣ್ಣ ಉದಾಹರಣೆ ಹೀಗಿದೆ : "ಕೋಲಾರ

ಜಿಲ್ಲೆಯ ಬಂಗಾರಪೇಟೆ ತಾಲೂಕಿನಲ್ಲಿ ನಡೆಸಿದ ಅಧ್ಯಯನವೊಂದು ಕುತೂಹಲಕರವಾದ ವಿಷಯ ಹೊರಗೆಡಹಿದೆ. ಅಲ್ಲಿನ ಮಹಿಳೆ ಮತ್ತು ಪುರುಷ ಚುನಾಯಿತ ಸದಸ್ಯರಿಗೆ ನಿಮ್ಮ ಮೂರು ಆದ್ಯತೆಯ ವಿಷಯಗಳೇನು ಎಂದು ಕೇಳಲಾಯಿತು. ಮೂಲಭೂತ ಸೌಲಭ್ಯಗಳಿಗೆ ಗತಿಯಿಲ್ಲದ ಆ ಪ್ರದೇಶದಲ್ಲಿ ಪುರುಷರು ಸೂಚಿಸಿದ್ದು ೧. ಬಸ್ ಸೌಕರ್ಯ ೨. ರಸ್ತೆ ೩. ಸಮುದಾಯ ಭವನ. ಆದರೆ ಮಹಿಳೆಯರು ಬಯಸಿದ್ದು (ಸೂಚಿಸಿದ್ದು) ೧. ಕುಡಿಯುವ ನೀರಿನ ಸೌಕರ್ಯ ೨. ಶೌಚಾಲಯ ವ್ಯವಸ್ಥೆ ೩. ಬೀದಿ ದೀಪ....". ಮಹಿಳೆ ಅಧಿಕಾರಕ್ಕೆ ಬಂದರೆ ಗ್ರಾಮಗಳು ಅಭಿವೃದ್ಧಿ ಕಾಣಬಲ್ಲವು. ತಮ್ಮ ಸಮಸ್ಯೆಗಳನ್ನು ತಾವೇ ಗುರುತಿಸಿ ಪರಿಹರಿಸಿಕೊಳ್ಳಬಲ್ಲ ಸಾಮರ್ಥ್ಯ, ಬುದ್ಧಿವಂತಿಕೆ ಇದೆ ಎಂಬುದಕ್ಕೆ ಇದು ಅತ್ಯುತ್ತಮ ನಿದರ್ಶನ. ಹಳ್ಳಿಯ ಬಗೆಗಿನ ಜೀವನಾಡಿಯನ್ನು ಆಕೆ ಬಲ್ಲಳು ಎನ್ನುತ್ತಾರೆ ಸಮಾಜ ವಿಜ್ಞಾನಿಗಳು (ನಾಯಕತ್ವದ ಹೊಸ್ತಿಲಲ್ಲಿ ಮಹಿಳೆ, ಕೆ.ಆರ್.ಮಂಗಳ, ಪ್ರಜಾವಾಣಿ ದಿನಪತ್ರಿಕೆ ದಿ.೫.೩.೨೦೦೦).

ರಾಜಕೀಯ ಮಹಿಳೆಗೆ ಸಂಬಂಧಿಸಿದ ವಿಚಾರವಲ್ಲ. ಅದು ಪುರುಷರಿಗೆ ಸಂಬಂಧಿಸಿದ್ದು, ಅವರಿಗೇ ಒಗ್ಗುವಂಥಹದ್ದು. ಮಹಿಳೆ ತನ್ನ ನೈಸರ್ಗಿಕ ಅರ್ಹತೆಯೊಂದಿಗೆ ಪ್ರಸ್ತುತ ಅಪರಾಧೀಕರಣ ಹಾಗೂ ಜಾತೀಯತೆಯಿಂದ ನಾರುತ್ತಿರುವ ರಾಜಕಾರಣವನ್ನು ನಿಭಾಯಿಸಲಾರಳು. ಮೂಲತಃ ಮೃದುಸ್ವಭಾವದವಳಾಗಿರುವುದರಿಂದ ಅವಳಿಗೆ ಶಿಶು ಪಾಲನೆ, ಸಮಾಜ ಕಲ್ಯಾಣ, ಶಿಕ್ಷಣ ಕ್ಷೇತ್ರಗಳೇ ಸೂಕ್ತ; ರಾಜಕಾರಣದಿಂದ ಸ್ತ್ರೀತನ ನಾಶವಾಗುತ್ತದೆ. ಇತ್ಯಾದಿ ತಲೆಬುಡವಿಲ್ಲದ ಪೂರ್ವಗ್ರಹಪೀಡಿತ ಹೇಳಿಕೆಗಳು ನಮ್ಮ ಮುಂದಿವೆ. ಆದರೆ ತನ್ನ ಅಸ್ತಿತ್ವಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಸಾಕಷ್ಟು ಬೆಲೆ ತೆತ್ತಿರುವ ಅವಳು ಇಂದು ತುಂಬಾ ಪ್ರಬುದ್ಧೆಯಾಗಿದ್ದಾಳೆ. ಮಕ್ಕಳ ಲಾಲನೆ-ಪಾಲನೆ, ಗೃಹಕಾರ್ಯಗಳ ಜೊತೆಜೊತೆಗೆ ಇಂದು ಕಂಪ್ಯೂಟರ್‌ಗಳೊಂದಿಗೆ, ಅಧಿಕಾರಿಗಳೊಂದಿಗೆ, ರೋಗಿಗಳೊಂದಿಗೆ, ಸಹೋದ್ಯೋಗಿಗಳೊಂದಿಗೆ ನಿರ್ಭಯವಾಗಿ, ಸಬಲಳಾಗಿ ವರ್ತಿಸುವ ಅವಳಿಗೆ ರಾಜಕೀಯ ಕ್ಷೇತ್ರ ಹೊರೆ ಎನಿಸದು. ಹೀಗೆ ರಾಜಕೀಯ ಪ್ರವೇಶಿಸಿರುವ "ಮಹಿಳೆಯರಿಗೆ ರಾಜಕೀಯ, ಲೆಕ್ಕಾಚಾರ ಹಾಕಿ ನಡೆಸುವ ವ್ಯವಹಾರವಾಗಿ ಕಂಡಿಲ್ಲ. ಅದೊಂದು ಅವರಿಗೆ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳುವ ಕ್ಷೇತ್ರವಾಗಿ ಪರಿಣಮಿಸಿದೆ. ತಮ್ಮ ಹಕ್ಕು, ಸವಲತ್ತುಗಳ ಬಗ್ಗೆ ಆತ್ಮವಿಶ್ವಾಸ ಮೂಡಿಸಿಕೊಳ್ಳುವ ಕ್ಷಣಗಳನ್ನು ಅದು ಒದಗಿಸುತ್ತದೆ. ಅವಳಿಗೆ ಪುರುಷನಂತೆ ರಾಜಕೀಯದ ಗುರಿ ರಾಜಕೀಯವೇ ಆಗಿರುವುದಿಲ್ಲ. ಅದೊಂದು ಸಾಮಾಜಿಕ ಪರಿವರ್ತನೆಗಾಗಿರುವ ಒಂದು ಮಹತ್ವದ ಮಾಧ್ಯಮ. ಮಾನವ ಹಕ್ಕುಗಳ ಅಂಗವಾಗಿ ತನ್ನ ಹಕ್ಕನ್ನು ಆಕೆ ರಾಜಕೀಯದಲ್ಲಿ ಚಲಾಯಿಸಲು ಇಷ್ಟಪಡುತ್ತಾಳೆ. ಹಾಗಾಗಿ ಮಹಿಳೆ ಅಧಿಕಾರದಲ್ಲಿರುವ ಅನೇಕ ಕಡೆ ಸಾರಾಯಿ ವಿರೋಧಿ ಆಂದೋಲನ, ಸಾಕ್ಷರತಾ ಚಳುವಳಿಯಂತಹ ಸಾಮಾಜಿಕ ನ್ಯಾಯದ ಚಟುವಟಿಕೆಗಳು ಕಂಡುಬರುತ್ತಿವೆ"(ನಾಯಕತ್ವದ ಹೊಸ್ತಿಲಲ್ಲಿ ಮಹಿಳೆ, ಕೆ.ಆರ್.ಮಂಗಳ, ಪ್ರಜಾವಾಣಿ ದಿನಪತ್ರಿಕೆ ದಿ.೫.೩.೨೦೦೦).

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗುರುತರವಾಗಿ ಕಾರ್ಯನಿರ್ವಹಿಸಿದ ISEC ಐಸೆಕ್‌ನ ಪ್ರೊ.ಅಬ್ದುಲ್ ಅಜೀಜ್ ಹೇಳುತ್ತಾರೆ - ''ವ್ಯವಸ್ಥೆಯ ತಿಳುವಳಿಕೆ ನಾಯಕತ್ವಕ್ಕೆ ಅತಿ ಮುಖ್ಯ. ಅಕ್ಷರ ಜ್ಞಾನವಿಲ್ಲದ ಮಹಿಳೆಯರು ಆಡಳಿತದ ಸಾಮಾನ್ಯ ಜ್ಞಾನದಿಂದಲೇ ಉತ್ತಮ ಅಧಿಕಾರ ನಡೆಸಿದ ನಿದರ್ಶನಗಳಿವೆ. ಅಂತೆಯೇ ಅಕ್ಷರಾಭ್ಯಾಸ ಇದ್ದು, ವ್ಯವಸ್ಥೆಯ ಅರಿವಿಲ್ಲದವರು ಶೋಷಣೆಗೆ ಒಳಗಾಗುತ್ತಿರುವ ಉದಾಹರಣೆಗಳೂ ಇವೆ'' ಈ ನಿದರ್ಶನಗಳು ಪುರುಷನ ಅಧಿಕಾರ ರಾಜಕಾರಣದ ಸಂದರ್ಭಗಳಲ್ಲಿ ಹೇರಳವಾಗಿವೆ. ಎಲ್ಲಾ ನಕಾರಾತ್ಮಕ (Negative) ಧೋರಣೆಗಳು ಮಹಿಳೆಯರ ವಿಚಾರದಲ್ಲೇ ಏಕೆ ವ್ಯಕ್ತವಾತ್ತಿವೆಯೆಂಬುದನ್ನು ಎಚ್ಚರದಿಂದ ಆಲೋಚಿಸಬೇಕಾಗಿದೆ.

ಪುರುಷನ ಅಧಿಕಾರ ರಾಜಕಾರಣದಲ್ಲಿ ಗುಂಪುಗಾರಿಕೆ, ತಾರತಮ್ಯ, ಕುಟುಂಬ, ಪ್ರದೇಶ, ಭಾಷೆ, ವರ್ಗ, ಜಾತಿಗಳ ನೆಲೆಯಲ್ಲಿ ಇಂತಹ Negative approach ನಡೆಯುತ್ತಿಲ್ಲವೇ? ಅವುಗಳನ್ನೇಕೆ ಪ್ರಕಟಪಡಿಸುವುದಿಲ್ಲ. ಅಲ್ಲಿಯೂ ಭೇದ ರಾಜಕಾರಣವಿದೆ. ಹೀಗೆ ಮಹಿಳೆಯ ವಿಚಾರ ಹಾಗೂ ಸಂದರ್ಭದಲ್ಲಿ ಆರೋಪಿಸುವ ಅಥವಾ ಹೊಗಳುವ ಎಲ್ಲಾ ಸಂಗತಿಗಳು ಪುರುಷನ ಸಂದರ್ಭದಲ್ಲಿ ಇಮ್ಮಡಿಯಾಗಿವೆ. ಅವು ಪರಸ್ಪರ ಒಂದಕ್ಕೊಂದು ಮುಖಾಮುಖಿಯಾಗಿಸುವ ದಿಕ್ಕಿನಲ್ಲಿವೆ.

ದೇಶದ ಹತ್ತುವರ್ಷಗಳ ಜನಗಣತಿ ಸರ್ಕಾರದ ಸಾಧನೆಯ ಅಂಕಿ ಅಂಶಗಳು ಪ್ರಸ್ತುತಪಡಿಸುವಿಕೆಯ ಹಿಂದೆ ಅದು ಹೆಣ್ಣು, ಶಿಶು ಹತ್ಯೆ. ಇತ್ಯಾದಿ ಸ್ತ್ರೀ ಪುರುಷರ ಮಧ್ಯೆಯಿರುವ ನೈಸರ್ಗಿಕ, ಸಾಮಾಜಿಕ ಅಸಮತೋಲನದ ಬಗ್ಗೆ ಆತಂಕವನ್ನು ವ್ಯಕ್ತಪಡಿಸಿವೆಯೇ ಹೊರತು ಈರ್ವರ ಅನುಪಾತಕ್ಕನುಗುಣವಾಗಿ ದೊರೆಯಬಹುದಾದ ಹಕ್ಕುಗಳು, ಅವಕಾಶಗಳು, ಸವಲತ್ತುಗಳು, ಪ್ರಾತಿನಿಧ್ಯ. ಇತ್ಯಾದಿಗಳ ಬಗ್ಗೆ ಹೆಚ್ಚು ಮಾತನಾಡುವುದಿಲ್ಲ. ಈ ಬಗ್ಗೆ ಎಲ್ಲೂ ಪ್ರಚಾರ ಸಿಗದ ಹಾಗೆ ವಿಮರ್ಶೆಗೊಳಪಡಿಸದಂತೆ ಸೂಕ್ಷ್ಮವಾಗಿ ನಿರಾಕರಿಸಲಾಗಿದೆ. ಕೆಲವೊಮ್ಮೆ ವಿಪರೀತ ಕಾಳಜಿ ಮತ್ತು ಸಹಾನುಭೂತಿಯನ್ನು ತೋರಿಸಲಾಗುತ್ತಿದೆ. ಆದರೆ ಅವಳಿಗೆ ದೊರಕಬೇಕಾದ ಖಚಿತ ಪಾಲುಗಾರಿಕೆ ಬಗ್ಗೆ ಗಟ್ಟಿ ಧ್ವನಿಯಲ್ಲಿ ಮಾತನಾಡಲು ಮನಸ್ಸು ಈ ಪುರುಷ ಪ್ರೇರಿತ ರಾಜಕಾರಣಕ್ಕೆ. ಅವಳು ತನ್ನ ಪ್ರಮಾಣಕ್ಕನುಗುಣವಾಗಿ ರಾಜಕೀಯ ಅಧಿಕಾರವನ್ನು ಪಡೆಯಲು ಬೇಡಿಕೆಯನ್ನಿಟ್ಟಾಗ ಕೊಡುವ ಈ ಸಮಾಜ ಅದನ್ನು ಹಕ್ಕು ಎಂದು ಪ್ರತಿಪಾದಿಸಿದಾಗ ಸಹಜವಾಗಿಯೇ ಅದು ಯಜಮಾನ ಸಂಸ್ಕೃತಿಯ ನಿಜರೂಪವನ್ನು ತಾಳುತ್ತದೆ. ಬೇಡಿಕೆಗಳನ್ನು ನಿರ್ಲಕ್ಷಿಸುತ್ತ, ನಿರಾಕರಿಸುತ್ತ ಸಮಾಜದಲ್ಲಿ ವಿಪರೀತ ಕಟ್ಟುಪಾಡುಗಳನ್ನು ಒತ್ತಾಯಪೂರ್ವಕವಾಗಿ ಅವಳ ಮೇಲೆ ಹೊರಿಸುತ್ತದೆ. ಆ ಮೂಲಕ ಅವಳು ಅಧೀನಳಾಗುವಂತೆ ಯಾವ ಪ್ರತಿರೋಧವನ್ನು ಒಡ್ಡದೆ ವ್ಯವಸ್ಥೆಗೆ ಪೂರಕವಾಗಿ ಕೆಲಸ ಮಾಡುವಂತೆ ಅತೀ ಜಾಣ್ಮೆಯಿಂದ ಪ್ರೇರೇಪಿಸುತ್ತದೆ.

ಹೀಗೆ ಮಹಿಳಾ ರಾಜಕಾರಣದ ಆಶೋತ್ತರಗಳ ಕುರಿತಂತೆ ಅಧ್ಯಯನ ನಿಲುವುಗಳ ಹಿನ್ನೆಲೆಯಲ್ಲಿ ಪರ-ವಿರೋಧದ ವಾಗ್ವಾದಗಳು ನಮ್ಮ ಸಂದರ್ಭದಲ್ಲಿ ಹೇರಳವಾಗಿ ಪ್ರವೇಶಿಸುವುದರ ಬದಲಿಗೆ ಪೂರ್ವದಲ್ಲಿ

ಭಾರತದಲ್ಲಿನ ಮಹಿಳಾ ರಾಜಕಾರಣದ ಸಾಧ್ಯತೆಗಳು ಕುರಿತಂತೆ ಕೆಲವು ಅಂಶಗಳನ್ನು ಚರ್ಚಿಸಲು ಬಯಸುತ್ತದೆ. ಆ ನಂತರದಲ್ಲಿಯಷ್ಟೇ ಮೇಲಿನ ಚರ್ಚೆಗಳ ಸತ್ಯಾಸತ್ಯತೆ ಕುರಿತು ಬಳ್ಳಾರಿ ಜಿಲ್ಲೆಯ ಅನುಭವವನ್ನು ವಿವರಿಸಿಕೊಳ್ಳಬಹುದಾಗಿದೆ.

ಭಾರತದ ಇತಿಹಾಸದಲ್ಲಿ ಅಧಿಕಾರವನ್ನು ಅನುಭೋಗಿಸಿದ ವರ್ಗಗಳು ಹೇಗೆ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವಲ್ಲಿ ತಂತ್ರಗಳನ್ನು ಹೂಡಿದ್ದರು ಅಥವಾ ಸಾಂಸ್ಕೃತಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳ ನೆಲೆಯಲ್ಲಿ ನಿರಂತರವಾಗಿ ರಾಜಕಾರಣವನ್ನು ಮಾಡುತ್ತಾ ಬಂದರೆಂಬುದನ್ನು ಆಧುನಿಕಪೂರ್ವ ಹಾಗೂ ಆಧುನಿಕ ರಾಜಕಾರಣದ ವಸಾಹತುಶಾಹಿ ರಾಜಕಾರಣಗಳಾಗಿ ವಿಂಗಡಿಸಿ ನೋಡುವುದು ಸೂಕ್ತ. ಮುಖ್ಯವಾಗಿ ಗಮನಿಸಬೇಕಾದದ್ದು ಈ ಕಾಲಘಟ್ಟಗಳಲ್ಲಿ ಅಧಿಕಾರ ರಾಜಕಾರಣವನ್ನು ವರ್ಗ, ವರ್ಣ, ಜಾತಿ, ಉನ್ನತ ಕುಟುಂಬದ ಹಿನ್ನೆಲೆಯಲ್ಲಿ ಅನುಭವಿಸುತ್ತಲೇ ಅದು ಬೇರೆ ಬೇರೆ ರೂಪಗಳಲ್ಲಿ ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸುತ್ತಲೇ ಬಂದಿರುವುದು. ಪುರುಷ ರಾಜಕಾರಣವು ಮಹಿಳೆಯನ್ನು ಒತ್ತಾಯ ಪೂರ್ವಕವಾಗಿ, ಸಹಕಾರಿಯಾಗಿ ತನ್ನಿಷ್ಟಕ್ಕೆ ಬಳಸಿಕೊಳ್ಳುತ್ತಲೇ ಅವರನ್ನು ಸಾಂಸ್ಕೃತಿಕ, ಸಾಮಾಜಿಕ, ದೈವಿಕ, ಕೌಟುಂಬಿಕ ಮನೆತನದ ಆದರ್ಶ ಸಂಕೇತವಾಗಿ ನೋಡುತ್ತಲೇ ಬಂದಿದೆ. ಇದು ಹಿಂದಿನಿಂದ ಈವರೆಗೂ ಅದೇ Strateger ಯಲ್ಲಿ (ಹುನ್ನಾರವಾಗಿ)ಮಹಿಳೆಯರಿಗೆ ಅವಕಾಶಗಳನ್ನು ಕೊಡುತ್ತಲೇ ನಿಯಂತ್ರಣದ ತಂತ್ರಗಾರಿಕೆಯನ್ನು ಮಾಡುತ್ತಲೇ ಬಂದಿರುವುದನ್ನು ಭಾರತದ ಮಹಿಳಾ ರಾಜಕಾರಣದ ಸಾಧ್ಯತೆಯಡಿ ವರ್ಗೀಕರಿಸಿ ನೋಡುವುದು ಹೆಚ್ಚು ಅರ್ಥಪೂರ್ಣವಾಗಬಹುದು.

## ಆಧುನಿಕ ಪೂರ್ವ ರಾಜಕಾರಣದಲ್ಲಿ ಮಹಿಳೆ

ಆಧುನಿಕಪೂರ್ವ ಭಾರತೀಯ ಸಮಾಜದ ವರ್ಣಾಶ್ರಮ ವ್ಯವಸ್ಥೆ ಅದರ ಪ್ರಧಾನ ಲಕ್ಷಣವಾಗಿತ್ತು. ಚಾತುರ್ವರ್ಣಾಧಾರಿತ ಸಮಾಜ, ಅಧಿಕಾರವನ್ನು ವರ್ಣಾಧಾರಿತವಾಗಿ ಅನುಭೋಗಿಸಿರುವುದು ಇತಿಹಾಸದಿಂದ ತಿಳಿದುಬಂದಿರುವ ಸತ್ಯ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣಗಳು ಶ್ರೇಣೀಕರಣದ ಆಧಾರದಲ್ಲಿ ಅಧಿಕಾರವನ್ನು ಹಂಚಿಕೊಳ್ಳಲಾಗಿತ್ತು. ಬ್ರಾಹ್ಮಣರು ವಿದ್ಯೆಯನ್ನು, ಕ್ಷತ್ರಿಯರು ಯುದ್ಧವನ್ನು, ವೈಶ್ಯರು ವ್ಯಾಪಾರವನ್ನು, ಶೂದ್ರರು ಆ ಮೂರು ವರ್ಗಗಳ ಸೇವೆ ಮಾಡುವುದರ ಜೊತೆಗೆ ಕೃಷಿ ಹಾಗೂ ಸಂಬಂಧಿತ ವೃತ್ತಿಗಳನ್ನು ಮಾಡುವುದು ಶಾಸನಬದ್ಧವಾಗಿತ್ತು. ಇವರಲ್ಲಿ ಬ್ರಾಹ್ಮಣನು ಹೆಚ್ಚಿನ ಅಧಿಕಾರ, ಗೌರವ ಹಾಗೂ ಸವಲತ್ತುಗಳನ್ನು ಪಡೆಯುತ್ತಿದ್ದನು. ಮೂರು ವರ್ಗಗಳ ನಿಯಂತ್ರಣ ಹಾಗೂ ದೈವೀಕರಿಸಲ್ಪಟ್ಟ ಅಪಾರ ಅಧಿಕಾರವನ್ನು ಅನುಭೋಗಿಸುತ್ತಿದ್ದ ರಾಜನಿಗೆ ಮಂತ್ರಿಯಾಗಿ, ಸಲಹೆಗಾರನಾಗಿ, ಸಮಾಜದ ಗೌರವಾನ್ವಿತ ವ್ಯಕ್ತಿಯಾಗಿ, ಧಾರ್ಮಿಕ ವಿಷಯಗಳ ಅಧಿಪತಿಯಾಗಿ, ರಾಜ್ಯಾಂಗದ ನಿರೂಪಕನಾಗಿ ಹೀಗೆ ಎಲ್ಲ ಬಗೆಯ ಅಧಿಕಾರ ರಾಜಕಾರಣವನ್ನು ಅವನು ಮಾಡುತ್ತ ಬಂದಿರುವುದು ಚಾರಿತ್ರಿಕ ಸತ್ಯವಾಗಿದೆ. ಆಗಿನ ವರ್ಣಾಧಾರಿತ ಜಾತಿಗನುಗುಣವಾಗಿ ಸಮಾಜದ ಅಧಿಕಾರವು ಶ್ರೇಣೀಕೃತವಾಗಿ ವಿಂಗಡಿಸಲ್ಪಟ್ಟಿದ್ದರಿಂದ

ಅಲ್ಲಿ ಕೊಡುಕೊಳ್ಳುವ ಯಾವ ಚಟುವಟಿಕೆಗಳೂ ನಡೆಯುತ್ತಿರಲಿಲ್ಲ. ಅವರ ವ್ಯಾಪ್ತಿಗೆ ಬರುವ ಅಧಿಕಾರಗಳನ್ನು ಅಂದಿನ ವರ್ಗಗಳು ಅನುಭೋಗಿಸುತ್ತಿದ್ದವು. ಅಂದರೆ ಈ ನಾಲ್ಕು ವರ್ಣಗಳ ಮಧ್ಯೆ ಯಾವುದೇ ಸಂಬಂಧವಿಲ್ಲದಿದ್ದರೂ ಒಂದಕ್ಕೊಂದು ಪೂರಕವಾಗಿ ತಮ್ಮ ಪಾಲಿನ ಅಧಿಕಾರವನ್ನು ಮಾಡುತ್ತ ಬಂದಿವೆ. ಮೇಲಾಗಿ ಒಂದು ವರ್ಗ ಇನ್ನೊಂದು ವರ್ಗವನ್ನು ಏಣಿಯಾಗಿ ಶ್ರೇಣಿಕರಿಸಿದ್ದರಿಂದ ಈ ಬಗೆಯ ಶೋಷಣೆಯುಕ್ತ ಹೊಣೆಗಾರಿಕೆ ಅಂದಿನ ಪರಿಸರಕ್ಕೆ ಅನಿವಾರ್ಯವಾಗಿತ್ತು. ಸಮಾಜ ಹಾಗೂ ಧಾರ್ಮಿಕ ವಿಧಿಗಳು ಕೂಡ ಅದನ್ನು ಒಪ್ಪಿಕೊಂಡಿದ್ದವು. ಕಾಲಕ್ರಮೇಣ ನಾಲ್ಕು ವರ್ಗಗಳ ನಡುವಿನ ಗೋಡೆಗಳು ಕುಸಿದು ಪರಸ್ಪರ ಅಧಿಕಾರ ವಿನಿಮಯದಂತಹ ಚಟುವಟಿಕೆಗಳು ಅಲ್ಪ ಪ್ರಮಾಣದಲ್ಲಿ ಕಾಣಿಸುವ ಸೂಚನೆಗಳು ದೊರೆತವು. ಇದು ನೇರವಾಗಿ ಅಲ್ಲದಿದ್ದರೂ ವಿವಾಹದಂತಹ ಕ್ರಿಯೆಗಳ ಮೂಲಕ ಬೇರೆ ಬಗೆಯ ವರ್ಗ ಅಥವಾ ವರ್ಣಗಳ ಹುಟ್ಟಿಗೆ ಕಾರಣವಾಗಿ ಅನೇಕ ಸಾಮ್ರಾಜ್ಯಗಳನ್ನು ಕಟ್ಟಿ ಆಳಿದ ಇತಿಹಾಸ ಪರಂಪರೆಯೇ ಬೆಳೆಯಿತು. ಆರಂಭದಲ್ಲಿ ಪರಸ್ಪರರಲ್ಲಿಅಧಿಕಾರ ಹಸ್ತಾಂತರವಾಗಲೀ, ಹೊಂದುವಿಕೆಯಾಗಲೀ ಇರಲಿಲ್ಲವಾದರೂ ನಂತರದಲ್ಲಿ ವರ್ಣ ಸಂಕರಗಳು ಮಾತ್ರ ನಡೆಯುತ್ತಿದ್ದವು. ಆಧುನಿಕ ಪೂರ್ವ ರಾಜಕಾರಣವು ವರ್ಣಾಶ್ರಮ ವ್ಯವಸ್ಥೆಯಿಂದ ಆಧಾರಿತವಾಗಿತ್ತು ಎಂಬುದು ನಿಜವಾದರೂ ಕಾಲಾನುಕ್ರಮದಲ್ಲಿ ಅದು ವರ್ಣಸಂಕರವನ್ನು ಸಮಾಜದ ಪ್ರಮುಖ ಲಕ್ಷಣವಾಗಿ ಹೊಂದಿತ್ತು.

ವರ್ಣಸಂಕರದ ಸ್ಥಾನಮಾನಗಳು ಶ್ರೇಣೀಕರಣದ ಆಧಾರದಲ್ಲಿ ನಿರ್ಧಾರವಾಗುತ್ತಿದ್ದರೂ ಅದು ಕ್ಷತ್ರಿಯ ಸಮಾಜದ ಮೇಲೆ ಹೆಚ್ಚಿನ ಹಿಡಿತವನ್ನು ಹೊಂದುವುದು ಸಾಧ್ಯವಿರಲಿಲ್ಲ. ಹಾಗೆಯೇ ಉಳಿದ ವರ್ಗಗಳಲ್ಲಿ ವರ್ಣಸಂಕರವಾಗಿರುವುದನ್ನು ಇತಿಹಾಸದಿಂದ ಗುರುತಿಸಲಾಗಿದೆ. ಹಾಗಾಗಿ ಇತಿಹಾಸದಲ್ಲಿ ಬೇರೆ ಬೇರೆ ಸಮುದಾಯಗಳ ಜನ ತಮ್ಮ ಸಾಮರ್ಥ್ಯ, ಬೆಂಬಲಗಳೊಡನೆ ಹಾಗೂ ಇತರೆ ವರ್ಣಗಳೊಡನೆ ಏರ್ಪಡಿಸಿಕೊಂಡ ಒಪ್ಪಂದದಿಂದಾಗಿ ರಾಜ್ಯಗಳನ್ನು ನಿರ್ಮಿಸಿ ಆಡಳಿತ ನಡೆಸಿದ ಹೇರಳವಾದ ಉದಾಹರಣೆಗಳಿವೆ. 'ಕ್ರಿ.ಶ.೨ನೇ ಶತಮಾನದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ವಾಕಾಟಕ ಬ್ರಾಹ್ಮಣರು ಮತ್ತು ಭಾರಶಿವ ನಾಗಕ್ಷತ್ರಿಯರು ವರ್ಣಸಂಕರವನ್ನು ಒಪ್ಪಿಕೊಂಡುಬಿಟ್ಟರು. ಹಾಗೆಯೇ ಚಂದ್ರಗುಪ್ತ ವಿಕ್ರಮಾದಿತ್ಯ ತನ್ನ ಮಗಳು ಪ್ರಭಾವತಿಯನ್ನು ವಾಕಾಟಕ ರಾಜಕುಮಾರನಿಗೆ ಮದುವೆ ಮಾಡಿಕೊಟ್ಟನು.' (ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಭಗವತ ಶರಣ್ ಉಪಾಧ್ಯಾಯ, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ೧೯೬೦-೧೯೮೫, ಪುಟ ೧೭೫-೧೭೬) ಈ ವರ್ಣಸಂಕರವನ್ನು ಸಾಮಾನ್ಯ ಕ್ರಿಯೆ ಎಂಬಂತೆ ಸಾಬೀತುಗೊಳಿಸಿದ್ದನು. ಆಗಿನ ಸಮಾಜದ ವರ್ಣವ್ಯವಸ್ಥೆಗೆ ವಿರುದ್ಧವಾಗಿ ನಡೆದ ವಿವಾಹಗಳನ್ನು ಒಪ್ಪಿ ಸ್ವೀಕರಿಸಿದ್ದಲ್ಲದೇ ಯಾವ ವಿರೋಧವನ್ನು ಒಡ್ಡಲಿಲ್ಲವೆಂಬುದು ಗಮನಿಸುವಂತಹದ್ದು, ಇದೇ ವೇಳೆಗೆ ವೈದಿಕ ಧರ್ಮದ ವರ್ಣಾಶ್ರಮ ವ್ಯವಸ್ಥೆ ಮತ್ತು ರಾಜಕೀಯ ಪ್ರತಿಷ್ಠೆಯನ್ನು ಪುನರುಜ್ಜೀವನಗೊಳಿಸುವ ಉದ್ದೇಶದಿಂದ ಬೌದ್ಧ ಮತ್ತು ಶೂದ್ರಶಕ್ತಿಗಳನ್ನು ಬ್ರಾಹ್ಮಣವರ್ಗ ಕ್ಷತ್ರಿಯರ ವಿರುದ್ಧ ತನ್ನ ಒಪ್ಪಂದದ ಮೂಲಕ ಎತ್ತಿ ಕಟ್ಟಿ ಯಶಸ್ವಿಯೂ ಆಗಿತ್ತು.

ಹೀಗೆ ಅಧಿಕಾರಕ್ಕಾಗಿ ವರ್ಣಾಧಾರದ ಮೇಲೆ, ವರ್ಗದ ಆಧಾರದ ಮೇಲೆ ಕಾದಾಟಗಳಾದ ಇತಿಹಾಸವೇ ದೊಡ್ಡದಿದೆ. ಅರಸೊತ್ತಿಗೆ ಕಾಲದಲ್ಲಿನ ದಾಸಿಯರ ಪುತ್ರರು, ಕೈ ಕೆಳಗಿನ ಮಾಂಡಲೀಕರು, ಬುಡಕಟ್ಟು ಸಮಾಜದ ನಾಯಕರು, ಕ್ಷತ್ರಿಯರಾಗಿ ರಾಜ್ಯಾಧಿಕಾರವನ್ನು ಹಿಡಿದು ವರ್ಣವ್ಯವಸ್ಥೆಯನ್ನೇ ಅಲುಗಾಡಿಸಿದ್ದರು. ವಿದೇಶೀ ದಾಳಿಕೋರರು ಕೂಡ ಈ ದೇಶದ ನೆಲವನ್ನು ಆಕ್ರಮಿಸಿಕೊಳ್ಳುತ್ತಲೇ ರಾಜ್ಯಾಧಿಕಾರವನ್ನು ಪಡೆದು ಅವರೂ ಕ್ಷತ್ರಿಯರಾಗಿಬಿಟ್ಟರು. ಹೀಗೆ ಸಂಖ್ಯಾಬಲ, ಶಕ್ತಿಬಲದಿಂದ, ಸಾಮರ್ಥ್ಯವುಳ್ಳವರೆಲ್ಲ ಕ್ಷತ್ರಿಯರಾಗುವುದರ ಮೂಲಕ ಆ ವರ್ಗ ತುಸು ಹೆಚ್ಚಿನ ಮುಕ್ತತೆಯನ್ನು ಕಲ್ಪಿಸಿಕೊಂಡಿತ್ತು ಎಂಬುದನ್ನು ಗಮನಿಸಬಹುದು. ಕ್ಷತ್ರಿಯರಾಗುವುದಕ್ಕಾಗಿ ಅನೇಕ ವರ್ಣಸಂಕರಗಳು ನಡೆದಿವೆ. ಹಾಗಾಗಿಯೇ ವಿದ್ವಾಂಸರು ಕ್ಷತ್ರಿಯ ಸಮುದಾಯವೊಂದು ಕಲ್ಪಿತ ಸಮುದಾಯವೆಂದು ಕರೆಯುತ್ತಾರೆ. ಬೇರೆ ಬೇರೆ ಸಮುದಾಯದ ಜನ ರಾಜ್ಯಗಳನ್ನು ಕಟ್ಟಿ, ಆಳಿ ಇತಿಹಾಸ ನಿರ್ಮಿಸುವ ಹೊತ್ತಿಗೆ ಐತಿಹ್ಯಗಳಲ್ಲಿ ಮುಳುಗಿ ಹೋಗಿದ್ದಾರೆ. ತಮ್ಮ ನಿಜ ಜಾತಿಗಳನ್ನು ಬಿಟ್ಟು ಕಲ್ಪಿತ ಯದುವಂಶ, ಸೂರ್ಯವಂಶ, ಚಂದ್ರವಂಶ, ಸೋಮವಂಶಗಳ ವಾರಸುದಾರರಾಗಿ ಪರಿವರ್ತಿತರಾಗಿದ್ದಾರೆ ಎಂಬುದನ್ನು ಈ ಅಧ್ಯಯನಗಳು ಗುರುತಿಸುತ್ತಿವೆ.

ಮೇಲಿನೆಲ್ಲಾ ವರ್ಣಸಂಕರದ ಮಾದರಿಗಳನ್ನು ನೋಡಿದರೆ ಭಾರತದಲ್ಲಿ ವರ್ಣಾಶ್ರಮದ ಕಟ್ಟುಪಾಡಿನಲ್ಲಿ ಕೂಡ ಕೆಲವು ಬಾರಿ ವರ್ಣಗಳವರೆಗೆ ರಾಜಕೀಯ ಪ್ರವೇಶ ಸಾಧ್ಯವಾಗಿದೆ ಎಂಬುದು. ಈ ಹಿನ್ನಲೆಯಲ್ಲಿ ಲಿಂಗಭೇದದ ಕಟ್ಟುಪಾಡುಗಳನ್ನಾಧಾರಿಸಿ, ಪ್ರಾಚೀನ ಕಾಲದ ಮಹಿಳೆಯ ರಾಜಕೀಯ ಪ್ರವೇಶದ ಸಾಧ್ಯತೆಗಳೇನು? ಎಂಬುದನ್ನು ಗಮನಿಸಬಹುದು.

ಭಾರತೀಯ ವರ್ಣಾಶ್ರಮ ವ್ಯವಸ್ಥೆಯ ಮಹಿಳೆಯನ್ನು ತನ್ನ ಸಂರಚನೆಯೊಂದಿಗೆ ಒಳಪಡಿಸಿಕೊಂಡಿದ್ದರಿಂದ ಅದು ಆಯಾವರ್ಣದೊಳಗೆ ಮಹಿಳೆಯ ಸ್ಥಾನಮಾನವನ್ನು ಪುರುಷನಿಗೆ ಅಧೀನಗೊಳಿಸಿದ್ದರೂ ವರ್ಣಗಳ ನಡುವಿನ ತುಲನೆಯಲ್ಲಿ ಸ್ತ್ರೀಗೂ ಶ್ರೇಣೀಕರಣದ ಸೌಲಭ್ಯ ಒದಗಿಸಿತ್ತು. ಆ ಮನೆಯ ಆಗು ಹೋಗುಗಳೆಲ್ಲ ಅವಳ ಕೈಯಲ್ಲಿಯೇ ಇದ್ದು, ಮನೆಯೊಡತಿಯೂ ಆಗಿದ್ದಳು. ಎಲ್ಲಾ ದಾಸ ದಾಸಿಯರು, ಹಣಕಾಸು, ಪಶು ಸಂಪತ್ತು ಎಲ್ಲವೂ ಅವಳ ಅಧೀನದಲ್ಲಿಯೇ ಇದ್ದವು. ಪತಿಯೊಂದಿಗೆ ಅಧಿಕಾರಪೂರ್ವಕವಾಗಿ ಯಜ್ಞಾನುಷ್ಠಾನಗಳಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದು ಮಹಿಳಾ ರಾಜಕಾರಣದ ಸಾಧ್ಯತೆಯನ್ನು ತೋರಿಸುತ್ತದೆ. ತನ್ನ ವರ್ಗದ ಕುಟುಂಬದೊಳಗೇ ಕೇಂದ್ರೀಕೃತವಾಗಿ ಅಧಿಕಾರವನ್ನು ಪಡೆದಿದ್ದಳು. ಅರಸನ ಹೆಂಡತಿಯಾಗಿಯೋ, ಹಿರಿಯ ಸೊಸೆಯಾಗಿಯೋ, ತಾಯಿಯಾಗಿಯೋ ಅಥವಾ ಹಿರಿಯ ಮಗಳಾಗಿಯೋ ಕುಟುಂಬದ ಅಧಿಕಾರ ಕೇಂದ್ರಗಳನ್ನು ಅವಳು ನಿರ್ದೇಶಿಸುತ್ತಿದ್ದಳು.

ಹೀಗೆ ಮಹಿಳೆಯರ ರಾಜಕಾರಣದ ಸಾಧ್ಯತೆಗಳನ್ನು ಪ್ರತಿಷ್ಠಿತ ವರ್ಗದ, ಕುಟುಂಬದ ಹಿನ್ನೆಲೆಯಲ್ಲಿ ಸಾಮಾಜಿಕವಾಗಿಯಲ್ಲದಿದ್ದರೂ ವೈಯಕ್ತಿಕವಾಗಿ ಕಂಡುಕೊಂಡಿರುವುದು ತಿಳಿದುಬರುತ್ತದೆ. ಉದಾಹರಣೆಗೆ ಕಾಶ್ಮೀರದ ದಿದ್ದಾ, ಅಹಲ್ಯಾಬಾಯಿ, ೧೮೫೭ ಸಿಪಾಯಿದಂಗೆ ಅಥವಾ ಭಾರತದ ಪ್ರಥಮ ರಾಷ್ಟ್ರೀಯ ಸ್ವಾತಂತ್ರ್ಯ

ಸಂಗ್ರಾಮದಲ್ಲಿ ಝಾನ್ಸಿರಾಣಿ ಲಕ್ಷ್ಮೀಬಾಯಿ ಖಡ್ಗದೊಂದಿಗೆ ಮಿಂಚಿ ಪುರುಷರಿಗೂ ಮುಂದಾಳಾಗಿದ್ದಳು. ಈ ಮಹಿಳೆಯರು ತಮ್ಮ ಕುಟುಂಬದ ನೆಲೆಯಿಂದ ಸಾಕಷ್ಟು ಅಧಿಕಾರವನ್ನು ಹೊಂದಿದ್ದಲ್ಲದೆ, ತನ್ನ ವಂಶದ ಪುರುಷರ ಪ್ರತಿನಿಧಿಯಾಗಿಯೂ (ಝಾನ್ಸಿರಾಣಿ ಲಕ್ಷ್ಮೀಬಾಯಿ) ಸ್ವೀಕಾರಗೊಂಡಿದ್ದು ಚರಿತ್ರಾರ್ಹ ಸಂಗತಿ.

ಪಿತೃಪ್ರಧಾನ ಸಮಾಜದ ಅತಿಮುಖ್ಯ ಸಂಸ್ಥೆಗಳಲ್ಲಿ ಒಂದಾದ ಕುಟುಂಬವೂ ಅಧಿಕಾರ ಸ್ಥಾನಗಳನ್ನು ನಿರ್ದೇಶಿಸುವಾಗ ಪುರುಷನನ್ನು ಅತ್ಯುಚ್ಚ ಸ್ಥಾನದಲ್ಲಿರುವಂತೆ ನೋಡಿಕೊಂಡು ಅವುಗಳ ನಡುವೆ ಸ್ತ್ರೀಯ ಅಧಿಕಾರ ಕೇಂದ್ರಗಳನ್ನು ನಿರ್ದೇಶಿಸಿತ್ತು. ಉದಾಹರಣೆಗೆ ಪತಿಯ ಎದುರಿಗೆ ಪತ್ನಿಯು ಸರಿಗಟ್ಟುತ್ತಿದ್ದರೂ ಸೊಸೆಯ ಎದುರಿಗೆ ಅತ್ತೆಯಾಗಿ ಅಧಿಕಾರ ಸ್ಥಾನವನ್ನು ಪಡೆಯುವಂತಾಯಿತು. ಹಾಗೆಯೇ ಮಗನ ಎದುರಿಗೆ ತಾಯಿಯಾಗಿ ತಂದೆಯ ಅಧಿಕಾರ ಸ್ಥಾನವನ್ನು ಪಡೆಯುವಂತಾಯಿತು. ಈ ಕೌಟುಂಬಿಕ ಪಾತ್ರ ರಚನೆಗಳು ವಂಶಪಾರಂಪರ್ಯ ರಾಜ ಪ್ರಭುತ್ವದ ಸಂದರ್ಭದಲ್ಲಿ ವಿಶೇಷ ಪ್ರಭಾವವನ್ನು ಬೀರಿತ್ತು. ಅರಸೊತ್ತಿಗೆಯ ರಾಜನಿಲ್ಲದ ಸಂದರ್ಭಗಳಲ್ಲಿ ಅವನ ಪತ್ನಿ, ತಾಯಿ ಅಥವಾ ಪುತ್ರಿಯು ಅಥವಾ ಸೊಸೆಯು ರಾಜಕಾರಣದ ಅಧಿಕಾರವನ್ನು ಹೊಂದುವಂತಹ ಅವಕಾಶವನ್ನು ಕಲ್ಪಿಸಿದ್ದುದು ಪ್ರಾಚೀನ ಭಾರತದಲ್ಲಿ ಮಹಿಳಾ ರಾಜಕಾರಣದ ಸಾಧ್ಯತೆಗಳನ್ನು ಸೂಚಿಸುತ್ತದೆ.

ಮಹಿಳೆ, ವಿಜಯನಗರದ ಆಳ್ವಿಕೆಯ (ಕ್ರಿ.ಶ. ೧೩೩೬) ಪೂರ್ವದಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಅತಿಮುಖ್ಯ ಪಾತ್ರವಹಿಸುತ್ತಿದ್ದುದನ್ನು ಇತಿಹಾಸ ಗುರುತಿಸಿದೆ. ಅನೇಕ ಶಿಲಾಶಾಸನಗಳು, ಸ್ಮಾರಕಗಳು ಇತ್ಯಾದಿ ಇದಕ್ಕೆ ಸಾಕ್ಷಿಯಾಗಿ ನಿಂತಿವೆ. ಭಾರತದ ಸಮಾಜ ಪಿತೃಪ್ರಧಾನ ವ್ಯವಸ್ಥೆಯನ್ನು ಹೊಂದಿದ್ದರೂ ಪತಿ ಪತ್ನಿಯರಿಬ್ಬರೂ ರಥಕ್ಕಿರುವ ಎರಡು ಗಾಲಿಗಳಂತೆ. ಬಾಳ ರಥವನ್ನು ಸಾಗಿಸುವಲ್ಲಿ ಅನ್ಯೋನ್ಯವಾಗಿದ್ದರು. ಕುಟುಂಬದಲ್ಲಿ ಅವಳು ಈ ಕಾರಣಕ್ಕಾಗಿಯೇ ಮಹತ್ವದ ಸ್ಥಾನವನ್ನು ಹೊಂದಿದ್ದಳು. ಮನೆಯೊಡತಿಯಾದ ಅವಳಿಗೆ ಅತ್ಯುನ್ನತ ಗೌರವವೂ ಲಭಿಸಿತ್ತು. ಹೆಣ್ಣು ಹುಟ್ಟಿದರೆ ಕುಟುಂಬಕ್ಕೆ ಹೊರೆ ಎನ್ನುವ ಭಾವನೆಯಾಗಲಿ, ಪರಂಪರೆಯೇ ಇರಲಿಲ್ಲ. ಸಮಾಜದಲ್ಲಿ ಪುರುಷನಷ್ಟೇ ಅಧಿಕಾರ, ಅವಕಾಶಗಳನ್ನು ಕಲ್ಪಿಸಲಾಗಿತ್ತು. ಹೆಚ್ಚಾಗಿ ಮಹಿಳೆಯರಿಗೆ ಕಲೆ, ಸಂಗೀತ ಮತ್ತು ನೃತ್ಯಗಳಂತಹ ಕ್ಷೇತ್ರಗಳಲ್ಲಿ ಆದ್ಯತೆಯಿರುತ್ತಿತ್ತು.

ಆದರೆ ಈ ಬಗೆಯ ಅವಕಾಶಗಳು ಕೇವಲ ಪ್ರತಿಷ್ಠಿತ ವರ್ಗಗಳ (ಮೇಲುಸ್ತರದ) ಸ್ತ್ರೀಯರಿಗೆ ಮಾತ್ರ ಮೀಸಲಿಟ್ಟಿರುವುದು ತಾರತಮ್ಯವನ್ನು ಸೂಚಿಸುತ್ತದೆ. ಜನಸಾಮಾನ್ಯರನ್ನು ನಿರಾಕರಿಸುತ್ತ ಈ ಮಹಿಳೆಯರನ್ನು ಬಾಲ್ಯವಿವಾಹದಂತಹ ಪದ್ಧತಿಗಳಿಗೆ ದೂಡುತ್ತ ಶಿಕ್ಷಣದಿಂದ ವಂಚಿತರನ್ನಾಗಿಸಿತ್ತು. ಸಮಾಜದಲ್ಲಿನ ಅಧಿಕಾರ ವರ್ಗದ ಪುರುಷ ಮತ್ತು ಸ್ತ್ರೀಯರು ಇಬ್ಬರಿಗೆ ಮಾತ್ರ ಪರಸ್ಪರ ಅಂತರ್‌ಜಾತೀಯ ವಿವಾಹಕ್ಕೆ ಅವಕಾಶವಿತ್ತು. ಅವರೆಂದರೆ ಉನ್ನತ ವರ್ಗದವರೆಂದು ಗುರುತಿಸಲ್ಪಟ್ಟ ವೈಷ್ಣವರು, ಜೈನರು ಮತ್ತು ಶೈವರು. ಇದಕ್ಕೆ ರಾಣಿ ಶಾಂತಲಾದೇವಿ ಮತ್ತು ಹೊಯ್ಸಳ ಸಾಮ್ರಾಟ ವಿಷ್ಣುವರ್ಧನರ ವಿವಾಹವೇ ಉದಾಹರಣೆಯಾಗಿತ್ತು. ಅವಳ ತಂದೆ, ಶೈವ ತಾಯಿ ಜೈನ ಮತ್ತು ಪತಿಯು ವೈಷ್ಣವ ಮತಕ್ಕೆ ಸೇರಿದವರಾಗಿದ್ದರು.

ಬಹುಪತ್ನಿತ್ವ ಪದ್ಧತಿಯ ಆಚರಣೆಯು ಅಂದಿನ ಸಮಾಜದಲ್ಲಿ ಭೋಗದ ಹಾಗೂ ಪ್ರತಿಷ್ಠೆಯ ಸಾಮಾನ್ಯ ನಡುವಳಿಕೆಯಾಗಿತ್ತು. ಚಾತುವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರುಗಳಲ್ಲಿಯೂ ಇದು ಶ್ರೇಣೀಕೃತವಾಗಿ ಆಚರಣೆಯಲ್ಲಿತ್ತು. ಬ್ರಾಹ್ಮಣ ತನ್ನ ವರ್ಗವಲ್ಲದೆ ಉಳಿದ ಮೂರು ವರ್ಗದ ಹೆಣ್ಣು ಮಕ್ಕಳೊಂದಿಗೆ ಮದುವೆಯಾಗಬಹುದಿತ್ತು. ಹಾಗೆಯೇ ಕ್ಷತ್ರಿಯರು ತಮ್ಮೊಂದಿಗೆ ಕೆಲಗಿನ ಉಳಿದ ಎರಡು ವರ್ಗದ ಸ್ತ್ರೀಯರನ್ನು ವಿವಾಹವಾಗಲು, ವೈಶ್ಯರು ತಾವಲ್ಲದೆ ಉಳಿದ ಶೂದ್ರ ಹೆಣ್ಣು ಮಕ್ಕಳನ್ನು ಮದುವೆಯಾಗಬಹುದಿತ್ತು. ಆದರೆ ಶೂದ್ರರು ಮಾತ್ರ ಸ್ವಜಾತಿಯಲ್ಲದೆ ಮೇಲಿನ ಮೂರೂ ವರ್ಣದವರ ಜೊತೆ ಮದುವೆಯಾಗುವಂತಿರಲಿಲ್ಲ. ಈ ನಾಲ್ಕು ವರ್ಣಕ್ಕೆ ಇರದ ಹೆಚ್ಚಿನ ಸ್ವೇಚ್ಛೆಯನ್ನು - ವಿನಾಯಿತಿಯನ್ನು ರಾಜರಿಗೆ ಪತ್ನಿಯರನ್ನು ಅಸಂಖ್ಯವಾಗಿ ಹೊಂದಲು ನೀಡಿರುವುದು ಚರ್ಚೆಗೆ ಒಳಪಡಿಸುವಂತಹದ್ದು.

ಇಲ್ಲಿ ಮಹಿಳೆಯರನ್ನು ಪುರುಷರಿಗೆ ಅಧೀನಳಾಗಿ ನೆರಳಾಗಿ ಬಾಳುವುದು ಆದರ್ಶ ನಾರಿಯರ ಲಕ್ಷಣವೆಂಬಂತೆ ಚಿತ್ರಿಸಲಾಗಿತ್ತು. ಇದರಿಂದ ಹೆತ್ತಮನೆಗೆ, ಗಂಡನ ಮನೆಗೆ ಕೀರ್ತಿ ತರುವುದು ಅವಳ ಕರ್ತವ್ಯ ಎಂದೆಣಿಸಲಾಗಿತ್ತು. ಎರಡೂ ಮನೆತನಗಳ ಗೌರವ-ಮರ್ಯಾದೆಯನ್ನು ಕಾಪಾಡುವುದು ಅವಳ ಹೊಣೆಯಾಗಿತ್ತು. ಈ ಕಾರಣಕ್ಕಾಗಿ ಅನೇಕ ಮಹಿಳೆಯರು ತ್ಯಾಗ, ಬಲಿದಾನಗಳನ್ನು ಮಾಡಿದ ಘಟನೆಗಳು ಚರಿತ್ರೆಯಲ್ಲಿ ಹೇರಳವಾಗಿ ದಾಖಲಾಗಿವೆ. ಜಾನಪದ ಕಥೆ, ಹಾಡು, ಕುಣಿತಗಳ ಮೂಲಕವೂ ಪ್ರಚಾರವಾಗುತ್ತಿದ್ದವು. ಪತಿಯೊಂದಿಗೆ ಚಿತೆಯನ್ನೇರುವ ಸತಿಯರಿಗೆ (ಸತಿಸಹಗಮನ ಪದ್ಧತಿ) ಮಹಾಸತಿ, ವೀರಸತಿ ಎಂದು ಕರೆಯುವುದಲ್ಲದೆ, ಅವರ ನೆನಪಿಗಾಗಿ ಮಹಾಸತಿ ಕಲ್ಲುಗಳನ್ನು, ವೀರಗಲ್ಲುಗಳನ್ನು ನೆಟ್ಟು ಪೂಜಿಸಲಾಗುತ್ತಿತ್ತು. ಈ ಪದ್ಧತಿ ಸಮಾಜದ ಉನ್ನತವರ್ಗದ ಮಹಿಳೆಯರಲ್ಲಿ ಮಾತ್ರ ಆಚರಣೆಯಲ್ಲಿತ್ತು.

ಧಾರ್ಮಿಕವಾಗಿಯೂ ಅವಳಿಗೆ ಉನ್ನತ ಸ್ಥಾನವನ್ನೇ ನೀಡಲಾಗಿತ್ತು. ಆಗಿನ ಜೈನ ಧರ್ಮವೂ ಸಹ ಪುರುಷರಂತೆ ಮಹಿಳೆಯರಿಗೂ ಮುಕ್ತವಾದ ಆಹ್ವಾನವನ್ನು ನೀಡಿತ್ತು. ನಂತರ ವೀರಶೈವರು (೧೨ನೆಯ ಶತಮಾನದಲ್ಲಿ) ಮಹಿಳೆಯರಿಗೆ ಸಮಾನಹಕ್ಕು, ಸ್ಥಾನಮಾನಗಳನ್ನು ಬಸವಣ್ಣನವರಂತಹ ಮಹಾನ್ ಶರಣರಾದಿಯಾಗಿ ನೀಡಲು ಪ್ರಯತ್ನಿಸಿದ್ದರು. ಈ ಅವಧಿಯಲ್ಲಿ ಅನೇಕ ಮಹಿಳೆಯರು ಭಕ್ತಿಯಿಂದ ಗುಡಿಗೋಪುರಗಳನ್ನು ನಿರ್ಮಿಸಿದರು ಇಲ್ಲವೆ ದಾನವಾಗಿ ಕೊಡುಗೆಯಿತ್ತರು. ಇದಕ್ಕೆ ಉತ್ತಮ ಉದಾಹರಣೆಯಾಗಿ ರಾಣಿ ಶಾಂತಲಾದೇವಿ ಕಾಣಸಿಗುತ್ತಾಳೆ. ಅಕ್ಕಮಹಾದೇವಿಯಂತಹ ಮಹಾನ್ ಶರಣೆಯು ತನ್ನ ವಚನಗಳ ಮೂಲಕ ಒಂದೇ ವಿಶ್ವ, ಒಬ್ಬನೇ ಪುರುಷ, ಪುರುಷ-ಸ್ತ್ರೀಯರೆಲ್ಲ ಸಮಾನರು, ವಿಶ್ವದಲ್ಲಿರುವವರೆಲ್ಲ ಒಂದೇ ಎಂದು ವಿಶ್ವಭ್ರಾತೃತ್ವದ ಪರಿಕಲ್ಪನೆಯನ್ನು ಸೃಷ್ಟಿಸಿದರು. ಚಾಲುಕ್ಯರ ರಾಜಕುಮಾರಿ ಅಕ್ಕದೇವಿ ಎಲ್ಲಾ ಧರ್ಮೀಯರನ್ನು ಸಮಾನವಾಗಿ ಕಾಣುವಂತೆ, ಅದಕ್ಕೆ ನಿದರ್ಶನವಾಗಿ ಅನೇಕ ದೇವಾಲಯಗಳನ್ನು ಕ್ರಿ.ಶ. ೧೦೨೨ರಲ್ಲಿ ಕಟ್ಟಿಸಿದಳು. ಹೊಯ್ಸಳ ದೊರೆ ವಿಷ್ಣುವರ್ಧನನ ಪಟ್ಟದರಸಿ ರಾಣಿ ಶಾಂತಲಾದೇವಿಯು ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಧರ್ಮಗಳನ್ನು ಸಮಾನವಾಗಿ ಕಾಣುತ್ತ, ಸರ್ವಧರ್ಮ ಸಹಿಷ್ಣುತೆಯುಳ್ಳವಳು ಎಂಬ ಖ್ಯಾತಿಗೆ ಕಾರಣಳಾದಳು. ಸ್ತ್ರೀಯರಿಗೂ ಆಸ್ತಿಯಲ್ಲಿ ಪಾಲು ಹೊಂದುವ ಹಕ್ಕು

ಇತ್ತೆಂಬುದನ್ನು ಹೊಯ್ಸಳರ ಕಾಲದ ಕೆಲವು ಶಾಸನಗಳು ಸ್ಪಷ್ಟಪಡಿಸಿವೆ. ಮನೆಯ ಆಸ್ತಿ ಹಂಚುವಿಕೆಯಲ್ಲಿ ಕುಟುಂಬದ ಮಗ ಮತ್ತು ಮಗಳ ಒಪ್ಪಿಗೆ ಪಡೆದ ನಂತರವೇ ವ್ಯವಹರಿಸಬೇಕಾದ ಪದ್ಧತಿಯಿತ್ತು.

ಮೇಲಿನ ಎಲ್ಲಾ ಅಂಶಗಳು ಮಹಿಳಾಪರ ಕಾರ್ಯಗಳು, ಅಧಿಕಾರಗಳು ಇದ್ದವೇನೋ ನಿಜ. ಆದರೆ (ವಿಶೇಷವಾದ) ವೇಶ್ಯಗಾರಿಕೆಯಂತಹ ಅನಿಷ್ಟ ಪದ್ಧತಿ ಜಾರಿಯಲ್ಲಿತ್ತೆನ್ನುವುದು ಗಮನಿಸಬೇಕು. ಈ ವೃತ್ತಿಗಳನ್ನು ದೈವೀಕರಿಸಿದರು. ದೇವರ ಹೆಸರಿನಲ್ಲಿ ಹೆಣ್ಣನ್ನು 'ದೇವದಾಸಿ'ಗಳೆಂದು ಬಿಡುತ್ತಿದ್ದರು. ಇದಕ್ಕೆ ರಾಜಾಧಿಕಾರದ ಪರವಾನಗೆಯಿತ್ತು. ವೇಶ್ಯಗಾರಿಕೆಯನ್ನು ಕೈಗೊಳ್ಳುವವರು ಸರಕಾರದಿಂದ ಪರವಾನಗೆಯನ್ನು ಪಡೆದು, ತೆರಿಗೆಯನ್ನು ಕಟ್ಟಬೇಕಾಗಿತ್ತು. ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಂತೆ ವೇಶ್ಯಾವೃತ್ತಿ ಮಾಡುವವರು ತೆರಿಗೆಯಾಗಿ 'ಸೂಳೆತೆರ' ವನ್ನು ಕಡ್ಡಾಯವಾಗಿ ಕಟ್ಟುತ್ತಿದ್ದರು. ಇಂತಹ ವೃತ್ತಿಯ ಕುಟಂಬಗಳನ್ನು ಪ್ರತ್ಯೇಕವಾದ ಸ್ಥಳಗಳಲ್ಲಿ ಇರಿಸಲಾಗಿತ್ತು. ಅವುಗಳನ್ನು ಸೂಳೆಕೇರಿ ಎಂದು ಕರೆಯುತ್ತಿದ್ದರು.

ವಿವಾಹದ ಸಂದರ್ಭಗಳಲ್ಲಿ ವರದಕ್ಷಿಣೆ ಕೊಡುವುದು ಹಾಗೂ ಪಡೆಯುವುದು ಅಂದಿನ ಶ್ರೀಮಂತ ವರ್ಗಗಳಲ್ಲಿ ಆಚರಣೆಯಲ್ಲಿದ್ದುದು ಸಾಮಾನ್ಯವಾಗಿತ್ತು. ಅನೇಕ ಬೆಲೆಬಾಳುವ ಆಭರಣ, ಒಡವೆ, ವಸ್ತುಗಳು, ಪೀತಾಂಬರ, ಭೂ ಆಸ್ತಿ ಉಡುಗೊರೆಗಳನ್ನು ಕೊಡುತ್ತಿದ್ದರು. ರಾಷ್ಟ್ರಕೂಟರ ಅಮೋಘವರ್ಷ ಹಾಗೂ ಗಂಗಮನೆತನಗಳ ವಿವಾಹಗಳಲ್ಲಿ ಅನೇಕ ಕಂದಾಯ ಗ್ರಾಮ ಹಾಗೂ ಪ್ರದೇಶಗಳನ್ನು ವರೋಪಚಾರವಾಗಿ ನೀಡಿದ್ದನ್ನು ಐತಿಹಾಸಿಕ ದಾಖಲೆಗಳು ಖಚಿತಪಡಿಸಿವೆ. ಇದು ಅಂದಿನ ವ್ಯವಸ್ಥೆಯಲ್ಲಿ ಪ್ರತಿಷ್ಠೆಯ ವಿಷಯವೂ ಆಗಿತ್ತು.

ಅಂದಿನ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಕ್ಷೇತ್ರವಾದ ರಾಜಕೀಯ ಅಧಿಕಾರದಲ್ಲಿ ಮಹಿಳೆಯರ ಪಾತ್ರ ಕೆಲವರ ಆಳ್ವಿಕೆಯಲ್ಲಿ ಮಹತ್ವದ್ದಾಗಿತ್ತು. ಅರಸನ ಆಡಳಿತದಲ್ಲಿ, ಯುದ್ಧ ಸಂದರ್ಭದಲ್ಲಿ ಅನೇಕ ಸಲಹೆ ಸಹಕಾರ ನೀಡುತ್ತ ಮುಖ್ಯ ಸ್ಥಾನವನ್ನೇ ಹೊಂದಿದ್ದರು. ಹೊಯ್ಸಳರ ಆಳ್ವಿಕೆಯಲ್ಲಿ ಬಹುತೇಕ ರಾಣಿಯರು ರಾಜನ ಅಧಿಕಾರದಲ್ಲಿ ಭಾಗಿಯಾಗಿದ್ದರು. ಮೂರನೇ ವೀರಬಲ್ಲಾಳನ ರಾಣಿ ಉಮಾದೇವಿ ಆಡಳಿತದ ಎಲ್ಲಾ ವಿಷಯಗಳಲ್ಲಿ ಹಸ್ತಕ್ಷೇಪ ಮಾಡುತ್ತಿದ್ದಳು. ಅನೇಕ ವಿಷಯಗಳಲ್ಲಿ ಮಾರ್ಗದರ್ಶನವನ್ನು ನೀಡುತ್ತಿದ್ದಳು. ಕೆಲವು ಸಂದರ್ಭಗಳಲ್ಲಿ ರಾಜ್ಯಾಡಳಿತದ ನಿರ್ದೇಶನಗಳನ್ನು ಹೊರಡಿಸುತ್ತಿದ್ದಳೆಂದು ತಿಳಿದು ಬರುತ್ತದೆ. ಅವನ ಅನೇಕ ಯುದ್ಧಗಳಲ್ಲಿ ಜೊತೆಯಾಗಿ ಭಾಗವಹಿಸಿದ್ದುಂಟು. ವೀರಬಲ್ಲಾಳನು ಯುದ್ಧ ನಿಮಿತ್ತ ಹೊರಗೆ ತೆರಳಿದಾಗ, ರಾಜ್ಯಾಡಳಿತವನ್ನು ದ್ವಾರಸಮುದ್ರದ ಅರಮನೆಯಿಂದಲೇ ನಿಯಂತ್ರಿಸಿ ಆಳ್ವಿಕೆ ನಡೆಸುತ್ತಿದ್ದಳು. ಈ ಬಗೆಯ ಪಾತ್ರ ಕೇವಲ ಅರಸು ಮನೆತನಗಳ ಮಹಿಳೆಯರಿಗೆ ಮಾತ್ರ ಸೀಮಿತಗೊಂಡಿರಲಿಲ್ಲ. ಬದಲಿಗೆ ಸಾಮಂತ ರಾಜರುಗಳ ಹೆಂಡತಿಯರು ಕೂಡ ರಾಜ್ಯದ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಸಾಮಾನ್ಯ ವರ್ಗದ ಸ್ತ್ರೀಯರು ಕೂಡ ಆಡಳಿತದ ವ್ಯವಹಾರಗಳಲ್ಲಿ ಪಾಲ್ಗೊಳ್ಳುತ್ತಿದ್ದರೆಂದು ಶಾಸನ, ಗ್ರಂಥಗಳು ಉಲ್ಲೇಖಿಸುತ್ತವೆ.

ಹೀಗೆ ಅಂದಿನ ಮಹಿಳೆಯರು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಕೌಟುಂಬಿಕ ಹಾಗೂ ರಾಜಕೀಯ ವಿಷಯಗಳಲ್ಲಿ ಪಾತ್ರ ನಿರ್ವಹಿಸಿರುವುದು ತಿಳಿದುಬರುತ್ತದೆ. ಇಲ್ಲಿ ಅವಳ ಇರುವಿಕೆಯ ರಾಜಕಾರಣವನ್ನು ಹೊರತುಪಡಿಸಿ ಉಳಿದೆಲ್ಲ ಕ್ಷೇತ್ರಗಳಲ್ಲಿ ಸ್ವಲ್ಪಮಟ್ಟಿಗೆ ಸಮಾಧಾನಕರವಾಗಿತ್ತೆಂದು ಪರಿಗಣಿಸಬಹುದು. ವಾಸ್ತವವಾಗಿ ನೋಡಿದಾಗ ಎಲ್ಲ ಕ್ಷೇತ್ರಗಳಲ್ಲಿ ಅವಳನ್ನು ದ್ವಿತೀಯ ಸ್ಥಾನದಲ್ಲಿರಿಸಿ ಅಥವಾ ತಾತ್ಕಾಲಿಕವಾಗಿ ಇರಿಸಿರುವುದನ್ನು ಕಾಣಬಹುದು. ಯಾವುದೇ ಫಲವಿರದ, ತೊಂದರೆಯುಂಟು ಮಾಡದ, ಅಂದರೆ ಪುರುಷ ಸ್ಥಾಪಿತ ಮೌಲ್ಯಕ್ಕೆ ಧಕ್ಕೆ ಬಾರದಂತೆ, ಚ್ಯುತಿಯಾಗದಂತೆ, ಅವನ ಅಧಿಕಾರವನ್ನು ನೇರವಾಗಿ ಪ್ರಶ್ನಿಸಲಾರದಂತೆ ಸ್ಥಾನಗಳನ್ನು ಕಲ್ಪಿಸಲಾಗಿದೆ. ಸಮಾಜದಲ್ಲಿ ವಿಧಿಸಿದ ಕಟ್ಟುಪಾಡುಗಳು ಅವಳನ್ನು ಅಧೀನಳನ್ನಾಗಿಸಿ ಅಧಿಕಾರ ಕೇಂದ್ರದ ನೇರ ಹೊಣೆಗಾರಿಕೆಯನ್ನು ನೀಡುವಲ್ಲಿ ಸೋತಿದೆ. ರಾಜ್ಯದ ಅಧಿಕಾರ ರಾಜನಿಗೆ-ಪುರುಷನಿಗೇ ಎಂಬಂತೆ ದೈವೀಕರಣದೊಂದಿದೆ ಮೀಸಲಿರಿಸಿದೆ. ಸ್ತ್ರೀಯು ಅವನಿಗೆ ಅನುರಾಗಿನಿಯಾಗಿ ಸಹಕರಿಸುವಂತೆ, ಆಶ್ರಯದಲ್ಲಿಯೇ ಇರುವಂತೆ, ಪುರುಷನಿಗೆ ಅಗತ್ಯವಾದ ನೆಲೆಗಳನ್ನು ಸೃಷ್ಟಿಸಲಾಗಿದೆ. ಅವಳು ಎಂದೂ ಅವನಿಗೆ ಪೈಪೋಟಿಯಾಗದಂತೆ, ಸ್ಪರ್ಧೆಯೊಡ್ಡದಂತೆ ತಡೆಗೋಡೆಯನ್ನು ನಿರ್ಮಿಸಲಾಗಿದೆ. ಎದುರಾಗಿ ನಿಲ್ಲಿಸುವ ಬದಲು ಅವಳನ್ನು ಪಕ್ಕಕ್ಕೆ ಕೂರಿಸಿಕೊಳ್ಳಲಾಗಿರುವ ಸಂಕೇತದ ಉದ್ದೇಶವು ಸ್ಪಷ್ಟವಾಗಿದೆ.

ಅಧಿಕವಾಗಿ ಅರಸುಮನೆತನಗಳ, ಉನ್ನತವರ್ಗದ, ಪ್ರತಿಷ್ಠಿತ ವರ್ಗದ ಮಹಿಳೆಯರು ಮಾತ್ರ ಅವಕಾಶಗಳನ್ನು, ಸೌಲಭ್ಯಗಳನ್ನು ಅನುಭೋಗಿಸಿದ್ದಾರೆ. ಅವರಿಗೆ ನೀಡಿರಿವುವಾದರೂ ಎಂಥವು? ಕಲೆ, ಸಾಹಿತ್ಯ, ಸಂಗೀತ, ನೃತ್ಯ ಮತ್ತು ಶಿಲ್ಪ ಇತ್ಯಾದಿ ಕ್ಷೇತ್ರಗಳಲ್ಲಿ ಮಾತ್ರ ತಮ್ಮಲ್ಲಿರುವ ಪ್ರತಿಭೆಯನ್ನು, ಸಾಮರ್ಥ್ಯವನ್ನು ತೋರಿದ್ದಾರೆ. ಈ ಕ್ಷೇತ್ರಗಳೆಲ್ಲ ರಾಜಾಶ್ರಯದಲ್ಲಿರುವಂತಹವು. ರಾಜನ ಪ್ರೋತ್ಸಾಹವಿಲ್ಲದೆ, ಧನಸಹಾಯವಿಲ್ಲದೆ ಇವ್ಯಾವೂ ಉಳಿಯಲಾರವು. ಇವೆಲ್ಲಾ ಅವನ ಭೋಗಕ್ಕೆ, ಮೋಜಿಗೆ, ಪ್ರತಿಷ್ಠೆಗೆ ಮೀಸಲಿರಿಸಿದ ಕ್ಷೇತ್ರಗಳು. ಇವೆಂದೂ ಜನಸಾಮಾನ್ಯರಿಗೆ ಮಹಿಳೆಯರಿಗೆ ಉಪಕಾರಿಯಾದಂತೆ ತೋರುತ್ತಿಲ್ಲ. ಬಹುಪತ್ನಿತ್ವವನ್ನು ಆಚರಿಸುವುದರ ಮೂಲಕ ಅವಳನ್ನು ಇನ್ನಷ್ಟು ಆಶ್ರಯದಿಂದಲೇ ಬದುಕುವಂತೆ ಮಾಡುತ್ತದೆ.

ಈ ಎಲ್ಲ ಅವಕಾಶಗಳು ಕೇವಲ ಆರ್ಥಿಕ ಆಶ್ರಯ ವಿಚಾರಗಳೇ ಹೊರತು ಪ್ರಧಾನ ವಾಹಿನಿಯಲ್ಲಿ ಅಧಿಕಾರ ಕೇಂದ್ರದಲ್ಲಿ ನೇರವಾಗಿ ಕೂರಿಸುವಂತಹವಲ್ಲ. ಇದನ್ನೇ ಮಹಿಳಾವಾದ ಪ್ರಶ್ನಿಸುವುದು. ಉಳಿದೆಲ್ಲ ಕ್ಷೇತ್ರಗಳಿಗಿಂತ ಪ್ರಮುಖವಾದದ್ದು ಅಧಿಕಾರ ಕ್ಷೇತ್ರ. ಅಲ್ಲಿ ಅವಳ ಪಾತ್ರವೇನು? ಪಾತ್ರ ಎಂಥಹದು? ಎಂಬೀ ಪ್ರಶ್ನೆಗಳನ್ನು ಹಾಕುತ್ತಾ ಅಧಿಕಾರ ಕೇಂದ್ರದ ಬುಡವನ್ನೇ ಅಲುಗಾಡಿಸಲು ಹೊರಟಿರುವುದೇ ಮಹಿಳಾ ಹೋರಾಟಗಳ ತಥ್ಯ. ಇದನ್ನೇ ಕೇಂದ್ರವಾಗಿಟ್ಟುಕೊಂಡು ಮಹಿಳಾ ಅಧ್ಯಯನಗಳು ಚರ್ಚೆಯನ್ನು ಆರಂಭಿಸಿವೆ. ವಿಮರ್ಶೆಗಳು, ವಿಶ್ಲೇಷಣೆಗಳು ನಡೆಯುತ್ತಿವೆ. ಈ ಅಂಶಗಳೇ ಈ ಅಧ್ಯಯನದ ಕೇಂದ್ರ ಬಿಂದುವಾಗಿವೆ, ವಸ್ತುವಾಗಿವೆ.

ಆಧುನಿಕಪೂರ್ವ ಭಾರತದಲ್ಲಿ ವರ್ಗ, ವರ್ಣ ಹಾಗೂ ಕುಟುಂಬ ಹಿತಾಸಕ್ತಿಯ ಹಿನ್ನೆಲೆಯಲ್ಲಿ ದೊರೆತ ಅವಕಾಶಗಳನ್ನು ಮಹಿಳೆ ಬಳಸಿಕೊಂಡಿರುವುದನ್ನು ಅಥವಾ ವಹಿಸಿದ ಪಾತ್ರಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಕೆಲವು ಸಂದರ್ಭಗಳಲ್ಲಿ ನೇರವಾಗಿ ಹೋರಾಟದಲ್ಲಿ ಭಾಗಿಯಾಗುವ ಮಹಿಳೆಯರು ಇದ್ದರು. ಪರೋಕ್ಷವಾಗಿ ಯುದ್ಧದ ಶಿಬಿರಗಳಿಗೆ ಹೋಗಿಬರುವುದು, ಗಾಯಾಳುಗಳಿಗೆ ಶುಶ್ರೂಷೆ; ತಮ್ಮ ಗಂಡಂದಿರಿಗೆ, ಮಕ್ಕಳಿಗೆ ಯುದ್ಧಕ್ಕೆ ಅಣಿಯಾಗಲು ನೈತಿಕ ಧೈರ್ಯವನ್ನು ತುಂಬುವ ಕೆಲಸ ಮಾಡುತ್ತಿದ್ದರು.

೨. ಅರಸೊತ್ತಿಗೆಯಲ್ಲಿನ ಸಂಪ್ರದಾಯಗಳಂತೆ ರಾಜನೊಂದಿಗೆ ಪಟ್ಟಾಭಿಷೇಕ ಸಮಯದಲ್ಲಿ ಪಟ್ಟದರಸಿಯಾಗಿ ಮಹಿಳೆಯನ್ನು ಕೂರಿಸುತ್ತಿದ್ದುದು ಅವಳಿಗೆ ನೀಡಿದ ಅವಕಾಶವಾಗಿತ್ತು. ಅನೇಕ ರಾಣಿಯರಿದ್ದರೂ ಒಬ್ಬರಿಗೆ ಮಾತ್ರ ಈ ಅವಕಾಶ ದೊರೆಯುತ್ತಿತ್ತು.

೩. ಮಹಿಳೆಗೆ ಪಟ್ಟದರಸಿಯ ಸ್ಥಾನದ ಜೊತೆಗೆ ತನ್ನ ರಾಜನ ಸಾಮಂತರ ಪತ್ನಿಯ ಮೇಲೆ ಹಿಡಿತವನ್ನು ಹೊಂದಿದ್ದಳು. ಹೀಗಾಗಿ ಅವಳಿಗೆ ಸಾಮಾಜಿಕವಾಗಿ ಅತ್ಯುನ್ನತ ಸ್ಥಾನವು ಕಲ್ಪಿತವಾಗಿತ್ತು.



೪. ಕೆಲವು ಸಂದರ್ಭಗಳಲ್ಲಿ ಕೆಳವರ್ಗದ ಮಹಿಳೆಯನ್ನು ಅರಸನು ವರಿಸಿದರೆ, ವಿವಾಹವಾದರೆ ಹೆಸರನ್ನು ಬದಲಾಯಿಸುವ ಸಾಧ್ಯತೆಯಿತ್ತು. ಇದರಿಂದ ಅವಳಿಗೆ ಅಂಟಿರುವ ಕುಲಹೀನಳು ಎಂಬುದನ್ನು ಅಳಿಸಿ ಆ ಮೂಲಕ ತನ್ನ ವರ್ಗದ ಮತ್ತು ಜಾತಿಯ ಗುರುತನ್ನು ಕಳೆದುಕೊಳ್ಳುವುದಾಗಿತ್ತು.



೫. ಕೆಲವೊಂದು ಸನ್ನಿವೇಶಗಳಲ್ಲಿ ರಾಜನು ಇಲ್ಲದಾಗ ಮಹಾರಾಣಿಯೇ ರಾಜ್ಯದ ಮೇಲ್ವಿಚಾರಣೆಯನ್ನು ನೋಡುವ ಸಾಧ್ಯತೆಗಳಿದ್ದವು. ರಾಜನು ರಾಜ್ಯದಲ್ಲಿ ಇಲ್ಲದೇ ಹೋದಾಗ, ವಂಶಪಾರಂಪರ್ಯವಾಗಿ ಪಟ್ಟದ ಅಧಿಕಾರಿಯು ಕಾರಣಾಂತರಗಳಿಂದ ರಾಜ್ಯವನ್ನು ತ್ಯಜಿಸಬೇಕಾಗಿ ಬಂದಾಗ, ಮಗ (ಯುವರಾಜ) ಅಪ್ರಾಪ್ತ ವಯಸ್ಕನಾಗಿದ್ದಲ್ಲಿ ರಾಣಿಯು ಸಂಪೂರ್ಣ ಅಧಿಕಾರವನ್ನು ಹೊಂದಿರುತ್ತಿದ್ದಳು. ರಾಜನು ಕಾಡಿಗೆ ಹೋದಾಗ ಅಥವಾ ದೀಕ್ಷೆಯನ್ನು ಸ್ವೀಕರಿಸಿದಾಗ ಅವಳು ಪೂರ್ಣ ಪ್ರಮಾಣದ ರಾಜಕಾರಣವನ್ನು ಚಲಾಯಿಸುತ್ತಿದ್ದಳು. ಏಕೆಂದರೆ ಇಂತಹ ಸಂದರ್ಭಗಳಲ್ಲಿ ರಾಣಿಯು ರಾಜನೊಂದಿಗೆ ದೀಕ್ಷೆಯನ್ನು ಅನುಭವಿಸಬೇಕೆಂಬ ಕಟ್ಟುನಿಟ್ಟಿನ ಪದ್ಧತಿಯಿರಲಿಲ್ಲ.

೬. ಕೆಲವೊಂದು ಸಂದರ್ಭಗಳಲ್ಲಿ ಪಟ್ಟದ ರಾಣಿಯ ಹುದ್ದೆಯನ್ನು ಎರಡನೆಯ ರಾಣಿಗೂ ಕೊಡುವ ಸಾಧ್ಯತೆಗಳಿದ್ದವು. ಇದನ್ನು ಅರ್ಹತೆಯ ತಳಹದಿಯ ಮೇಲೆ ಆಯ್ಕೆ ಮಾಡುತ್ತಿದ್ದುದುಂಟು. ಎರಡನೆಯ ರಾಣಿ ಪ್ರಭಾವಶಾಲಿ ರಾಜಕುಟುಂಬಕ್ಕೆ ಸೇರಿದ್ದಳೆನ್ನುವ ಕಾರಣಕ್ಕೂ ಪಟ್ಟದರಸಿಯಾಗಿ ಆಯ್ಕೆಯಾಗುತ್ತಿದ್ದಳು. ಕೆಲವೊಂದು ಸಲ ಮೊದಲನೇ ರಾಣಿ ಉತ್ತರಾಧಿಕಾರಿಯನ್ನು (ಮಗನನ್ನು) ಕೊಡುವಲ್ಲಿ ವಿಫಲಳಾಗಿದ್ದರೆ ಅಥವಾ ಅವಳಲ್ಲಿ ಏನಾದರೂ ನ್ಯೂನತೆಗಳಿದ್ದಲ್ಲಿ ಎರಡನೇ ರಾಣಿಗೆ ಅಧಿಕಾರದ ಅವಕಾಶ ನೀಡಲಾಗುತ್ತಿತ್ತು.

೭. ಹೀಗೆ ರಾಜನ ಪಟ್ಟದರಸಿಯಾಗುವ ಮೂಲಕ ಅವಳು ರಾಜ್ಯದ ಅರ್ಧ ಸಿಂಹಾಸನವನ್ನು ಅಲಂಕರಿಸಿ, ಜನಮನ್ನಣೆಯನ್ನು ಪಡೆಯುತ್ತಿದ್ದಳು.

೮. ಜನರಿಂದ ಮಾನ್ಯಳಾದ ಅವಳು ಪೂಜ್ಯೆಯೂ ಆಗಿರುತ್ತಿದ್ದಳು.

೯. ವಿವಿಧ ಮತದ ರಾಣಿಯರಿದ್ದಾಗ ಹಿರಿಯ ರಾಣಿಯು ತನಗಿರುವ ಅವಕಾಶದಿಂದಾಗಿ ತನ್ನ ಹಿರಿಯರಸಿ ಪಟ್ಟದ ಹಕ್ಕನ್ನು ಸ್ಥಾಪಿಸಲು ತಿಳಿಸುತ್ತಿದ್ದಳು.

೧೦. ಪಟ್ಟದರಸಿಯು ಮಗನಿಗೆ (ಪ್ರಾಪ್ತನಾದಾಗ) ರಾಜ್ಯವನ್ನು ವರ್ಗಾಯಿಸುವ ಮೂಲಕ ಅಂತಃಪುರದಲ್ಲಿ ಮತ್ತು ಸಾರ್ವಜನಿಕವಾಗಿ ವಿಶೇಷ ಸ್ಥಾನವನ್ನು ಕಲ್ಪಿಸಿಕೊಳ್ಳುತ್ತಿದ್ದಳು.

೧೧. ಒಟ್ಟಾರೆಯಾಗಿ ಅವಳು ಸಕಲಕಲಾ ಪ್ರೌಢಿಮೆಯಿಂದ ರಾಜಕಾರಣ, ಸಂಗೀತ, ವಿದ್ಯಾ, ಸೌಂದರ್ಯ, ವಂಶಗಳಿಂದ ತಕ್ಕಮಟ್ಟಿನ ಪರಿಣತಿಯನ್ನು ಹೊಂದಿರುತ್ತಿದ್ದಳು.

## ಆಧುನಿಕ ಸಂದರ್ಭದಲ್ಲಿ ಮಹಿಳಾ ರಾಜಕಾರಣ

### ಅ. ಮುಂದುವರೆದ ವರ್ಗ, ಜಾತಿ, ವರ್ಣ ಮತ್ತು ಕುಟುಂಬ ಹಿತಾಸಕ್ತಿಯ ಅವಕಾಶಗಳು

ಆಧುನಿಕ ಭಾರತದ ಸಾಮಾಜಿಕ ಪರಿವರ್ತನೆ, ಸುಧಾರಣೆ ಪ್ರಕ್ರಿಯೆ (ಕಾಳಜಿ) ಏಕಪ್ರಕಾರವಾಗಿರಲಿಲ್ಲ. ಮಹಿಳಾ ಸಂದರ್ಭದಲ್ಲಿ ಏಳು ಬೀಳುಗಳೊಂದಿಗೆ, ಪರವಿರೋಧಿಗಳ ನೆಲೆಯಲ್ಲಿ ಹತ್ತೊಂಭತ್ತನೆ ಶತಮಾನದ ಸಮಾಜ ಸುಧಾರಕರು ಸಾಮಾಜಿಕ ಬದಲಾವಣೆಯ ಬೆಳಕನ್ನು ಹೊತ್ತಿಸಿದರು. ಭಾರತೀಯ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿದ್ದ, ವೈಚಾರಿಕವಾಗಿ ಅಪಕ್ವವಾದ ಅಮಾನವೀಯ ಪದ್ಧತಿಗಳಾದ ಜಾತಿಪದ್ಧತಿ, ಧರ್ಮಾಂಧತೆ, ಅಜ್ಞಾನ, ಅನಕ್ಷರತೆ, ಸ್ತ್ರೀ ಶೋಷಕ ಆಚರಣೆಗಳಾದ ಸತಿ ಹೋಗುವುದು, ಬಾಲ್ಯವಿವಾಹ, ದೇವದಾಸಿ ಪದ್ಧತಿ ... ಇತ್ಯಾದಿಗಳನ್ನು ಕಿತ್ತುಹಾಕುವುದು ಅವಶ್ಯವಾಗಿತ್ತು. ಈ ಎಲ್ಲ ಸಾಮಾಜಿಕ ಚಳುವಳಿಗಳು

ಹೆಚ್ಚು ಕಡಿಮೆ ವಸಾಹತುಶಾಹಿ ವಿರೋಧಿ ನೆಲೆಯಲ್ಲಿಯೇ (ಪುರುಷ ಪ್ರೇರಿತವಾದ) ರೂಪುಗೊಂಡಂತಹವು. ಅಂದರೆ ಪುರುಷನ-ಸುಧಾರಣಾವಾದಿಗಳ ನಾಯಕತ್ವದಲ್ಲಿ ಮಹಿಳೆಯರು ಪೋಷಕ ಪಾತ್ರವಾಗಿ ಅನೇಕ ಚಳುವಳಿಗಳಲ್ಲಿ ಭಾಗವಹಿಸಿದ್ದರು. ೧೯ನೆಯ ಶತಮಾನದಿಂದೀಚೆಗಷ್ಟೇ ಭಾರತದ ಮಹಿಳೆಯ ಬಗೆಗಿನ ಚಾರಿತ್ರಿಕ ಸಂಗತಿಗಳ ದಾಖಲೆಗಳು ದೊರೆತಿರುವುದು.

ಆಧುನಿಕಪೂರ್ವ ಭಾರತದಲ್ಲಿ ವರ್ಗ, ವರ್ಣ ಹಾಗೂ ಕುಟುಂಬ ಹಿತಾಸಕ್ತಿಯ ಹಿನ್ನೆಲೆಯಲ್ಲಿ ದೊರೆತ ಅವಕಾಶಗಳ ಮುಂದುವರಿಕೆಯಾಗಿಯೇ ಪ್ರಸ್ತುತ ಆಧುನಿಕ ಭಾರತದ ರಾಜಕಾರಣ ಸಂದರ್ಭ. ಕೌಟುಂಬಿಕ ವರ್ಚಸ್ಸು, ಪ್ರಭಾವಿ ಹಿನ್ನೆಲೆಗಳು ಹಾಗೂ ಸ್ವಸಾಮರ್ಥ್ಯಗಳ ಹಿನ್ನೆಲೆಯಲ್ಲಿ ಮಹಿಳೆಯರು ಉನ್ನತ ಮಟ್ಟದ ಸಂಸ್ಥೆಗಳಲ್ಲಿ ಅಧಿಕಾರ ಪ್ರಾತಿನಿಧ್ಯದಂತಹ ಅವಕಾಶಗಳನ್ನು ಹೊಂದಿದಂತಹ ದಾಖಲೆಗಳನ್ನು ಚರಿತ್ರೆಯ ಪುಟಗಳಲ್ಲಿ ಕಂಡುಕೊಂಡಿದ್ದೇವೆ. ೧೯ನೇ ಶತಮಾನದಲ್ಲಿ ಮಹಿಳಾ ಪ್ರಶ್ನೆಗಳು ದೊಡ್ಡ ಪ್ರಮಾಣದಲ್ಲಿ ಕೇಳತೊಡಗಿದ್ದವು.

In the Nineteenth Century, the 'Women question' loomed large. This was not a question of 'What do women want?' but rather 'How can be modernized?' It became the central question in Ninteenth Century  British India became the foreign rulers had focussed their attention on this particular aspect of society (Women Modern India, Geraldine Forbes, 1996, Page No.12).

ಈ ಎಲ್ಲಾ ಸುಧಾರಣಾ ಕಾರ್ಯಕ್ರಮಗಳು ಆಗಿನ ಬ್ರಿಟಿಷ್ ಇಂಡಿಯಾ ಆಸಕ್ತಿಯ ವಿಷಯಗಳು ಹಾಗೂ ಭಾರತದ ಪುರುಷ ಪ್ರಧಾನ ವ್ಯವಸ್ಥೆ ತನ್ನ ಅಗತ್ಯಕ್ಕೆ ತಕ್ಕಂತೆ ಮಹಿಳೆಯನ್ನು ಆಧುನೀಕರಿಸುವ ಪ್ರಕ್ರಿಯೆಗಳಾಗಿದ್ದವು. ಇಂತಹ ಮೇಲಿನ ಘನ ಉದ್ದೇಶದಿಂದಲೇ ಹೊರಟ ಬ್ರಿಟಿಷ್ ಲೇಖಕರು, ಬುದ್ಧಿಜೀವಿಗಳು, ಭಾರತದ ಧರ್ಮಗಳು ಹಾಗೂ ಸಂಸ್ಕೃತಿಯನ್ನು ಮಹಿಳೆಯರ ಕುರಿತು ಇರುವ ನೀತಿ ನಿಯಮಗಳನ್ನು ಕಟುವಾಗಿ ಟೀಕಿಸಹತ್ತಿದರು. ಬ್ರಿಟಿಷರು ನೇರವಾಗಿ ಸಮಾಜದ ನಿಯಮಾವಳಿಗಳಲ್ಲಿ ಮೂಗು ತೂರಿಸುವುದರ ಮೂಲಕ ಅಲ್ಲಿನ ಸಂಬಂಧಗಳ ವಸ್ತುಸ್ಥಿತಿಯನ್ನು ವಿಶ್ಲೇಷಿಸತೊಡಗಿದರು. ಬ್ರಿಟಿಷರಿಗೆ ವಾಣಿಜ್ಯವೇ ಮುಖ್ಯ ಗುರಿಯಾಗಿದ್ದರಿಂದ ಸಮಾಜದ ಮನುಷ್ಯ ಸಂಬಂಧಗಳನ್ನು ನವೀಕರಿಸುವುದು ಅಗತ್ಯವೆನಿಸಿತ್ತು. ಅವರ ಉದ್ದೇಶ ವ್ಯಾಪಕವೇ ಆಗಿತ್ತು.

ಆ ಹೊತ್ತಿಗಾಗಲೇ ಯುರೋಪ್ ರಾಜಕೀಯವಾಗಿ, ಸಾಮಾಜಿಕವಾಗಿ ಹಾಗೂ ವೈಜ್ಞಾನಿಕವಾಗಿ ಅತ್ಯುನ್ನತ ಸಾಧನೆಗಳನ್ನು ಮಾಡಿದ್ದು ಈ ಉಪಖಂಡದ ಮೇಲಿನ ತನ್ನ ಸ್ವಾಮ್ಯ ತಾನು ನೈತಿಕವಾಗಿ ಉಚ್ಛ್ರಾಯ ಸ್ಥಿತಿಯಲ್ಲಿರುವುದರ ಒಂದು ಕುರುಹು ಎಂದೇ ಭಾವಿಸಿತ್ತು. ಹೀಗಾಗಿ ವಸಾಹತಿನ ಪ್ರಜೆಗಳನ್ನು ಆಳುವ ಸೂಕ್ತ ವಿಧಾನಗಳಾವುವು ಎಂದು ತಮ್ಮಲ್ಲಿಯೇ ನಡೆಸುತ್ತಿದ್ದ ಚರ್ಚೆಗಳಲ್ಲಿ ಸ್ತ್ರೀ ಪುರುಷರ ಆದರ್ಶ

ಸಂಬಂಧಗಳನ್ನು ಸಾಧಿಸಬೇಕೆಂಬ ಮಾತು ಮುಖ್ಯವಾಗಿರುತ್ತಿತ್ತು. ಈ ಸಂದರ್ಭದಲ್ಲಿಯೇ ಜೇಮ್ಸ್ ಮಿಲ್ (James Mill) ಬರೆದ 'ಬ್ರಿಟಿಷ್ ಇಂಡಿಯಾ ಚರಿತ್ರೆ' ಒಂದು ಸಮಾಜದ ಅಭಿವೃದ್ಧಿಯನ್ನು ಅಲ್ಲಿನ ಮಹಿಳೆಯರ ಸ್ಥಿತಿಗತಿಗಳನ್ನು ಲಕ್ಷಿಸಿ ಗುರುತಿಸಬಹುದು ಎಂಬ ತರ್ಕದ ಹಿಂದಿನ ಉದ್ದೇಶ, ಭಾರತೀಯ ಸಮಾಜ ನಾಗರೀಕ ಸಮಾಜವಾಗಿರಲಿಲ್ಲ ಎಂಬುದಾಗಿತ್ತು. ಮುಂದುವರೆದ ಸಮಾಜಗಳನ್ನು ವರ್ಣಿಸುತ್ತ ಮಿಲ್ ದುರ್ಬಲ ಲಿಂಗದವರ (ಹೆಂಗಸರ) ಪರಿಸ್ಥಿತಿ ದಿನದಿನಕ್ಕೆ ತಮ್ಮ ಇಚ್ಛೆ ಹಾಗೂ ಅನುಕೂಲತೆಗಳಿಗೆ ತಕ್ಕಸ್ಥಾನಗಳನ್ನು ಗಳಿಸುವಂತಾಗುತ್ತಿದೆ ಎಂದು ಹೇಳಿದ್ದಾರೆ.

ಮನುಸ್ಮೃತಿಯ ಅನುವಾದಕಾರ ಹಾಲ್‌ಹೆಡ್ (Halhed) ನ Code of Gentoo Laws ಹಲವು ಧಾರ್ಮಿಕ ಕೃತಿಗಳನ್ನು, ಪ್ರವಾಸಿಗಳ ಹಾಗೂ ಮಿಶನರಿಗಳ ಕೆಲವು ಬರಹಗಳನ್ನು ಓದಿದ ಮಿಲ್ ಹಿಂದೂಗಳು ತಮ್ಮ ಹೆಂಗಸರನ್ನು ಹೀನಾಯವಾಗಿ ಕಾಣುವ ದುರಭ್ಯಾಸದವರಾಗಿದ್ದಾರೆ. ಹಾಗಾಗಿ ಅವರ ಹೆಂಗಸರ ಸ್ಥಿತಿ ತೀರಾ ಶೋಚನೀಯವಾದುದಾಗಿದೆ ಎಂದು ಸಾರಿಬಿಟ್ಟಿದ್ದ. ಬ್ರಿಟಿಷ್ ಆಡಳಿತವನ್ನು ಕಾಯಿದೆಬದ್ಧಗೊಳಿಸುವ ನಿರಂತರ ಪ್ರಕ್ರಿಯೆಯ ಭಾಗವಾಗಿ (ಉದ್ದೇಶವೂ ಅದೇ) ಸರ್ ರಾಬರ್ಟ್ ರಿಸ್ಲೆಯ 'ಇಂಡಿಯಾದ ಬುದ್ಧಿ ಜೀವಿಗಳಿಗೆ ಬೌದ್ಧಿಕ ಹಾಗೂ ರಾಜಕೀಯ ವಿಷಯಗಳಲ್ಲಿ ಆಸಕ್ತಿ ಇದೆಯೇ ಹೊರತು ಸಮಾಜ ಸುಧಾರಣೆಯ ಬಗ್ಗೆ ಲಕ್ಷ್ಯವೆ ಇಲ್ಲ' ಎಂಬ ವ್ಯಂಗ್ಯಾತ್ಮಕ ಪ್ರಚಾರಕ್ಕೂ ತೊಡಗಿದ್ದ.

ಈ ಮೇಲಿನ ಘಟನೆಗಳ ಸಂದರ್ಭದಲ್ಲಿಯೇ ಮಹಿಳೆಯರ ಸ್ಥಿತಿಗತಿಗಳನ್ನು ಉತ್ತಮಪಡಿಸುವ ಬಗ್ಗೆ ಭಾರತೀಯ ಸುಧಾರಣಾವಾದಿಗಳ ಯುಗ ಆರಂಭವಾಯಿತು. ರಾಜಾರಾಮ್ ಮೋಹನರಾಯ್‌ರ ಹೆಸರು ಸುಧಾರಣಾವಾದಿಗಳ ಪಟ್ಟಿಯಲ್ಲಿ ಮೊದಲಿಗೆ ಬರುತ್ತಿದೆ. ಚರಿತ್ರೆಕಾರರು ಆತನನ್ನು 'ಆಧುನಿಕ ಇಂಡಿಯಾದ ಪಿತಾಮಹ'ನೆಂದೂ 'ಮಹಿಳೆಯರ ಹಕ್ಕುಗಳ ನೇತಾರ'ನೆಂದೂ, ಸ್ತ್ರೀವಾದಿಯೆಂದೂ ಕರೆದಿದ್ದಾರೆ. ಈ ಬಗ್ಗೆ ಭಿನ್ನಾಭಿಪ್ರಾಯಗಳೂ ಇವೆ. ವಾಸ್ತವದ ಬದುಕಿನಲ್ಲಿ ಮಹಿಳೆಯರೊಂದಿಗೆ ಆತನು ಹೊಂದಿದ್ದ ಸಂಬಂಧಗಳು ಮಾತ್ರ ಈ ಆದರ್ಶದಿಂದ ಬಹುದೂರವೆನಿಸುವಂತಹವು. (ಆಧುನಿಕ ಭಾರತದಲ್ಲಿ ಮಹಿಳೆ, ಡಾ. ಎಚ್.ಎಸ್.ಶ್ರೀಮತಿ, ೨೦೦೧, ಪು. ೧೬-೧೭).

ಮಾನವತಾವಾದ (Humanitarianism), ಉಪಯುಕ್ತವಾದ (Utilitariansism), ಸಾಮಾಜಿಕ ಡಾರ್ವಿನ್‌ವಾದ (Social Darvinism) ಮತ್ತು ರಾಷ್ಟ್ರೀಯತಾವಾದಗಳಂತಹ ಪರಿಕಲ್ಪನೆಗಳಿಗೆ ಬ್ರಿಟಿಷ್‌ರು ಚಾಲನೆಕೊಟ್ಟರು. ಭಾರತೀಯರು ಆಮದಾಗಿ ಬಂದ ಈ ಆದರ್ಶದ ಕಲ್ಪನೆಗಳನ್ನು, ಸಂಸ್ಥೆಗಳನ್ನು ತಮ್ಮಲ್ಲಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ನಡಾವಳಿಗಳೊಡನೆ ಹೊಂದಿಸಿಕೊಳ್ಳತೊಡಗಿದ್ದರು. ಈ ಆಮದಿನ ಹೊಸ ಕಲ್ಪನೆಗಳು ಯಾವ ಪ್ರಭಾವಗಳನ್ನು ಬೀರಿದವೆಂಬುದನ್ನು ಇತಿಹಾಸಕಾರ ಬಂಗಾಳದ ಬುದ್ಧಿಜೀವಿಗಳು ರಚತ್ ಕೆರೇ ಅವರು 'ಆಮದಿನ ಸಂಗತಿಗಳನ್ನು ಸ್ವೀಕರಿಸಿದ್ದ ಹಾಗಾದರೂ ಅದು ಆ ಹೊಸ ಕಲ್ಪನೆಗಳನ್ನು ಸಮರ್ಪಕವಾಗಿ ಅರಗಿಸಿಕೊಂಡಿತು. ಈ ಪ್ರಕ್ರಿಯೆಯಲ್ಲಿ ಮೂಡಿದ ಹೊಸ ಕಲ್ಪನೆಯ ಸಂಸ್ಕೃತಿ ಆಮದು

ಸಂಸ್ಕೃತಿಯ ಪೇಲವ ನಕಲಾಗಿಯೇನೂ ಇರಲಿಲ್ಲ. ಬದಲಾಗಿ ನಿಜವಾಗಿಯೂ ಪ್ರಾಮಾಣಿಕವಾದ ಒಂದು ಸಮಗ್ರ ಉತ್ಪನ್ನ' ಎಂದು ವ್ಯಾಖ್ಯಾನಿಸಿದರು. ಲಿಂಗವ್ಯವಸ್ಥೆಯ ಆಯಾಮದ ಸಂಬಂಧಗಳನ್ನು ಪುನರ್‌ವ್ಯಾಖ್ಯಾನಗೊಳಿಸುವಲ್ಲಿ ಈ ವಿದೇಶೀ ಆದರ್ಶಗಳು ಅಲ್ಲಿನ ವಿಶಿಷ್ಟ ಪರಿಕಲ್ಪನೆಗಳು ದಾರಿದೀಪವೆನಿಸಿದ್ದವು.

೧೯ನೇ ಶತಮಾನದ ಕೊನೆಯ ದಶಕದ ವೇಳೆಗೆ ಸುಧಾರಣಾವಾದಿ ಆದರ್ಶ ಸ್ಪಷ್ಟವಾಗಿ ಗೋಚರಿಸಿತ್ತು. ಈ ಆದರ್ಶ ಪರಿಕಲ್ಪನೆ, ಅದರಲ್ಲಿ ಮಹಿಳೆಯರನ್ನು ಕುರಿತಂತೆ ೨೦ನೆಯ ಶತಮಾನದುದ್ದಕ್ಕೂ ಗಟ್ಟಿಯಾಕಾರದ್ದಾಗಿಯೇ ಉಳಿದು ಬಂತು. ಭಾರತೀಯ ಮಹಿಳೆಯರು 'ಅತ್ಯಂತ ಕನಿಕರಕ್ಕೆ ಪಾತ್ರರಾದವರು' ಎಂಬಲ್ಲಿಂದಲೇ ಈ ಆದರ್ಶ ಮೊದಲಾಗುತ್ತಿದ್ದದ್ದು.

೧೮೩೫ ರಲ್ಲಿ ಮಹೇಶ್ ಚಂದ್ರದೇವ, ಅವರ ಭಾಷಣದ ವಸ್ತು 'ಇಂಡಿಯಾದ ಮಹಿಳೆಯರ ಬವಣೆಗಳು' ಎಂಬಲ್ಲಿ 'ಈ ನಮ್ಮ ಹಿಂದೂ ಮಹಿಳೆಯರು ಎಂತಹ ದೈನ್ಯ ಹಾಗೂ ಶೋಚನೀಯ ಪರಿಸ್ಥಿತಿಗಳಲ್ಲಿ ಸಿಲುಕಿ ಬಿದ್ದಿದ್ದಾರೆಂಬುದನ್ನು ಸೂಕ್ಷ್ಮವಾಗಿ ಗಮನಿಸಿದ ಯಾವುದೇ ಸಂವೇದನಾಶೀಲ ಪುರುಷನೂ ಅವರ ಬಗ್ಗೆ ಕನಿಕರಿಸದೇ ಉಳಿಯುವುದು ಸಾಧ್ಯವೇ ಇಲ್ಲ. ಆ ಮಹಿಳೆಯರು ತಮ್ಮ ಗಂಡಂದಿರಲ್ಲಿ ದಯೆ ದಾಕ್ಷಿಣ್ಯಗಳಿಂದ ವರ್ತಿಸುತ್ತಾರೆ, ನಯ ನಾಜೂಕು ಶ್ರದ್ಧೆಗಳಿಂದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ, ವಿಧೇಯರಾಗಿ ಅವರಿಗೆ ಸೇವೆ ಸಲ್ಲಿಸುತ್ತಾರೆ. ಆದರೂ ಗಂಡಂದಿರು ಅವರನ್ನು ಬೈದು ಗದರಿಸುತ್ತಾರೆ. ಎಷ್ಟೋಸಲ ಕಾರಣವಿಲ್ಲದ ಹೊಟ್ಟೆಕಿಚ್ಚು ಮತ್ತು ಅಹಂಕಾರಗಳಿಂದ ಮತ್ತರಾಗಿ ಕ್ರೂರವಾಗಿ ಶಿಕ್ಷಿಸುತ್ತಾರೆ' ಎಂದೆಲ್ಲಾ ಮರುಗುತ್ತಾ ಹೋಗಿದ್ದಾರೆ (ಆಧುನಿಕ ಭಾರತದಲ್ಲಿ ಮಹಿಳೆ, ಡಾ. ಎಚ್.ಎಸ್.ಶ್ರೀಮತಿ, ೨೦೦೧, ಪು. ೨೩).

ಇಂತಹ ಭಾಷಣಗಳೂ, ಬರಹಗಳೂ ಇಡೀ ಶತಮಾನದುದ್ದಕ್ಕೂ ಹರಿದಾಡಿದ್ದರೂ ಇದರ ಪರಿಸ್ಥಿತಿಯ ಬಗ್ಗೆ ಸುಧಾರಣೆಯ ಪರವಾಗಿ ಹೂಡಿದ ವಾದವೆಂದರೆ ಮಾನವತಾವಾದ ಎಂಬುದೊಂದೇ. ಪಾಶ್ಚಾತ್ಯ ಕಲ್ಪನೆಗಳಿಂದಲೆ ಪ್ರೇರಣೆ ಪ್ರಭಾವಗಳನ್ನು ಪಡೆದ ಪುರುಷ ಸುಧಾರಣಾವಾದಿಗಳ ಪಟ್ಟಿಯಲ್ಲಿ ಬಂಗಾಳದ ರಾಜಾರಾಮ್ ಮೋಹನ್‌ರಾಯ್‌ರೊಂದಿಗೆ ಪಂಡಿತ ಈಶ್ವರಚಂದ್ರ ವಿದ್ಯಾಸಾಗರ್, ಸ್ವಾಮಿ ದಯಾನಂದ ಸರಸ್ವತಿಯಂತಹ ಹಲವರು ಪರಂಪರಾಗತ ಹಿಂದೂಶಾಸ್ತ್ರ ಗ್ರಂಥಗಳನ್ನು ಅಧ್ಯಯನ ಮಾಡಿದ ವಿದ್ವಾಂಸರೇ. ಮದ್ರಾಸ್ ಪ್ರಾಂತ್ಯದ ತೆಲುಗು ಭಾಷಿಕ ವೀರೇಶ್‌ಲಿಂಗಂ ಪಂತುಲು, ಮುಂಬೈನ ನ್ಯಾಯಾಧೀಶ ಮಹಾದೇವ ಗೋವಿಂದ ರಾನಡೆ ಮೊದಲಾದವರೆಲ್ಲ ಸ್ವಂತದ ಬದುಕಿನ ಅನುಭವಗಳಲ್ಲಿ ಹಿಂದೂ ಸಮಾಜದಲ್ಲಿ ಮಹಿಳೆಯರ ದುಃಸ್ಥಿತಿಯ ಸ್ವರೂಪವೆಂಥದೆಂಬುದನ್ನು ಬಲ್ಲವರಾಗಿದ್ದಾರೆ.

ಹೀಗೆ ಭಾರತೀಯ ಸಮಾಜದ ಉನ್ನತ ವರ್ಗದ, ಶ್ವೇತ ಕುಟುಂಬದ ವರ್ಚಸ್ಸಿನ ಹಿನ್ನೆಲೆಯಲ್ಲಿ

ಪಾಶ್ಚಿಮಾತ್ಯ ಆದರ್ಶ ಕಲ್ಪನೆಗಳಿಂದ ಪ್ರಭಾವಕ್ಕೊಳಗಾದ ಪುರುಷ ಸುಧಾರಣಾವಾದಿಗಳು ಸ್ತ್ರೀಗೆ ಶಿಕ್ಷಣ ಹಾಗೂ ಅಭಿಪ್ರಾಯಗಳೇ ಮೊದಲ ಹೆಜ್ಜೆಗಳೆಂದು ಗುರುತಿಸಿದರು. ಈ ಸುಧಾರಣಾವಾದಿಗಳ ಪ್ರಯತ್ನದಿಂದಾಗಿ ಅನೇಕ ಪ್ರಭಾವಿ ಕುಟುಂಬದ, ಉನ್ನತ ಮನೆತನಗಳ ಮಹಿಳೆಯರು ಸಾರ್ವಜನಿಕ ಶಿಕ್ಷಣವನ್ನು ಪಡೆಯುವ ಮೂಲಕ ಹೊಸ ಸಾಮಾಜಿಕ ಚಳುವಳಿಯನ್ನು ಹುಟ್ಟುಹಾಕಿದರು. ರಾಂ ಸುಂದರಿದೇವಿ (೧೮೦೯) ಎಂಬ ಬಂಗಾಳಿ ಮಹಿಳೆ ಅಡುಗೆ ಮನೆಯಲ್ಲಿ ಗುಪ್ತವಾಗಿ ಕುಳಿತು ತನ್ನ ಅನುಭವಗಳನ್ನು ಸಮೃದ್ಧ ವಿವರಗಳಲ್ಲಿ ಅಭಿವ್ಯಕ್ತಿಸುತ್ತಿದ್ದರು. ಈಕೆ ಕೊನೆಗೂ ಛಲದಿಂದ ಓದುಬರಹಗಳಲ್ಲಿ ಪರಿಣಿತಿಯನ್ನು ಪಡೆದುಬಿಟ್ಟಳು. ತತ್ಫಲವಾಗಿ ತನ್ನ ಆತ್ಮಕತೆ 'ಅಮರ್‌ಜೀಬನ್' (ನನ್ನ ಜೀವನ) ಎಂಬ ಬಂಗಾಳಿ ಭಾಷೆಯ ಮೊದಲ ಆತ್ಮಚರಿತ್ರೆಯನ್ನು ೧೮೭೬ರಲ್ಲಿ ಬರೆದಳು.

೧೯ನೇ ಶತಮಾನದ ಅಂತ್ಯದವೇಳೆಗೆ ಅನೇಕ ಮಹಿಳೆಯರು ಸುಧಾರಣೆಯ ಪಥದಲ್ಲಿ ಸಾಗತೊಡಗಿದರು. ಅವರ ಬದುಕುವ ಮಾದರಿಗಳಲ್ಲಿ ಬದಲಾವಣೆಗಳು ಬರತೊಡಗಿದವು. ಆದರ್ಶ ಸತಿಯ ಹಿಂದಿನ ಪರಿಕಲ್ಪನೆಯನ್ನು ಹೊಸದಾಗಿ ನಿರ್ವಚಿಸಲಾಯಿತು. ಅವಳು ಕ್ರಿಯಾಶೀಲಳಾಗಬಹುದಾದ ಕ್ಷೇತ್ರಗಳೆಲ್ಲವೂ ವಿಸ್ತಾರಗೊಂಡವು. ಒಟ್ಟಾರೆಯಾಗಿ ಈ ಸಂದರ್ಭದಲ್ಲಿ ಮೂರು ಪ್ರಕ್ರಿಯೆಗಳನ್ನು ಗುರುತಿಸಬಹುದಾಗಿತ್ತು. ಅವೆಂದರೆ ೧. ಮಹಿಳೆಯ ಬದುಕಿನ ವಿವಿಧ ಹಂತಗಳಲ್ಲಿ ತೊಡಗಿಸಿಕೊಳ್ಳಬಹುದಾದ ಕಾರ್ಯಚಟುವಚಟಿಕೆಗಳನ್ನು ಗುರುತಿಸುವುದು. ೨. ಅವರ ಕಾರ್ಯಕ್ಷೇತ್ರವನ್ನು ವಿಸ್ತರಿಸುವುದರಲ್ಲಿ ವ್ಯಕ್ತಿತ್ವದ ಬೆಳವಣಿಗೆಯನ್ನು ಒಪ್ಪುವ ಚಿಂತನೆಗಳಲ್ಲಿ.

ಈ ಶತಮಾನದ ಕೊನೆಯ ವೇಳೆಗೆ ಸಾಕಷ್ಟು ಸಂಖ್ಯೆಯ ಮಹಿಳೆಯರು ವಿದ್ಯಾವಂತರಾಗಿ, ಉತ್ತಮ ಭಾಷಣಕಾರರಾಗಿ, ಚಲನಶೀಲರಾಗಿ, ಸಾರ್ವಜನಿಕ ಚಟುವಟಿಕೆಗಳಲ್ಲಿ ಸಮರ್ಥವಾಗಿ ಭಾಗವಹಿಸುವಂಥವರಾದರು. ಮುಂದೆ ಭಾರತ ಸ್ವಾತಂತ್ರ್ಯ ಹೋರಾಟ ಚಳುವಳಿಗಳ ಸಂದರ್ಭದಲ್ಲಿ ಭಾಗವಹಿಸಿ ಸೇವೆ ಸಲ್ಲಿಸಿದ್ದು ಈ ಪೀಳಿಗೆಯೇ.

ಖ್ಯಾತ ಟ್ಯಾಗೋರ್ ಮನೆತನದ ಸರಳಾದೇವಿ ಚೌಧುರಾಣಿ (೧೮೭೨-೧೯೪೫) ಹೊಸ ಮಹಿಳೆಯು 'ನವಮಹಿಳೆ'ಯ ಒಂದು ಮಾದರಿ ನಿದರ್ಶನವಾಗಿತ್ತು. ಆಕೆಯ ತಾಯಿ ಸ್ವರ್ಣಕುಮಾರಿದೇವಿ ಕಾದಂಬರಿಗಾರ್ತಿಯೂ ಒಂದು ಮಹಿಳಾ ಪತ್ರಿಕೆಯ ಸಂಪಾದಕಿಯೂ ಆಗಿದ್ದಳು. ಮನೆತನದ ಅಪಾರ ಸಂಪತ್ತು, ಪ್ರತಿಷ್ಠೆಗಳಿದ್ದು, ಅಂದಿನ ಪ್ರಧಾನ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದ ಅಸಾಧಾರಣ ಕುಟುಂಬದಲ್ಲಿ ಜನಿಸಿದವಳಾಗಿದ್ದಳು. ಆಗಿನ ಕಾಲದಲ್ಲಿ ಮನೆಯಿಂದ ಹೊರಬಂದು ಮೈಸೂರಿನ ಮಹಾರಾಣಿ ಸ್ಕೂಲಿನಲ್ಲಿ ಅಧ್ಯಾಪಕಿಯಾಗಿಯೂ ಆಗಿದ್ದರು. ಇವರ ಆರಂಭಿಕ ಶಿಕ್ಷಣ, ಮನೆಯಲ್ಲೇ ಖಾಸಗಿ ಅಧ್ಯಾಪಕರಿಂದ ಮೊದಲಾಯಿತು. ನಂತರ ಆಕೆ ಬೆಥೂನ್ ಕಾಲೇಜಿಗೆ ಸೇರಿ ೧೮೯೦ರಲ್ಲಿ ಇಂಗ್ಲಿಶ್ ಆನರ್ಸ್ ಪದವೀಧರೆಯಾದರು. ಎಂ.ಎ. ಪರೀಕ್ಷೆಗೆ ಅಭ್ಯಾಸ ಮಾಡುತ್ತ ಆಕೆ ಫ್ರೆಂಚ್, ಪರ್ಶಿಯನ್ ಮತ್ತು ಸಂಸ್ಕೃತ

ಭಾಷೆಗಳನ್ನು ಕಲಿಯುವುದರ ಜೊತೆಗೆ ಬಿಡುವಿನ ವೇಳೆಯಲ್ಲಿ ಮನೆಯಲ್ಲಿ ಸಂಗೀತ ಹಾಡುಗಳನ್ನು ಬರೆದರು. ತಾಯಿ ನಡೆಸುತ್ತಿದ್ದ ಪತ್ರಿಕೆಗೂ ಬರೆಯುತ್ತಿದ್ದರು.

ಹೈಮತಿ ಸೇನ್ (೧೮೬೬-೧೯೩೨), ಪಂಡಿತ್ ರಮಾಬಾಯಿ (೧೮೫೮-೧೯೨೨) ಮುಂತಾದವರೆಲ್ಲ ಓದು ಕಲಿತು ಆಗಿನ ಕಾಲದಲ್ಲಿದ್ದ ಶಿಕ್ಷಣದ ಬಗೆಗಿನ ಮೂಢನಂಬಿಕೆಯನ್ನು ವಿರೋಧಿಸಿದ್ದರು. ಬಂಗಾಳದಲ್ಲಿ ಶಿಕ್ಷಣದ ಸ್ಥಿತಿಗತಿಗಳನ್ನು ಕುರಿತು ೧೮೩೬ರಲ್ಲಿ ವಿಲಿಯಂ ಆ್ಯಡಂ ಸಿದ್ಧಪಡಿಸಿದ ವರದಿಯಲ್ಲಿ 'ಬಹುತೇಕ ಹಿಂದೂ ಕುಟುಂಬಗಳಲ್ಲಿ ಓದುಬರಹವನ್ನು ಕಲಿತ ಹುಡುಗಿ ಮದುವೆಯಾದ ತಾರುಣ್ಯದಲ್ಲೇ ವಿಧವೆಯಾಗಿ ಬಿಡುತ್ತಾರೆ ಎಂಬ ಒಂದು ಮೂಢನಂಬಿಕೆ ಪ್ರಚಲಿತವಾಗಿದ್ದು, ಇದನ್ನು ಸ್ವತಃ ಹೆಂಗಸರೇ ಗಾಢವಾಗಿ ನಂಬುತ್ತಾರಾದರೆ ಪುರುಷರೂ ಅದನ್ನೇ ಬೆಂಬಲಿಸುತ್ತಾರೆ' ಎಂದು ಬರೆದಿದ್ದಾನೆ. ಹಿಂದೂಗಳಲ್ಲಿ ಮುಸ್ಲಿಂರಲ್ಲಿ ಅಕ್ಷರ ಜ್ಞಾನವು ಹೆಂಗಸರನ್ನು ಕೆಡಿಸಿ ಬಿಡುತ್ತದೆ ಎಂಬ ಭಯವಿದೆ ಎಂದು ಕೂಡ ಆ್ಯಡಂ ಹೇಳುತ್ತಾನೆ (ಡಾ. ಎಚ್.ಎಸ್.ಶ್ರೀಮತಿ ೨೦೦೧, ಪು. ೫೩-೫೪).

ಇವರೊಂದಿಗೆ ವಿದೇಶೀ ಮಹಿಳೆಯರು, ಕ್ರಿಶ್ಚಿಯನ್ ಮಿಶನರಿಗಳು ಸ್ತ್ರೀ ಶಿಕ್ಷಣದ ಕುರಿತು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಭಾರತೀಯ ಪ್ರೌಢ ವಿವಾಹಿತ ಮಹಿಳೆಯರನ್ನು ಶಿಕ್ಷಣ ನೀಡುವ ನೆಪದಲ್ಲಿ ಕ್ರಿಶ್ಚಿಯನ್ ಜಾತಿಗೆ ಪರಿವರ್ತಿಸುವ ಕೆಲಸವನ್ನು ಮಿಶನರಿಗಳು ಮಾಡಿದವಾದರೂ ಪ್ರಯತ್ನಗಳು ಅಷ್ಟೇನೂ ಫಲಕಾರಿಯಾಗಲಿಲ್ಲ. ನಂತರ ಅವರು ಬಾಲಕಿಯರ ಶಾಲೆಗಳನ್ನು ತೆರೆದರು. ಚರ್ಚ್‌ಮಿಶನರಿ ದಕ್ಷಿಣ ಭಾರತದಲ್ಲಿ ಹೆಚ್ಚು ಫಲಪ್ರದವಾಗಿ ಕಂಡುಬಂತು. ಮದ್ರಾಸಿನಲ್ಲಿ ಸ್ತ್ರೀ ಶಿಕ್ಷಣವನ್ನು ಪ್ರಚುರಪಡಿಸಿದ ಸಂಸ್ಥೆ ಥಿಯೋಸಫಿಕಲ್ ಸೊಸೈಟಿಯ ಮುಂದಾಳಾಗಿದ್ದ ಅನಿಬಿಸೆಂಟ್ (೧೮೪೭-೧೯೩೩) ರು ಪ್ರಾಚೀನ ಭಾರತದಲ್ಲಿ ಹಿಂದೂ ಮಹಿಳೆಯರಿಗೆ ಶಿಕ್ಷಣದ ಅವಕಾಶವಿತ್ತು ಎಂದು ಸಮರ್ತಿಸುತ್ತಾ 'ಮಹಿಳಾ ಶಿಕ್ಷಣ' ಎಂಬ ಲೇಖನವೊಂದನ್ನು ಬರೆದರು. ಭಾರತವೇ ತನ್ನ ಮನೆ ಎಂದೂ ನಿರ್ಧರಿಸಿ ಅದಕ್ಕಾಗಿ ಅವಿರತ ಶ್ರಮಿಸಿದರು.

ಈ ಘಟನಾವಳಿಗಳನ್ನು ಅವಲೋಕಿಸಿದಾಗ ಸುಧಾರಣಾ ಕಾರ್ಯಕ್ರಮಗಳೆಲ್ಲವೂ ಮಹಿಳೆಯರಲ್ಲಿ ಸಾಕಷ್ಟು ಪರಿವರ್ತನೆಯನ್ನು ತಂದಿತ್ತರಾದರೂ ಅದು ಕೆಲವೇ ವರ್ಗಗಳ ಹಿತಾಸಕ್ತಿಯನ್ನು ಕಾಪಾಡುವುದಾಗಿತ್ತು ಎಂಬುದು ಸ್ಪಷ್ಟ. ಉತ್ತಮ ಜಾತಿಯ, ಸುಶಿಕ್ಷಿತ ವರ್ಗದ, ಉನ್ನತ ಅಧಿಕಾರದಲ್ಲಿರುವ, ಪ್ರಭಾವಿ ಕುಟುಂಬದ ಅರಸುಮನೆತನಗಳ, ಜಮೀನ್ದಾರಿಗಳ ಹಿನ್ನೆಲೆಯಲ್ಲಿ ಬಂದ ಮಹಿಳೆಯರು  ಶಿಕ್ಷಣ ಪ್ರವೇಶವನ್ನಾದರೂ ಪಡೆದರು. ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಪುರುಷ ಪ್ರಧಾನ ರಾಜಕಾರಣದ ಚಳುವಳಿಗಳಲ್ಲಿ ಈ ಪೀಳಿಗೆಯವರೇ ರಾಷ್ಟ್ರೀಯ ಹೋರಾಟದ ಚಳುವಳಿಗಳಲ್ಲಿ ಸಕ್ರಿಯ ಕಾರ್ಯಕರ್ತರಾಗಿ ಭಾಗವಹಿಸಿದ್ದುದು ಚರಿತ್ರೆಯಲ್ಲಿ ದಾಖಲಾಗಿದೆ. ಆದರೆ ಯಾವ ಬಗೆಯ ಸಂಪರ್ಕಕ್ಕೂ ಬಾರದ ಕೃಷಿ ಕಾರ್ಮಿಕ ವಲಯದಲ್ಲಿ ಹಳ್ಳಿ, ಸಂತೆ ಮಾರುಕಟ್ಟೆಗಳಲ್ಲಿ ಅಥವಾ ಇನ್ನಿತರ ಜನ ಸಾಮಾನ್ಯ ವಲಯಗಳಲ್ಲಿ ದುಡಿದು ಬದುಕು ನಡೆಸುತ್ತಿದ್ದ ಬಹು ವಿಸ್ತಾರವಾದ ಮಹಿಳಾ ಸಮುದಾಯದ ಬಗ್ಗೆ ಯಾವ ಪ್ರಸ್ತಾಪವೂ ಇಲ್ಲ.

### ಆ. ಸುಧಾರಣಾ ಚಳುವಳಿಗಳಲ್ಲಿ ದೊರೆತ ಮಹಿಳಾ ಅವಕಾಶ

ಬ್ರಿಟಿಷರು ಭಾರತದ ಧರ್ಮ, ಸಂಸ್ಕೃತಿ, ಇತಿಹಾಸವನ್ನು ಒಂದೇ ಸಮನೆ ಕಟುವಾಗಿ ನಿಂದಿಸ ತೊಡಗಿದ್ದರು. ಇಲ್ಲಿನ ಜಾತಿ ಪದ್ಧತಿ, ಆಚರಣೆ ಹಾಗೂ ಸಾಮಾಜಿಕ ಅನಿಷ್ಟ ಪದ್ಧತಿಗಳಾದ, ಸ್ತ್ರೀ ಶೋಷಿತ ಆಚರಣೆಗಳಾದ ಬಾಲ್ಯವಿವಾಹ ಸತಿ, ಗೋಷಾ, ದೇವದಾಸಿ ಪದ್ಧತಿ, ಲಿಂಗತಾರತಮ್ಯ ಇತ್ಯಾದಿಗಳನ್ನು ಲಕ್ಷ್ಯ ವಾಗಿಟ್ಟುಕೊಂಡು ಹಿಂದೂ ಪಾರಂಪರಿಕ ಸಮಾಜವನ್ನು ಬ್ರಿಟಿಷ್ ಪ್ರಭುತ್ವ ವಿಕೇಂದ್ರೀಕರಣಗೊಳಿಸಿಬಿಟ್ಟಿತು. ಈಗಾಗಲೆ ಚರ್ಚಿಸಿದಂತೆ, ಮುಂದಿನ ದಿನಗಳಲ್ಲಿ ಬ್ರಿಟಿಷ್ ಆಡಳಿತವನ್ನು ಕಾಯಿದೆ ಬದ್ಧಗೊಳಿಸುವ, ಗಟ್ಟಿಗೊಳಿಸುವ ಉದ್ದೇಶದಿಂದ, ನಿರಂತರ ಪ್ರಕ್ರಿಯೆಯ ಭಾಗವಾಗಿ ಸರ್ ರಾಬರ್ಟ್ ರಿಸ್ಲೆಯು ಇಂಡಿಯಾದ ಬುದ್ಧಿಜೀವಿಗಳಿಗೆ ಬೌದ್ಧಿಕ ಹಾಗೂ ರಾಜಕೀಯ ವಿಷಯಗಳಲ್ಲಿ ಆಸಕ್ತಿ ಇದೆಯೇ ಹೊರತು ಸಮಾಜ ಸುಧಾರಣೆಯ ಬಗ್ಗೆ ಲಕ್ಷ್ಯವೇ ಇಲ್ಲ ಎಂಬ ಪ್ರಸಾರಕ್ಕೆ ತೊಡಗಿದ್ದರೂ ಸುಧಾರಣೆಯಾಗದೇ ಭಾರತದಲ್ಲಿ ಪ್ರಗತಿ ಸಾಧ್ಯವೇ ಇಲ್ಲ ಎಂಬ ನಿರಾಶಾವಾದ ರಿಸ್ಲೆಯದಾಗಿತ್ತು.

ಕಾಲಕ್ರಮೇಣ ಬ್ರಿಟಿಷರ ಆದರ್ಶದ ಪರಿಕಲ್ಪನೆಗಳು, ಅಲ್ಲಿನ ಸಂಸ್ಥೆಗಳು ಭಾರತದಲ್ಲಿ ಪ್ರವೇಶ ಪಡೆದರೆ ಮಾತ್ರ ಇಂಡಿಯಾದ ಹಾದಿಯಲ್ಲೊಂದು ಆಶಾಕಿರಣ ಬೀಳುವುದು ಸಾಧ್ಯವೆಂಬಂತೆ ಪ್ರಸ್ತಾಪಿಸಲಾಗಿತ್ತು. ಎಲ್ಲೋ ಕೆಲವು ಪಾಶ್ಚಿಮಾತ್ಯ ವಿಮರ್ಶಕರು ಭಾರತೀಯ ಸಮಾಜದಲ್ಲಿ ಹೊಸದೊಂದು ತಲೆಮಾರು ಸೃಷ್ಟಿಯಾಗುವ ಸಾಧ್ಯತೆಯಿದೆ ಎಂದು ಕನಸುತ್ತಿದ್ದರು. ಏನೇ ಆಗಲಿ, ಲಿಂಗಸಂಬಂಧಿ ಆಯಾಮದಲ್ಲಿ ಹೊಸ ಆದರ್ಶದ ಕಲ್ಪನೆ, ಮಹಿಳೆಯರನ್ನು ಹೇಗೆ ನಡೆಸಿಕೊಂಡು ಬಾಳಿಸಬೇಕೆಂಬ ಬಗ್ಗೆ ಸುಧಾರಣೆಗಳಂತಹ ಯಾವುದೇ ಸಕಾರಾತ್ಮಕ ಬದಲಾವಣೆಗೂ ಮೊದಲ ಅಗತ್ಯ ಎಂಬುದು ಒಪ್ಪಲೇಬೇಕಾಗಿತ್ತು.

ಹೊಸ ಸಾಮಾಜಿಕ ಬದಲಾವಣೆಗಳಲ್ಲಿ ಮೇಲು ವರ್ಗದ ಮಹಿಳೆಯರ ಬದುಕಿಗೆ (ಪ್ರಾಮುಖ್ಯತೆಯನ್ನು) ಪೂರಕವಾಗಿಯೇ ಇದ್ದವು. 'The Focus of social reform movements reflected the concerns of the upper castes who constituted the bourgeoisie (Kumar, 1993). The issues the movements raised - widows' oppression, purdah, growing gender gap in education - did not affect the majority of Indian Women. The majority of the total female population was involved in agrarian, manufacturing and trading activities, whether as part of household or family based enterprises or as independent workers, producers and traders. (Gender and Politics in India, Nivedita Menon, 1999, P. 5) ಬಹುಸಮಾಜದ ಮಹಿಳೆಯರನ್ನು ಸಾಮಾಜಿಕ ಚಳುವಳಿಗಳಲ್ಲಿ ಭಾಗವಹಿಸುವ ಅವಕಾಶಗಳಾವೂ ಮುಕ್ತವಾಗಿರಲಿಲ್ಲ ಎಂಬುದು ಸೋಜಿಗದ ಸಂಗತಿಯಾಗಿತ್ತು.

ಸಮಾಜ ಸುಧಾರಣೆಯ ಹರಿಕಾರನಾದ ರಾಜಾರಾಮ್ ಮೋಹನರಾಯ್‌ರು ಸಮಾಜದಲ್ಲಿದ್ದ ಸತಿ

ಪದ್ಧತಿಯನ್ನು ಬಲವಾಗಿ ವಿರೋಧಿಸುತ್ತಿದ್ದರು. ಇದೇ ಅವಧಿಯಲ್ಲಿಯೇ ಲಾರ್ಡ್ ವಿಲಿಯಂ ಬೆಂಟಿಂಕನು ೧೮೨೯ರಲ್ಲಿ ಸತಿಪದ್ಧತಿಯನ್ನು ನಿಷೇಧಿಸಿ ಕಾನೂನು ಹೊರಡಿಸಿದ್ದ. ಸತಿ ಹೋಗುವ ಮಹಿಳೆಯರಲ್ಲಿ ಬಹುತೇಕ ಕಲ್ಕತ್ತಾ ನಗರದ ಉನ್ನತವರ್ಗದ ಕುಟುಂಬದವರೇ ಆಗಿದ್ದರು. ಕ್ರಿ.ಶ. ೧೮೮೨ರಲ್ಲಿ ಹಂಟರ್‌ರವರ Indian Education Committe ಭಾರತದಲ್ಲಿನ ಶಿಕ್ಷಣದ ಪ್ರಗತಿಯನ್ನು ಪರಿಶೀಲಿಸಿತು. ಅರ್ಹ ವಯಸ್ಸಿನ ಶೇ. ೯೮ಕ್ಕಿಂತಲೂ ಹೆಚ್ಚಿನ ಹುಡುಗಿಯರು ಶಾಲೆಗಳಿಗೆ ದಾಖಲಾಗಿರಲಿಲ್ಲ ಎಂಬ ಸಂಗತಿಯನ್ನು ಗಂಭೀರವಾಗಿ ಪರಿಗಣಿಸಿದ ಹಂಟರ್ ಕಮಿಶನ್ ವರದಿಯು ಬಾಲಕಿಯರ ಶಾಲೆಗಳಿಗೆ ಹೆಚ್ಚಿನ ಅನುದಾನ ಧಾರಾಳವಾಗಿ ನೀಡಬೇಕೆಂದು, ಹೆಚ್ಚು ವಿದ್ಯಾರ್ಥಿ ವೇತನ ಹಾಗೂ ಬಹುಮಾನಗಳನ್ನು ನೀಡಿ ಅವಕಾಶ ಹೆಚ್ಚಿಸಬೇಕೆಂದು ಹೇಳಿತ್ತು. ಹಂಟರ್ ಕಮಿಶನ್ ವರದಿಯಿಂದ ಮೊದಲುಗೊಂಡು ಶತಮಾನದ ಅಂತ್ಯದ ವೇಳೆಗೆ ವ್ಯಾಪಿಸಿದ ಮಹಿಳೆಯರಿಗೆ ಶಿಕ್ಷಣದಿಂದ ಮೂವರು ಪ್ರಮುಖ ಶಿಕ್ಷಣವೇತ್ತರು ಗುರುತಿಸಲ್ಪಡುವರು ೧. ೧೮೮೯ರಲ್ಲಿ ಮುಂಬೈ ಮತ್ತು ಪೂನಾಗಳಲ್ಲಿ ಶಾರದಾ ಸದನವನ್ನು ಸ್ಥಾಪಿಸಿದ ಪಂಡಿತ ರಮಾಬಾಯಿಯವರು ಸ್ತ್ರೀ ಶಿಕ್ಷಣದ ಧುರೀಣೆಯಲ್ಲದೆ, ಮಹಿಳಾ ಹಕ್ಕುಗಳಿಗಾಗಿ ಹೋರಾಟಕ್ಕಿಳಿದ ಛಲಗಾತಿಯರೆಂದು ಗುರುತಿಸಲ್ಪಡುತ್ತಾರೆ. ಅವಿವಾಹಿತೆಯಾದ ಈಕೆಗೆ (ಆಗ ೧೬ ವರ್ಷ) ಸಂಸ್ಕೃತವನ್ನು ಓದುವಷ್ಟು ವಿದ್ಯಾಭ್ಯಾಸವಾಗಿತ್ತು. ತನ್ನ ಸೋದರರೊಡಗೂಡಿ ದೇಶಾದ್ಯಂತ ಪ್ರವಾಸ ಮಾಡುತ್ತ ಸ್ತ್ರೀ ಸುಧಾರಣೆ ಹಾಗೂ ಸಮಾಜ ಸುಧಾರಣೆಯ ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ನೀಡುತ್ತಿದ್ದಳು.

ವಿಧಿವಶಾತ್ ಈಕೆಯ ಸೋದರ ಕಲ್ಕತ್ತದಲ್ಲಿ ನಿಧನಗೊಂಡ ನಂತರ ಆತನ ಆಪ್ತ ಮಿತ್ರ ಜಾತಿಯಲ್ಲಿ ಶೂದ್ರನಾದ ಬಿಪಿನ್ ಬಿಹಾರಿದಾಸ್ ಮೇಧಾನಿಯನ್ನು ರಮಾ ಮದುವೆಯಾದರು. ಮರುವರ್ಷ ತನ್ನ ೨೩ನೇ ವಯಸ್ಸಿನಲ್ಲಿ ಹೆಣ್ಣು ಮಗುವಿನ ತಾಯಿಯಾದಳು. ದುರದೃಷ್ಟವಶಾತ್ ಮರುವರ್ಷವೇ ಆಕೆಯ ಪತಿ ಅಸುನೀಗಿದರು. ಈ ಸಂಕಷ್ಟಗಳ ನಡುವೆಯೂ ಆಕೆ ಇಂಗ್ಲಿಶ್ ಕಲಿಯಬೇಕೆಂದು ವೈದ್ಯಕೀಯವನ್ನು ಅಭ್ಯಸಿಸಬೇಕೆಂದು ತೀರ್ಮಾನಿಸಿದ್ದಳು. ಅಷ್ಟೊತ್ತಿಗಾಗಲೇ 'ಸ್ತ್ರೀಧರ್ಮ ನೀತಿ' ಎಂಬ ಕೃತಿಯನ್ನು ರಚಿಸಿದ್ದಳು. ಅದರ ಮಾರಾಟದಿಂದ ವಿದ್ಯಾಭ್ಯಾಸ ನಿರ್ವಹಿಸಿದ್ದಳು. ರಮಾಬಾಯಿ ೨೫ ವರ್ಷಗಳಾಗುವಷ್ಟರಲ್ಲಿ ಸಂಬಂಧಿಗಳೆಲ್ಲರನ್ನು ಕರೆದುಕೊಂಡು ದಿಕ್ಕುಕಾಣದೆ ಬ್ಯಾಪ್ಟಿಸಂ (ಕ್ರಿಶ್ಚಿಯನ್ ಧರ್ಮಕ್ಕೆ) ಒಪ್ಪಿಕೊಂಡು ಬಿಟ್ಟಳು. ಒಂದು ವರ್ಷ ಕಳೆಯುವಷ್ಟರಲ್ಲಿ ವಿಧವೆಯರಿಗಾಗಿ ತೆರೆದ ಮುಂಬೈನ ಶಾರದಾ ಸದನ ಎಂಬ ಶಾಲೆಯನ್ನು ಆಕೆಯನ್ನು ಕಟುವಾಗಿ ಟೀಕಿಸಿ ಬರೆದ ಅನೇಕ ಲೇಖನಗಳು ಪತ್ರಿಕೆಯಲ್ಲಿ ಬರತೊಡಗಿದವು. ಕೇಸರಿ ಪತ್ರಿಕೆಯು ವಿಧವೆಯರನ್ನು ಜಾತಿಗೆಡಿಸಿ ಕ್ರಿಶ್ಚಿಯನ್ನರನ್ನಾಗಿಸಲು ಮಾಡುತ್ತಿರುವ ಹುನ್ನಾರ ಎಂದು ಹೇಳಿ ಗುಲ್ಲೆಬ್ಬಿಸಿತ್ತು. (ಡಾ. ಎಚ್.ಎಸ್.ಶ್ರೀಮತಿ, ೨೦೦೧, ಪು.೬೭).

ಕ್ರಿಶ್ಚಿಯನ್ ಧರ್ಮದ ಜೊತೆಗಿನ ಆಕೆಯ ಸಂಬಂಧದಿಂದಾಗಿ ಸ್ತ್ರೀ ಶಿಕ್ಷಣಕ್ಕೆ ವಿಶೇಷವಾಗಿ ದುಡಿಯುವುದರಲ್ಲಿ ಆಕೆ ಅಡ್ಡಿಗಳನ್ನು ಎದುರಿಸಬೇಕಾಯಿತು. ಆಡಳಿತ ಅಧಿಕಾರದಲ್ಲಿ ಕ್ರಿಶ್ಚಿಯನ್ ಜನರೇ

ಇದ್ದು, ದಿನ ಕಳೆದಂತೆ ಈ ಜನರ ಬಗೆಗೆ ಈ ದೇಶದವರಿಗೆ ದ್ವೇಷ ಬೆಳೆಯುತ್ತಿದ್ದ ಸಂದರ್ಭದಲ್ಲಿ ರಮಾಬಾಯಿಯವರು ಕ್ರಿಶ್ಚಿಯನ್ ಜಾತಿಗೆ ಸೇರಿದ್ದರೆಂಬುದು ಯಾರಿಗೂ ಸಹನೆಯಾಗುವ ವಿಷಯವಾಗಿರಲಿಲ್ಲ (ಡಾ. ಎಚ್.ಎಸ್.ಶ್ರೀಮತಿ ೨೦೦೧, ಪು. ೬೯). ಪಶ್ಚಿಮ ಭಾರತದ ಬಹುಪಾಲು ಪ್ರಭಾವಶಾಲಿ ಗಂಡಸರಿಗೆ ಆಕೆಯ ಕೆಲಸವು ಕೋಪವನ್ನು ಉಕ್ಕಿಸುತ್ತಿದ್ದುದು ಸಹಜವೇ. ಹೀಗೆ ರಮಾಬಾಯಿಯವರು ಅಸಾಧಾರಣ ಪ್ರಯತ್ನಗಳಿಂದ ವಿಧವೆಯರನ್ನು ವಿದ್ಯಾವಂತರನ್ನಾಗಿಸಿದ ಮೊದಲ ಭಾರತೀಯ ಮಹಿಳೆ ಎನಿಸಿದ್ದಾಳೆ. ೨. ೧೮೯೩ ರಲ್ಲಿ ಕಲ್ಕತ್ತಾದಲ್ಲಿ (ಈಗಿನ ಕೋಲ್ಕತ್ತಾ) ಮಹಾಕಾಳಿ ಪಾಠಶಾಲೆಯನ್ನು ಆರಂಭಿಸಿದ ಮಾತಾಜಿ ಮಹಾರಾಜಾ ತಪಸ್ವಿನಿ. ಗಂಗೂಬಾಯಿ ದಕ್ಕನ್ ಭಾಗದ ಓರ್ವ ಬ್ರಾಹ್ಮಣ ಮಹಿಳೆ. ಈಕೆ ರಮಾಬಾಯಿ ಶಾಲೆಗಿಂತ ಭಿನ್ನವಾಗಿ ದೇಶಿ ಜನರ ನೆರವಿನಿಂದ 'ಸ್ತ್ರೀ ಶಿಕ್ಷಣದ ಅಭಿವೃದ್ಧಿಯಲ್ಲಿ ಪ್ರಾಮಾಣಿಕ ಭಾರತೀಯ ಪ್ರಯತ್ನ' ಎಂಬ ಶ್ಲಾಘನೆಯಿಂದ ಶಾಲೆ ಪ್ರಾರಂಭಿಸಿದಳು. ಈಕೆಗೆ ಹಿಂದೂ ಸಮಾಜವನ್ನು ಆಂತರಂಗಿಕ ಪ್ರಕ್ರಿಯೆಯಿಂದಲೇ ಪುನರುದ್ಧಾರ ಮಾಡುವುದು ಸಾಧ್ಯ ಎಂಬ ಬಲವಾದ ನಂಬಿಕೆಯುಳ್ಳವರು. ೩. ಧೋಂಡೋ ಕೇಶವ ಕರ್ವೆ ಇವರು ೧೮೯೦ರ ಹೊತ್ತಿಗೆ ಪೂನಾದಲ್ಲಿ ಹಲವಾರು ಮಹಿಳಾ ಶಾಲೆಗಳನ್ನು ತೆರೆದಿದ್ದರು. ಬುಕಿಂಗ್ ಬ್ಯಾಕ್ ಎಂಬ ತಮ್ಮ ಆತ್ಮಕಥೆಯಲ್ಲಿ ಕರ್ವೆ ತಮ್ಮ ಸ್ವಂತ ಅನುಭವಗಳ ಕಾರಣಗಳಿಗಾಗಿ ತಾವು ೧೮೯೬ ರಲ್ಲಿ ವಿಧವೆಯರಿಗಾಗಿ ಶಾಲೆಯನ್ನು ತೆರೆದೆನೆಂದು ಹೇಳಿಕೊಂಡಿದ್ದಾರೆ. ರಮಾಬಾಯಿಯ ಪ್ರಥಮ ವಿದ್ಯಾರ್ಥಿನಿಯಾಗಿದ್ದ ಗೋರೂಬಾಯಿ (ವಿವಾಹದ ನಂತರ ಆನಂದಿಬಾಯಿ) ಜೋಷಿ ಎಂಬ ಬಾಲ ವಿಧವೆಯನ್ನು ಕರ್ವೆ ತಮ್ಮ ಎರಡನೇ ಹೆಂಡತಿಯಾಗಿ ಮದುವೆಯಾಗಿದ್ದರು. ಈ ಇಬ್ಬರು ಸಾಮಾಜಿಕ ಸುಧಾರಣೆಯಲ್ಲಿ ವಿಧವೆಯರಿಗೆ ಶಿಕ್ಷಣ, ಆಶ್ರಯವನ್ನು ನೀಡಬೇಕೆಂದು ಕನಸು ಕಂಡವರು. ನಿಜಜೀವನದಲ್ಲಿ ಅನುಭವಿಸಿದ ನೋವು ಅವರನ್ನು ಈ ಕೆಲಸ ಮಾಡುವಂತೆ ಪ್ರೇರೇಪಿಸಿತ್ತು.

ಬಾಲವಿಧವೆಯರಿಗೆ ಮುಖ್ಯವಾಗಿ ಶಿಕ್ಷಣವನ್ನು ನೀಡಿ ಅವರನ್ನು ಆರ್ಥಿಕವಾಗಿ ಸ್ವಾವಲಂಬಿಗಳಾಗುವಂತೆ ಮಾಡುವುದೇ ಹೆಚ್ಚು ಉಚಿತವೆಂಬ ಭಾವನೆಯೇ ಅವರಲ್ಲಿ ಬೆಳೆದಿತ್ತು. ೧೮೯೬ರಲ್ಲಿ ವಿಧವೆಯರಿಗಾಗಿ ತೆರೆದ ಆಶ್ರಮವು ಮುಂದೆ ಶಾಲೆಯಾಗಿ ಅಭಿವೃದ್ಧಿ ಹೊಂದಿತು. ಅವಿವಾಹಿತ ಹುಡುಗಿಯರಿಗಾಗಿ ಮಹಿಳಾ ವಿಶ್ವವಿದ್ಯಾಲಯವನ್ನು ತೆರೆದರು. ಈ ಶಾಲೆಗಳು ಬೆಳೆದು ವಿಸ್ತರಿಸುವುದರಲ್ಲಿ ಆನಂದ ಬಾಯಿಯವರ ವಿಧವೆ ತಂಗಿ ಪಾರ್ವತಿ ಬಾಯಿ ಅಠಾವಲಿಯವರ ಪರಿಶ್ರಮ ಬಹಳವಿತ್ತು. ಕರ್ವೆಯವರ ಶಾಲೆಯಲ್ಲಿ ಓದಿ, ಅಧ್ಯಾಪಕಿಯಾಗಿದ್ದಳು. ಶಾಲೆಯ ಸೂಪರಿಂಟೆಂಡೆಂಟ್ ಆದಳು. ಪಾರ್ವತಿಬಾಯಿ ಸ್ವ ಇಚ್ಛೆಯಿಂದಲೇ ವಿಧವಾ ನಿಯಮಗಳನ್ನು ತಮ್ಮ ಮೇಲೆ ಹಾಕಿಕೊಂಡಿದ್ದಳು. ಆಹಾರದ ನಿರ್ಬಂಧಗಳು ಮೊದಲಾಗಿ ಎಲ್ಲದರಲ್ಲೂ ಕಟ್ಟುನಿಟ್ಟಿನ ಸಂಪ್ರದಾಯಕ್ಕೆ ಬದ್ಧರಾಗಿದ್ದರು. ವಿಧವಾ ಮರು ವಿವಾಹದ ಪ್ರಸ್ತಾಪವನ್ನು ಆಕೆ ಸಾರ್ವಜನಿಕವಾಗಿ ಖಂಡಿಸುತ್ತಿದ್ದಳು. ಆದಾಗ್ಯೂ ಸಾರ್ವಜನಿಕ ಸಭೆಗಳಲ್ಲಿನ ಭಾಷಣಗಳಲ್ಲಿ ಪಾರ್ವತಿಬಾಯಿ ಹೆಣ್ಣೊಬ್ಬಳ ಬದುಕಿನ ಧ್ಯೇಯವೆಂದರೆ ಮದುವೆಯೇ ಎಂದು ಖಂಡಿತಪಡಿಸಿ ಹೇಳುತ್ತಿದ್ದುದು ವಿಚಿತ್ರವಾಗಿತ್ತು.

ಇಷ್ಟೊತ್ತಿಗಾಗಲೇ ಮಹಿಳಾ ವಿಶ್ವವಿದ್ಯಾಲಯ ಹಾಗೂ ಹೀಗೂ ಕುಂಟುತ್ತ ಕೆಲವರ್ಷಗಳು ನಡೆದಿತ್ತು. ೧೯೨೦ ರಲ್ಲಿ ಸರ್ ವಿಠಲ್‌ದಾಸ್ ಥಾಕರ್ಸೆಯವರು ರೂ. ೧೫ ಲಕ್ಷಗಳ ನಿಧಿಯನ್ನು ಸಂಸ್ಥೆಗೆ ನೀಡಿ ವಿಶ್ವವಿದ್ಯಾಲಯಕ್ಕೆ ತಮ್ಮ ತಾಯಿಯವರ ಹೆಸರನ್ನಿಡಬೇಕೆಂದೂ ವಿಶ್ವವಿದ್ಯಾಲಯ ಮತ್ತೆ ಮುಂಬಯಿಗೆ ವರ್ಗಾಯಿಸಬೇಕೆಂದೂ ಕರಾರು ಹಾಕಿದ್ದರು. ಇದರಂತೆ ಮುಂಬೈನಲ್ಲಿ ಶ್ರೀಮತಿ ನಾಥೂಬಾಯಿ ದಾಮೋದರ ಥಾಕರ್ಸೆ ಇಂಡಿಯನ್ ಯುನಿವರ್ಸಿಟಿಯು (SNDT) ಅಸ್ತಿತ್ವಕ್ಕೆ ಬಂತು.

೨೦ನೆಯ ಶತಮಾನದ ಆರಂಭದಲ್ಲಿ (೧೯೦೦-೧೯೨೦ ನಡುವಿನ ಅವಧಿಯಲ್ಲಿ) ಸಮಾಜ ಸುಧಾರಣೆಗಳು ಹಾಗೂ ಶಿಕ್ಷಣ ಪ್ರಯತ್ನಗಳ ಲಾಭವನ್ನು ಪಡಿದಿದ್ದ ಮಹಿಳೆಯರು ನವಮಹಿಳೆಯರೆನಿಸಿದ್ದರು. ಅವರುಗಳಲ್ಲಿ ಬೇಗಂ ರೊಕೆಯಾ ಶೇಖಾವತ್ ಹುಸೇನ್ (೧೮೮೦-೧೯೩೨) ೧೯೦೯ರಲ್ಲಿ ಮುಸ್ಲಿಂ ಹೆಣ್ಣುಮಕ್ಕಳಿಗಾಗಿ ಶಾಲೆಯೊಂದನ್ನು ತೆರೆದರು. ತರುಣರಲ್ಲಿ ವಿಧವೆಯಾದ ರೊಕೆ ಶಾಲೆಯನ್ನು ತೆರೆದಾಗ ಸ್ವತಃ ತಮ್ಮ ಪತಿಯ ಸಂಬಂಧಿಕರಿಂದಲೇ ತೀವ್ರ ವಿರೋಧವನ್ನು ಎದುರಿಸಬೇಕಾಯಿತು. ಮದುವೆಯಾದ ಹೊಸದರಲ್ಲಿ ಪತಿಯ ಪ್ರೋತ್ಸಾಹದಿಂದ ಇಂಗ್ಲಿಶ್‌ನ್ನು ಕಲಿತಿದ್ದ ರೊಕೆ ಮಹಿಳೆಯರ ಪರಿಸ್ಥಿತಿ ಕುರಿತ ಲೇಖನಗಳನ್ನು ಬರೆಯಲಾರಂಭಿಸಿದ್ದಳು. ಮಹಿಳೆಯರು ದಬ್ಬಾಳಿಕೆಗೆ ಒಳಗಾಗಿದ್ದಾರೆಂಬ ಬಗ್ಗೆ ಲೇಖನಗಳು, ಸಣ್ಣ ಕತೆಗಳು ಕಾದಂಬರಿಗಳು -ಹೀಗೆ ಹಲವು ಸಾಹಿತ್ಯ ಪ್ರಕಾರಗಳಲ್ಲಿ ಬರೆದರು. ಅರ್ಧಾಂಗಿ, ಗೃಹ ಹಾಗೂ ಬುರ್ಖಾ ಎಂಬ ತಮ್ಮ ಮೂರು ಪ್ರಬಂಧಗಳಲ್ಲಿ ಪುರುಷರಿಂದಾಗುವ ಶೋಷಣೆಯನ್ನು ತೀವ್ರವಾಗಿ ಖಂಡಿಸಿ ಬರೆದರು. ೧೯೦೫ರಲ್ಲಿ ಬರೆದ 'ಸುಲ್ತಾನಳ ಕನಸು' ಎಂಬ ಕತೆಯಲ್ಲಿ ಮಹಿಳೆಯು ಹೊರಜಗತ್ತಿಗೆ ನುಗ್ಗಿಬರುತ್ತಿರುವಂತೆಯೂ, ಪುರುಷರು ಮನೆಯ ಬಾಗಿಲ ಹಿಂದೆ ಅಡಗಿ ಇಣುಕುತ್ತಿರುವಂತೆಯೂ ಚಿತ್ರಿಸಿದರು. ೧೯೨೯ರಲ್ಲಿ ಸಿದ್ಧಗೊಳಿಸಿದ ಅವರೋಧಬಾಸಿನಿ (ಪತ್ಯೇಕಗೊಂಡವರು) ಎಂಬ ಧಾರವಾಹಿ ವರದಿಯಲ್ಲಿ ಪರದಾ ಪದ್ಧತಿಯನ್ನು ೪೭ ಕಂತುಗಳಲ್ಲಿ ವಿವರವಾಗಿ ದಾಖಲಿಸಿದ್ದಾರೆ.

**Avarodhabasini ('The Secluded ones')**

'Her Satirical writings on female seclusion were meant to inform an audience ignorant of the real tragedy of purdah (her own aunt was killed by a train because she would not cry out for help... (Women in Modern India, Geraldine forbes, 1996, P. 56-57).

ಪರ್ದಾ ಪದ್ಧತಿ ಕುರಿತು ಕುರಾನಿನಲ್ಲಿ ಯಾವ ಆಧಾರವೇ ಇಲ್ಲ ಅಥವಾ ಮುಸ್ಲಿಂ ಷರಿಯತ್ (ಕಾನೂನು)ನಲ್ಲಿ ಇದರ ಪ್ರಸ್ತಾಪವಿಲ್ಲ ಎಂದು ವಿವರಿಸುತ್ತಿದ್ದರು. ಆದರೆ ರೊಕೆಯಾ ಮಾತು ಯಾರಿಗೂ ರುಚಿಸುತ್ತಿರಲಿಲ್ಲವಾದರೂ ಶಾಲೆಯು ಮಾತ್ರ ತಡೆಯಿಲ್ಲದೆ ನಡೆಯುತ್ತಿತ್ತು. ಒಳ್ಳೆಯ ಸಂಸಾರಸ್ಥ ಕುಟುಂಬಗಳಿಂದ ಬಂದ ಮುಸ್ಲಿಂ ಹುಡುಗಿಯರು ಈ ಶಾಲೆಗಳಿಗೆ ಬರುತ್ತಿದ್ದರು. ಆಕೆ ಸ್ತ್ರೀ ಶಿಕ್ಷಣವನ್ನು

ಅಲಕ್ಷಿಸಿದರೆ ಇಸ್ಲಾಂ ಸಂಸ್ಕೃತಿಗೆ ದೊಡ್ಡ ಪೆಟ್ಟು ಬೀಳಲಿದೆ ಎಂದು ಬಿತ್ತರಿಸಿದ್ದಕ್ಕಾಗಿ ಜನ ಗಮನ ನೀಡಿ ಪ್ರತಿಕ್ರಿಯಿಸುತ್ತಿದ್ದರು.

ಬೇಗಂ ರೊಕೆಯರಂತೆ, ಸಿಸ್ಟರ್ ಸುಬ್ಬುಲಕ್ಷ್ಮಿಯವರು (೧೮೮೬-೧೯೬೯)ಮದ್ರಾಸಿನಲ್ಲಿ ಉನ್ನತ ಜಾತಿಯ ಬಾಲವಿಧವೆಯರ ಶಾಲೆಯನ್ನು ತೆರೆದರು. ಇವರು ಕೂಡ ತಾರುಣ್ಯದಲ್ಲಿ ಪತಿಯನ್ನು ಕಳೆದುಕೊಂಡವರು. ತಂದೆಯೊಂದಿಗೆ ಮದ್ರಾಸಿಗೆ ಬಂದ ಸುಬ್ಬಲಕ್ಷ್ಮಿಯವರು ಮನೆಯಲ್ಲಿಯೆ ಇಂಗ್ಲಿಶ್ ಕಲಿತರು. ನಂತರ ಹತ್ತಿರದ ಕಾನ್ವೆಂಟಂ ಶಾಲೆಗೆ ಸೇರಿದರು. ಅಲ್ಲಿನ ಸನ್ಯಾಸಿನಿ (ನನ್)ಗಳ ಕರ್ತವ್ಯ ಪರ್ಯಾಯ ಜಾತಿಗೆ ಮರುಳಾದ ಸುಬ್ಬುಲಕ್ಷ್ಮಿಯವರು ವಿಧವೆಯಾದ ಶಿಕ್ಷಣವನ್ನೇ ಧ್ಯೇಯವಾಗಿ ಸ್ವೀಕರಿಸಿ ಬಾಳನ್ನು ಮುಡುಪಾಗಿಟ್ಟರು. ಕ್ರಿಶ್ಚಿಯನ್‌ಗೆ ಸೇರದಿದ್ದರೂ ತನ್ನ ಧ್ಯೇಯಕ್ಕೆ ಬದ್ಧರಾಗಿ ದುಡಿಯುತ್ತಿರುವ ಜೀವನ ವಿಧಾನವನ್ನು ನೋಡಿ ಜನ ಪ್ರೀತಿಯಿಂದ ಸುಬ್ಬುಲಕ್ಷ್ಮಿ ಎಂದು ಕರೆಯುತ್ತಿದ್ದರು.

ಆರಂಭದ ಶಾಲೆ ತಮ್ಮ ತಂದೆಯ ಮನೆಯಲ್ಲಿ ತೆರೆದರು. ವಿದ್ಯಾರ್ಥಿಯಾಗಿ ಆ ಶಾಲೆಗೆ ಸೇರಿದವರು ೪ ಜನ ಬ್ರಾಹ್ಮಣ ವಿಧವೆಯರು ಮಾತ್ರ. ಅನೇಕ ಶಾಲೆ ಕಾಲೇಜುಗಳಲ್ಲಿ ಅವಿರತವಾಗಿ ವಿಧವೆಯರ ವಿಮೋಚನೆಗಾಗಿ ಶ್ರಮಿಸುತ್ತಿದ್ದರು. ಇವರ ವಿಧವಾ ಶಾಲೆಯು ಸಂಪ್ರದಾಯಸ್ಥ ಹಿಂದೂ ಪದ್ಧತಿಗಳ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿತ್ತು. ಈ ಬಗ್ಗೆ ಅವರಿಗೆ ವಿಪರೀತ ಕೋಪವೂ ಇತ್ತು. ಜಾತಿಯಾಧಾರಿತ ಪದ್ಧತಿಯನ್ನು, ಶಾಲೆಯನ್ನು ಮನಸ್ಸಿನಲ್ಲಿ ವಿರೋಧಿಸುತ್ತಿದ್ದಾಗ ಏನೂ ಮಾಡಲಾಗದ ತಮ್ಮ ಅಸಮಾಧಾನವನ್ನು ಶಮನಗೊಳಿಸಲು ಮೀನುಗಾರಿಕೆಗೆಂದು ಶಾಲೆಯನ್ನು ತೆರೆದರು. ಬಾಲ್ಯವಿವಾಹ ಪದ್ಧತಿಯ ಕೆಡಕುಗಳ ಕುರಿತು ಭಾಷಣಗಳನ್ನು ಮಾಡುತ್ತಿದ್ದರು. ತಮ್ಮ ಗುರಿ ಮುಟ್ಟುವಲ್ಲಿ ಸರಿಯೆನಿಸಿದ, ಸಹಾಯಕವೆನಿಸಿದ ತಾತ್ಕಾಲಿಕ ಕೆಲವು ರಾಜಿಗಳನ್ನು ಅವರು ಮಾಡಿಕೊಳ್ಳಲು ಹಿಂಜರಿಯುತ್ತಿರಲಿಲ್ಲ.

ಸಿಸ್ಟರ್ ಸುಬ್ಬುಲಕ್ಷ್ಮಿಯವರು ಧಾರ್ಮಿಕ ಸುಧಾರಣೆಗಳ ಚಿಂತನೆಯಲ್ಲಿ ಮಹಿಳೆ ಪ್ರಶ್ನೆಯನ್ನು ತುಂಬ ಪ್ರಾಮಾಣಿಕತೆಯಿಂದ ಪರಿಗಣಿಸಿದ ಸುಧಾರಕರಲ್ಲಿ ರಾಮಕೃಷ್ಣ ಪರಮಹಂಸರು, ವಿವೇಕಾನಂದರು ಪ್ರಥಮ ವೃಂದರೆಂದು ನಂಬಿದ್ದರು. ಮೇಲ್ನೋಟಕ್ಕೆ ಆಕೆ ಕ್ಯಾಥೊಲಿಕ್ ಸನ್ಯಾಸಿನಿಯಾದ ಪ್ರಭಾವಕ್ಕೆ ಒಳಗಾದಂತೆ ಕಂಡರೂ ಪ್ರೌಢ ವಯಸ್ಸಿನಲ್ಲಿ ಆಧ್ಯಾತ್ಮಿಕತೆ ಹಾಗೂ ಕ್ರಿಯಾಶೀಲತೆಯ ತತ್ವಗಳನ್ನು ಆಕೆ ವಿಶೇಷವಾಗಿ ಗ್ರಹಿಸಿದ್ದು ಸುಧಾರಿತ ಹಿಂದೂ ಧರ್ಮದಿಂದಲೇ.

ಹೀಗೆ ಸಾಮಾಜಿಕ ಸುಧಾರಣೆಯ ಪ್ರಕ್ರಿಯೆಯಲ್ಲಿ ಭಾರತದ ಉನ್ನತ ಜಾತಿಯ ಸ್ತ್ರೀ, ಪುರುಷರು, ವಿದ್ಯಾವಂತ ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡು ಸುಧಾರಿಸಿದ್ದನ್ನು ಮೇಲಿನ ಎಲ್ಲ ನಿದರ್ಶನಗಳು ಸಾಕ್ಷಿಗೊಳಿಸುತ್ತವೆ.

## ೩. ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಗಳಲ್ಲಿ ಮಹಿಳಾ ಅವಕಾಶಗಳು

ಬ್ರಿಟಿಷ್ ಆಳ್ವಿಕೆಯ ಬಗ್ಗೆ ಅಸಮಾಧಾನಗೊಂಡ ಭಾರತೀಯ ಉನ್ನತ ವರ್ಗಗಳಿಂದ ವ್ಯಾಪಕವಾದ ಆಂದೋಲನಗಳೇ ಜರುಗಿದವು. ಈ ಚಳುವಳಿಗಳೇ ರಾಷ್ಟ್ರೀಯ ಚಳುವಳಿಗಳು. ವಿದೇಶೀ ಪ್ರಭುಗಳನ್ನು ಭಾರತದಿಂದ ಹೊರಗಟ್ಟಬೇಕೆಂಬ ಚಳುವಳಿಯು ಎಲ್ಲ ವರ್ಗ ಹಾಗೂ ಸಮುದಾಯಗಳನ್ನು ಆಕರ್ಷಿಸಿದಂತಹ ಸಂದರ್ಭದಲ್ಲಿ ಶಿಕ್ಷಣ, ಸಮಾಜ ಸುಧಾರಣೆ ಮತ್ತು ಮಹಿಳಾ ಹಕ್ಕುಗಳಂತಹ ವಿಷಯಗಳು ಕೆಲವು ಪ್ರಗತಿಶೀಲ ಮಹಿಳೆಯರ ಆಸಕ್ತಿಗಳಾಗಿದ್ದವೆಂಬುದು ನಿಜವಿತ್ತು. ಏನೇ ಆದರೂ ಅವರೆಲ್ಲರ ಆದರ್ಶಗಳು, ಪರಿಕಲ್ಪನೆಗಳು ಇಲ್ಲೇ ಅರಳತೊಡಗಿದ್ದವು. ರಾಷ್ಟ್ರೀಯ ನಾಯಕರು ಉದ್ದೇಶಪೂರ್ವಕವಾಗಿ ಕೈಚಾಚಿ ಜನರನ್ನು, ಕಾರ್ಮಿಕರನ್ನು, ಮಹಿಳಾ ಸಂಸ್ಥೆಗಳನ್ನು ತಮ್ಮ ಸಂಪರ್ಕಕ್ಕೆ ತೆಗೆದುಕೊಂಡು ತಮ್ಮ ನಿಲುವನ್ನು ಅಪಾರ ಜನಬೆಂಬಲದೊಂದಿಗೆ ತೋರ್ಪಡಿಸುವುದೇ ಅವರ ಉದ್ದೇಶವಾಗಿತ್ತು. ಮಹಿಳೆಯರು ಪುರುಷರ ಈ ಇಬ್ಬಗೆಯ ನೀತಿಯನ್ನು ಅರ್ಥಮಾಡಿಕೊಳ್ಳಹತ್ತಿದ್ದರು. ಬ್ರಿಟಿಷರು ಭಾರತೀಯರನ್ನು ನೋಡುವಂತೆಯೇ ಇಲ್ಲಿನವರು ಮಹಿಳೆಯರನ್ನು ಕಾಣುತ್ತಿದ್ದುದು ಒಂದೇ ದೃಷ್ಟಿಕೋನದಲ್ಲಿತ್ತು ಎಂಬುದನ್ನು ಅರ್ಥಮಾಡಿಕೊಂಡಿದ್ದರು. ಅದಕ್ಕಾಗಿ ಸಂಘಟಿಸಿಕೊಂಡ ಮಹಿಳೆಯರ ಚಟುವಟಿಕೆಗಳನ್ನು, ಸಂಘಗಳನ್ನು ರಾಷ್ಟ್ರೀಯ ಹೋರಾಟದ ಪುರುಷ, ರಾಜಕಾರಣ ಒಡೆದು ಹಾಕಿದ್ದಾಗಿತ್ತು.

Women began to work collectively against Male Supremacy at the beginning of the 20th Century and the analysis they made of their oppression linked patriarchal practices and Imperialism. Thus the wome's movement in India has a history of linking partriarchy with other structures of oppression (Gender and Politics in India, Nivedita Menon, 1999, P. 7-8).

ಇದನ್ನು ಗಾಂಧೀಜಿಯವರ ಪ್ರವೇಶದೊಂದಿಗೆ ಉಂಟಾದ ರಾಷ್ಟ್ರೀಯ ಚಳುವಳಿಯಲ್ಲಿ ಗಮನಿಸಬಹುದು. ಕ್ರಿ.ಶ. ೧೯೦೫ರಲ್ಲಿ ಬಂಗಾಳವನ್ನು ಇಬ್ಭಾಗವಾಗಿಸಿದ ಬ್ರಿಟಿಷ್ ವಿರುದ್ಧ ಪುರುಷ - ಸ್ತ್ರೀ ರೆಲ್ಲರೂ ಒಗ್ಗಟ್ಟಾಗಿ ಪ್ರತಿಭಟಿಸಿದರು. ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿದರು. ಕ್ರಾಂತಿಕಾರಿ ಸಂಸ್ಥೆಗಳನ್ನು ಬೆಂಬಲಿಸುವ ಮಹಿಳೆಯರು ಕೆಲವಡೆ ಸೇರಿಕೊಂಡರು. ಅವರಲ್ಲಿ ನಾನಿ ಬಾಲದೇವಿ (೧೮೮೮ - ೧೯೬೭) ಎಂಬ ವಿಧವೆ ಅಮರೇಂದ್ರನಾಥ್ ಚಟ್ಟೋಪಾಧ್ಯಾಯರ ಯುಗಾಂತರ ಪಕ್ಷಕ್ಕೆ ಸೇರಿ ಬ್ರಿಟಿಷರನ್ನು ಸೋಲಿಸಲು ಪಣತೊಟ್ಟರು. ಕ್ರಾಂತಿಕಾರಿ ಮನೋಭಾವದವರೆಲ್ಲ ಬ್ರಿಟಿಷರ ವಿರುದ್ಧ ಸಂಘಟಿತರಾಗಿ ಹೋರಾಡತೊಡಗಿದ ಸಂದರ್ಭದಲ್ಲಿ ಮಹಿಳೆಯರ ಚಟುವಟಿಕೆಗಳು ಬ್ರಿಟಿಷ್ ಅಧಿಕಾರಿಗಳ ಕಣ್ಣುತಪ್ಪಿಸಿ ನಡೆಯುತ್ತಿದ್ದವು. ಅವರು ಪುರುಷನಿಗೆ ಪ್ರೇರಣೆ ನೀಡಿ ಅವರ ಶಸ್ತ್ರಾಸ್ತ್ರಗಳನ್ನು ಬಚ್ಚಿಡುವುದು, ಕ್ರಾಂತಿಕಾರ ವೀರರಿಗೆ ರಕ್ಷಣೆ, ಆಶ್ರಯ ನೀಡಿವುದು ಬ್ರಿಟಿಷ್ ವಿರೋಧಿ ಚಟುವಟಿಕೆಗಳಿಗೆ ಪುರುಷರನ್ನು ಪ್ರೇರೇಪಿಸುವುದು. ಮುಂತಾದವುಗಳಿಗೆ ಮಹಿಳೆಯರು ಮುಂದಾಗುತ್ತಿದ್ದರು. ಬಂಗಾಳದ ಮಹಿಳೆಯರಂತು ಉಳಿದ ಮಹಿಳಾ ಪ್ರತಿನಿಧಿಗಳಿಗಿಂತ ತುಸು

ಭಿನ್ನವಾಗಿಯೇ ವರ್ತಿಸುತ್ತಿದ್ದರು. INCಯ ಮಹಿಳಾ ಪ್ರತಿನಿಧಿಗಳು ಸ್ವದೇಶಿ ಚಳುವಳಿಗೆ ಸಹಾನುಭೂತಿ ತೋರಿಸುವ ರೀತಿಯಲ್ಲಿ ಅವರಿರಲಿಲ್ಲ. ಈ ಕಲ್ಕತ್ತ ಮಹಿಳೆಯರು ಬೃಹತ್ ರ್‍ಯಾಲಿ, ಮೆರವಣಿಗೆಗಳನ್ನು ನಡೆಸದೆ ಹೆಚ್ಚು ಹೆಚ್ಚು ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಿದ್ದರು. ವಿದೇಶಿ ವಸ್ತುಗಳನ್ನು ಸಾರಾಯಿ ಅಂಗಡಿಗಳನ್ನು ಬಹಿಷ್ಕರಿಸಿ ಅವರ ಅಂಗಡಿಗಳ ಮುಂದೆಯೆ ಧರಣಿ ಕೂಡುತ್ತಿದ್ದರು. ಖಾದಿ ಬಗ್ಗೆ ಪ್ರಚಾರ ಮಾಡಿದರು. ಬೀದಿ ಬೀದಿಗಳಲ್ಲಿ ಮೆರವಣಿಗೆಯು ವಿಭಿನ್ನವಾಗಿತ್ತು. ಅನೇಕ ಗುಪ್ತ ಕ್ರಾಂತಿಕಾರಿಗಳನ್ನು ಅವರ ಚಟುವಟಿಕೆಗಳನ್ನು ರಕ್ಷಿಸಿ, ಆಶ್ರಯ ಕೊಡುತ್ತಿದ್ದರು. ಅಲ್ಲಿನ ಸ್ಥಳೀಯ ನಾಯಕರು ಇದಕ್ಕೆ ಪ್ರೇರಣೆ, ಪ್ರೋತ್ಸಾಹ ನೀಡುತ್ತಿದ್ದರು. ಗಾಂಧೀಜಿಯವರ ಪ್ರಭಾವದ ರೀತಿಯಲ್ಲಿ ಈ ಕ್ರಾಂತಿಕಾರಿ ಚಟುವಟಿಕೆಗಳು ಮಹಿಳಾ ಹೋರಾಟಗಾರರಿಗೆ ಸ್ಫೂರ್ತಿಯನ್ನು, ಪ್ರೋತ್ಸಾಹವನ್ನು ನೀಡುತ್ತಿದ್ದುದು ವಿಶೇಷವಾಗಿತ್ತು.

ಈ ವೇಳೆಯಲ್ಲಿ ಕ್ರಾಂತಿಕಾರಿ ಗುಂಪುಗಳೊಂದಿಗೆ ಸೇರಿಕೊಂಡ ಹಾಗೆಂದು ಗುರುತಿಸಿಕೊಂಡ ಕೆಲವರು ಮಹಿಳೆಯರಲ್ಲಿ ಬಿಸಿರಕ್ತದ ಹದಿಹರೆಯದ ವಿದ್ಯಾರ್ಥಿನಿಯರು. ಇವರುಗಳೆಲ್ಲ ಬಹುತೇಕ ಉನ್ನತ ಮನೆತನದ ಹುಡುಗಿಯರೇ. ಕ್ರಾಂತಿಗೀತೆಗಳಿಂದ ಪುಳಕಿತಗೊಂಡ ಇವರು ರಾಜಕೀಯ ಚಟುವಟಿಕೆಗಳಿಗೆ ಇಳಿದಿದ್ದರು. ಬ್ರಿಟಿಷ್ ಅಧಿಕಾರಿಗಳನ್ನು ಹತ್ಯೆಗೈಯುವ ಸಂಚುಗಳನ್ನು ರೂಪಿಸಿದ್ದರು. ಆ ಹೊತ್ತಿಗಾಗಲೇ ಸುಭಾಷ್ ಚಂದ್ರಭೋಸ್‌ರ ಕ್ರಾಂತಿಕಾರಿ ಭಾಷಣಗಳಿಂದ ಪ್ರಭಾವಿತಗೊಂಡವರು. ಅವರ ಹಿಂಬಾಲಕರಾಗಿ ಬ್ರಿಟೀಷರ ವಿರುದ್ಧ ಬಹಿರಂಗ ಕಾಳಗವನ್ನು ಘೋಷಿಸಲಾಗಿತ್ತು. ಇದಕ್ಕೆ ಮಹಿಳೆಯರೂ ಹೊರತಾಗಿರಲಿಲ್ಲ. ರಾಜಕೀಯದಲ್ಲಿ ಕ್ರಿಯಾಶೀಲರಾಗುವಂತೆ ಮಾಡಲು ಮಹಿಳೆಯರನ್ನೆಲ್ಲಾ ಒಂದುಗೂಡಿಸುವ ಮೊದಲ ಜನಭರಿತ ಸಂಸ್ಥೆಯಾಗಿ, 'ಮಹಿಳಾ ರಾಷ್ಟ್ರೀಯ ಸಂಘ (MRS)ವನ್ನು ಸ್ಥಾಪಿಸಲಾಯಿತು. ಸುಭಾಶ್‌ಚಂದ್ರ ಭೋಸರ ಸೂಚನೆಯ ಮೇರೆಗೆ ಆಕ್ಸ್‌ಫರ್ಡ್ ಪದವೀಧರೆ ಅಧ್ಯಾಪಕಿ ಲತಿಕಾಘೋಶ್ ಹುಟ್ಟುಹಾಕಿದ್ದ, ಸೈಮನ್ ಕಮಿಟಿಯ ವಿರುದ್ಧ ಪ್ರಬಲ ಪ್ರತಿಭಟನೆಯನ್ನು ಆಯೋಜಿಸುವುದಕ್ಕಾಗಿ (ಆಧುನಿಕ ಭಾರತದಲ್ಲಿ ಮಹಿಳೆ ಡಾ. ಎಚ್.ಎಸ್. ಶ್ರೀಮತಿ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧, ಪು. ೧೯೭), ಹೀಗೆ ಕಾಂಗ್ರೆಸ್‌ನ ಮಹಿಳಾ ಪ್ರತಿನಿಧಿಗಳು ದೇಶದ ವಿವಿಧ ಭಾಗಗಳಲ್ಲಿನ ಮಹಿಳಾ ಹೋರಾಟಗಾರರು ಇಂತಹ ಕ್ರಾಂತಿಕಾರಿ ವಿಚಾರಗಳಿಂದ, ಹೋರಾಟಗಳಿಂದ, ನೇತಾರರಿಂದ ಪ್ರಭಾವಿತರಾದವರು. ಹೆಚ್ಚಾಗಿ ಯುವಕ ಯುವತಿ ವಿದ್ಯಾರ್ಥಿಗಳು. ಕಬುಲ್‌ದಾಸ್ ಗುಪ್ತಾ ೧೯೨೯ರಲ್ಲಿ ತನ್ನ ಗಾಂಧೀಪರ ನಿಲುವಿನಿಂದ ಕ್ರಾಂತಿಯ ಕಡೆಗೆ ವಾಲಿದ ಕತೆಯೇ ರೋಚಕವಾದದ್ದು. ಗಾಂಧೀಯವರ ಆಶ್ರಮ ಸೇರಬಯಸುವ ಈಕೆಯನ್ನು ಬಾಪೂಜಿಯವರು ತಂದೆ ತಾಯಿಯ ಅನುಮತಿ ಪಡೆದು ಬರುವಂತೆ ಸೂಚಿಸಿದರು. ಆದರೆ ಅದು ಅಸಾಧ್ಯವಾದ ಮಾತಾಗಿತ್ತು. ಇದೇ ಮನೋಸ್ಥಿತಿಯಲ್ಲಿ ಹೊರಟ ಆಕೆ ಶರತ್ ಚಂದ್ರ ಚಟರ್ಜಿಯವರ 'ಪಥೇರ್ ದಬಿ' (ದಾರಿಯ ಹಕ್ಕು) ಕಾದಂಬರಿಯನ್ನು ಓದಿದ ನಂತರ ಅಲ್ಲಿನ ಪ್ರೀತಿ, ಪ್ರೇಮ, ಸಾಹಸಗಳಿಂದ ಆಕರ್ಷಿತಳಾದಳು. ಅಷ್ಟೇ ಅಲ್ಲ ಭಾರತಕ್ಕಾಗಿ ಆತ್ಮಾರ್ಪಣೆ ಮಾಡುವ ಸೂಕ್ತ ಹಾದಿಯೆಂದರೆ 'ಜುಗಾಂತರ್' ಎಂಬ ಕ್ರಾಂತಿವೀರರ ಗುಂಪಿನ ಸದಸ್ಯೆಯಾಗಿ ಬ್ರಿಟಿಷರ ವಿರುದ್ಧ ಹೋರಾಡುವುದೆಂದು ಭಾವಿಸಿದ್ದಳು.

ಇಂತಹ ಕ್ರಾಂತಿಕಾರ ವಿಚಾರಗಳಿಂದ ಪ್ರೇರಣೆಗೊಂಡವರಲ್ಲಿ ಚಿಕ್ಕವಯಸ್ಸಿನ ಕಾಲೇಜು ಬಾಲೆ ಬೀನಾದಾಸ್. ಈಕೆ ರಾಜ್ಯಪಾಲ ಜಾಕ್‌ಸನ್‌ಗೆ ಪಿಸ್ತೂಲಿನಿಂದ ಹೊಡದ ವೀರ ವನಿತೆ. ತನ್ನ ಸಹೋದರಿಯರಾದ ಕಲ್ಯಾಣಿ, ಸುರಮಾ ಮಿತ್ರ ಹಾಗೂ ಕಮಲ್‌ದಾಸ್ ಗುಪ್ತ ಜೊತೆಗೂಡಿ ರಾಜಕೀಯ ವಿಷಯಗಳನ್ನು ಚರ್ಚಿಸಲೋಸುಗ ವಿದ್ಯಾರ್ಥಿ ವೇದಿಕೆಯನ್ನು ಕಟ್ಟಲು ಬಯಸಿದ್ದಳು. ೧೯೩೦ರ ಹೊತ್ತಿಗೆ ಕ್ರಾಂತಿಕಾರ ವಿಚಾರಗಳ ದೇಶದ ಯುವಕ ಯುವತಿಯರನ್ನು ಹುಚ್ಚೆಬ್ಬಿಸಿದ್ದವು. ಈ ಹಿಂದೆ ಪರೋಕ್ಷವಾಗಿ ಕ್ರಾಂತಿವೀರರಿಗೆ ಸಹಾಯಮಾಡುತ್ತಿದ್ದ ಮಹಿಳೆಯರೆಲ್ಲ ನೇರವಾಗಿ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗವಹಿಸತೊಡಗಿದಾಗ ಅಲ್ಲಲ್ಲಿ ಹಿಂಸೆಗಳು ಸಂಭವಿಸಿದವು. ಕೆಲವು ಬ್ರಿಟಿಷ್ ಅಧಿಕಾರಿಗಳು ಹತ್ಯೆಗೊಳಗಾದರು ಇಲ್ಲವೆ ಗಾಯಗೊಂಡರು. ಇದೇ ವರ್ಷದ ಅಂದರೆ ೧೯೩೧ರ ಡಿಸೆಂಬರ್ ೧೪ರಂದು ಕೊಮಿಲ್ಲಾದ ಇಬ್ಬರು ಶಾಲಾ ಬಾಲಕಿಯರಾದ ಶಾಂತಿ ಮತ್ತು ಸುನೀತಿಯರು ಮ್ಯಾಜಿಸ್ಟ್ರೇಟ್ ಸ್ಟೀವನ್ಸ್‌ಗೆ ಗುಂಡು ಹೊಡೆದು ಸಾಯಿಸಿದರು. ಹೀಗೆ ಅನೇಕ ಕಡೆ ಇರುವ ಕ್ರಾಂತಿಕಾರಿ ವೀರರ ಹೋರಾಟಗಳು ಅವ್ಯಾಹತವಾಗಿ ನಡೆಯುತ್ತಿದ್ದಂತೆ ಬ್ರಿಟಿಷರಿಗೆ ದೊಡ್ಡ ತಲೆನೋವಾಗಿ ಪರಿಣಮಿಸಿತ್ತು. ಇವುಗಳನ್ನು ನಿಯಂತ್ರಿಸುವುದೇ ಸಮಸ್ಯೆಯಾಗಿ ಕಾಡಿತ್ತು. ಇದಕ್ಕೆ ಅವರು ಹೂಡಿದ ತಂತ್ರವೆಂದರೆ ಕ್ರಾಂತಿಕಾರಿ ಹೋರಾಟಗಾರರನ್ನೆಲ್ಲಾ ಬಂಧಿಸಿ ವಿಚಾರಣೆಯಿಲ್ಲದೆ ಜೈಲಿಗೆ ತಳ್ಳುವುದು. ಇದರಿಂದ ೧೯೩೩ರ ಹೊತ್ತಿಗೆ ಬಹುಮಟ್ಟಿನ ಎಲ್ಲಾ ಕ್ರಾಂತಿಕಾರಿ ಮಹಿಳೆಯರೂ ಜೈಲಿಗೆ ಹಾಕಲ್ಪಟ್ಟರು. ಸುಮಾರು ೬೦-೭೦ ಮಹಿಳೆಯರು ಬಂಧನಕ್ಕೊಳಗಾಗಿದ್ದು ಅವರಲ್ಲಿ ಸುಮಾರು ೪೦ ಮಂದಿ ದೇಶಭಕ್ತ ತರುಣಿಯರೇ ಆಗಿದ್ದರು.

ಅಷ್ಟೊತ್ತಿಗೆ ಗಾಂಧೀಜಿಯವರ ಪ್ರವೇಶದಿಂದಾಗಿ ಅನೇಕ ಮಹಿಳೆಯರು ಅವರ ಹಿಂಬಾಲಕರಾಗಿ ಸೇರಿಕೊಂಡರು. ಭಾರತೀಯ ಹಿಂದೂ ಆದರ್ಶದ ನಾರಿಯ ಕಲ್ಪನೆಗಳಡಿಯಲ್ಲಿ ಸ್ತ್ರೀಯರು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸುವಂತೆ ಕರೆ ನೀಡಿದರು. ಹಿಂದೂಗಳಿಗೆ ಸೀತೆ, ದಮಂತಿಯರ ಆದರ್ಶ ಗುಣಗಳನ್ನು ಮಾದರಿಯಾಗಿಟ್ಟುಕೊಂಡು ಗಾಂಧೀಜಿಯವರು ಮಹಿಳೆಯರನ್ನು ಹೋರಾಟಕ್ಕೆ ಹುರಿದುಂಬಿಸುತ್ತಿದ್ದರು. ಈ ಮಣ್ಣಿನ ಸಂಸ್ಕೃತಿ, ಪರಂಪರೆ, ಹಿಂದುತ್ವಗಳ ಪರಿಕಲ್ಪನೆಯಲ್ಲಿಯೇ ಮಹಿಳೆಯರು ಸ್ವಾತಂತ್ರ್ಯವನ್ನು, ಮುಕ್ತಿಯನ್ನು ಹೊರಟಬಲ್ಲರು ಎಂದು ಹೇಳುತ್ತಿದ್ದರು. ಸ್ವದೇಶಿ ವಸ್ತುಗಳ ಉತ್ಪಾದನೆ ಅಂದರೆ ಚರಕದಿಂದ ಖಾದಿ ನೂಲುವುದು, ಮನೆಯಲ್ಲಿ ಬಟ್ಟೆ ಹೊಲಿಯುವುದು ಇತ್ಯಾದಿಗಳು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸುಧಾರಣೆ ಮೆಟ್ಟಲುಗಳು ಎಂದು ಹೇಳುತ್ತಿದ್ದರು. ಇದು ಪುರುಷರ ಆತ್ಮಸ್ಥೈರ್ಯ ಹಾಗೂ ಇಚ್ಛಾಶಕ್ತಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ ಎಂದು ಹೇಳುತ್ತಿದ್ದರು. ಹೀಗಾಗಿ ಮಹಿಳೆಯರು ಬೀದಿಗಿಳಿಯದೆ ಮನೆಯಲ್ಲಿದ್ದುಕೊಂಡೇ ಪುರುಷ ಹೋರಾಟಗಾರರಿಗೆ ಬೇಕಾದ ಎಲ್ಲ ಅಗತ್ಯಗಳನ್ನು ಪೂರೈಸಲು ಸಾಧ್ಯವೆಂದು ಭಾವಿಸಿದ್ದರು. ಇದೇ ಮಾತನ್ನು ಮುಸ್ಲಿಂ ಮಹಿಳೆಯರಿಗೆ ಧಾರ್ಮಿಕ ನೆಲೆಯಲ್ಲಿ ಹೇಳುತ್ತಿದ್ದರು. ಪಾಟ್ನಾದ ಸಭೆಯೊಂದರಲ್ಲಿ ಮುಸ್ಲಿಂ ಮಹಿಳೆಯ ಕುರಿತು ಹೇಳಿದ ಭಾಷಣದಲ್ಲಿ 'ಬ್ರಿಟಿಷರ ಆಡಳಿತವೆಂದರೆ ಸೈತಾನ್ ಆಡಳಿತ' ಎಂದು ಇಸ್ಲಾಂ ಧರ್ಮದ ರಕ್ಷಣೆಗಾಗಿ ವಿಶೇಷ ವಸ್ತ್ರಗಳನ್ನು ತ್ಯಜಿಸಬೇಕೆಂದು ಆಗ್ರಹಿಸುತ್ತಿದ್ದರು.

ಗಾಂಧೀಜಿಯವರ ನಿಷ್ಠ ಅನುಯಾಯಿಗಳಲ್ಲೊಬ್ಬರಾದ ಮದರಾಸಿನ ಅಂಬುಜಮ್ಮಾಳ್, ಬಹುವಾಗಿ ಗಾಂಧಿಯವರನ್ನು ಹಾಡಿ ಹೊಗಳಿದ್ದಾರೆ. ರಾಷ್ಟ್ರೀಯ ಹೋರಾಟಗಳಲ್ಲಿ ಮಹಿಳೆಯರು ಮನೆ, ಕುಟುಂಬಗಳ ಮರ್ಯಾದೆಯನ್ನು ತೊರೆಯಬೇಕೆಂದಲ್ಲ. ಬದಲಿಗೆ ಸಾಧ್ಯವಿದ್ದಷ್ಟನ್ನು ಮಾಡಿ ಎಂದು ಗಾಂಧೀಜಿಯವರು ನೀಡುತ್ತಿದ್ದ ಸಲಹೆ ಸಾಮಾಜಿಕರಿಗೆ ಇಷ್ಟವಾಗಿದ್ದಾಗಿತ್ತು. ಮೇಲಾಗಿ ಅವರ ನೈತಿಕ ವ್ಯಕ್ತಿತ್ವ ಅತ್ಯುನ್ನತವಾಗಿದ್ದರಿಂದ ಮಹಿಳೆಯರು ಸಾರ್ವಜನಿಕ ಪ್ರವೇಶ, ರಾಜಕೀಯದಲ್ಲಿ ತೊಡಗಿಸಿಕೊಳ್ಳುವಿಕೆ ಯಾವತ್ತೂ ಸುರಕ್ಷತೆ ಹಾಗೂ ಅಪಾಯಗಳಲ್ಲಿ ಎಂಬುವುದಾಗಿತ್ತು.

ಗಾಂಧೀಜಿಯವರ ವ್ಯಕ್ತಿತ್ವದ ಆಚಾರ - ವಿಚಾರಗಳಿಂದಾಗಿ ಮಹಿಳೆಯರು ರಾಷ್ಟ್ರೀಯ ಹೋರಾಟದಲ್ಲಿ ಅತ್ಯಧಿಕವಾಗಿ ಪಾಲ್ಗೊಳ್ಳತೊಡಗಿದರು. ಅವರ ಕಡೆಗೆ ಇಡೀ ದೇಶವೇ ಓಗೊಡುತ್ತಿತ್ತು. ಅವರ ಹೋರಾಟದ ಮಾರ್ಗಗಳೆಲ್ಲ ಅಹಿಂಸೆ, ಶಾಂತಿ ಹಾಗೂ ಆದರ್ಶಗಳ ನೆಲೆಯಲ್ಲಿ ಇರುತ್ತಿದ್ದರಿಂದ ಜನಸಮುದಾಯ ಬಹುಬೇಗ ಆಕರ್ಷಿತಗೊಳ್ಳುತ್ತಿತ್ತು. ೧೯೨೦ರ ಆಗಸ್ಟ್ ೨೦ರಂದು ನಡೆದ ವಿಶೇಷ ಅಧಿವೇಶನದಲ್ಲಿ ಕಾಂಗ್ರೆಸ್ ಸ್ವದೇಶಿ ಪ್ರತಿಜ್ಞೆಯನ್ನು ಕೈಗೊಳ್ಳುವಂತೆ, ಬ್ರಿಟಿಷರಿಗೆ ಅಸಹಕಾರ ಚಳುವಳಿಯನ್ನು ಆರಂಭಿಸಲು ಕರೆಯಿತ್ತರು. ಮಹಿಳೆಯರಿಗೆ ಇನ್ನಷ್ಟು ಕ್ರಿಯಾಶೀಲ ಪಾತ್ರ ವಹಿಸಲಾಗುವುದೆಂದು ಭರವಸೆಯಿತ್ತರು. ಅವರಿಗೆ ೧೯೨೫ ಏಪ್ರಿಲ್ ೬ ರಿಂದ ೧೩ರವರೆಗೆ ಸತ್ಯಾಗ್ರಹ ಸಪ್ತಾಹವನ್ನು ಕಾಂಗ್ರೆಸ್ ಘೋಷಿಸಿತು. ಇದನ್ನು ಬೆಂಬಲಿಸಿ ರಾಜಕೀಯಾಸಕ್ತಿಯುಳ್ಳ ಮಹಿಳೆಯ ಸಭೆಗಳನ್ನು ನಡೆಸಿದರು. ಸರೋಜಿನಿ ನಾಯ್ಡುರವರು ಇಂಥ ಸಭೆಯೊಂದರಲ್ಲಿ ಮಹಿಳೆಯು ಪ್ರತ್ಯೇಕ ರಾಜಕೀಯ ಸಂಸ್ಥೆಯನ್ನು ಹೊಂದಬೇಕೆಂದು ನಿರ್ಣಯಿಸಿದರು. ಫಲವಾಗಿ ರಾಷ್ಟ್ರೀಯ ಸ್ತ್ರೀ ಸಂಘ (RSS) ಎಂಬ ಸ್ವತಂತ್ರ ಮಹಿಳಾ ಸಂಸ್ಥೆ ಅಸ್ತಿತ್ವಕ್ಕೆ ಬಂದಿತು. ಈ ಸಂಘಟನೆ ದೇಶ ಸೇವೆಗೆ ಅಗತ್ಯವಿದ್ದರೆ ಮಹಿಳೆಯು ಮನೆಗಳನ್ನು ಬಿಟ್ಟು ಬರಬೇಕೆಂದು ಸೂಚಿಸಿತು. ಗಾಂಧೀಜಿಯವರು ಬಂಗಾಳಿ ಸಾಹಸಿ ಮಹಿಳೆಯರ ಮಾರ್ಗವನ್ನು ಭಾರತದ ಇತರೇ ಭಾಗಗಳ ಮಹಿಳೆಯರೂ ಅನುಸರಿಸಬೇಕೆಂದು ಕರೆಯುತ್ತಿದ್ದ ಎಲ್ಲರನ್ನು ರಾಷ್ಟ್ರೀಯ ಹೋರಾಟಕ್ಕೆ ಬೀದಿಗಿಳಿಸುವಂತೆ ಮಾಡಿತ್ತು.

ಹಾಗೆಯೇ ನಾಗರೀಕ ಅವಿಧೇಯತೆಯ ಚಳುವಳಿಗೂ ಅಸಂಖ್ಯಾತ ಮಹಿಳೆಯರು ಭಾಗವಹಿಸಿದ್ದರು. ಹಿಂದೆ ೧೯೨೦ರಲ್ಲಿ ಪ್ರವೇಶಿಸಿದ ಮಹಿಳೆಯರು ಸಂಖ್ಯಾತ್ಮಕ ಹಾಗೂ ಗುಣಾತ್ಮಕವಾಗಿಯೂ ೧೯೩೦-೩೨ರ ನಾಗರೀಕ ಅವಿಧೇಯತೆಯ ಚಳುವಳಿಯಲ್ಲಿ ಭಾಗವಹಿಸಿದ್ದಕ್ಕಿಂತ ಹೆಚ್ಚಿನ ವ್ಯತ್ಯಾಸವಿತ್ತು. ಈ ಬಾರಿಯ ಚಳುವಳಿಯಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಮಹಿಳೆಯರು ಹಿಂದೆಂದಿಗಿಂತಲೂ ಭಾಗವಹಿಸಿ ಚಾರಿತ್ರಿಕ ಸ್ಥಾನ ಗಳಿಸಿದ್ದರು. ಮುಂಬೈ, ಬಂಗಾಲ, ಮದರಾಸು ಹಾಗೂ ಉತ್ತರ ಭಾರತದಾದ್ಯಂತ ನಡೆದ ಈ ಚಳುವಳಿಯಲ್ಲಿ ಭಾಗವಹಿಸಿದ ಮಹಿಳೆಯರು ಬೇರೆ ಬೇರೆ ಸ್ವರೂಪದ್ದಾಗಿದ್ದವು. ಒಟ್ಟಾರೆ ಉದ್ದೇಶ ಸಫಲವಾಗುವುದಾಗಿತ್ತು. ಈ ಚಳುವಳಿಗಳಲ್ಲಿ ಭಾಗವಹಿಸಿದ್ದ ಗಂಡಸರನ್ನೆಲ್ಲ ಬ್ರಿಟಿಷರು ಸೆರೆಗೆ ಹಾಕಿದಾಗ, ಮಹಿಳೆಯರೆಲ್ಲ ಬೀದಿಗಳಲ್ಲಿ ಧರಣಿ, ಮೋರ್ಚಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪತ್ರಿಕೆಗಳಲ್ಲಿ ಗಮನ ಸೆಳೆದರು. R.S.S.ನ

ಸರೋಜಿನಿನಾಯ್ಡು ತಮ್ಮ ಸಂಸ್ಥೆಯ ಉದ್ದೇಶ ಮತ್ತು ಗುರಿ ಸ್ವರಾಜ್ಯ ಮತ್ತು ಮಹಿಳಾ ವಿಮೋಚನಗಳೇ ಎಂದು ಸ್ಪಷ್ಟಪಡಿಸುತ್ತಿದ್ದರು. ಇದರ ಉಪಶಾಖೆಯಾಗಿ ದೇಶ ಸೇವಿಕಾ ಸಂಘ ರಚನೆಯಾಗಿ ಮುಂದಿನ ಕೆಲಸಗಳಿಗೆ ಸನ್ನದ್ಧವಾಗಿತ್ತು.

ಆದಾಗ್ಯೂ ೧೯೨೭ರಲ್ಲಿ All India Women's Conference ಅಸ್ತಿತ್ವಕ್ಕೆ ಬಂದಿದ್ದು ಐತಿಹಾಸಿಕ ಸಂಗತಿಯಾಗಿತ್ತು. ಇದರ ಮೊದಲ ಸಭೆ ಜನವರಿ ೧೯೨೭ರಲ್ಲಿ ಪೂನಾದಲ್ಲಿ ಜರುಗಿತ್ತು. ಇದರ ಆರಂಭದ ಉದ್ದೇಶ ಮಹಿಳೆಗೆ ಶಿಕ್ಷಣ ನೀಡುವುದೇ ಆಗಿತ್ತು. ಕಾಲಾನಂತರ ಶಿಕ್ಷಣದೊಂದಿಗೆ ಮಹಿಳೆಯರ ಇತರೇ ಸಮಸ್ಯೆಗಳಾದ ಪರ್ದಾ ಪದ್ಧತಿ, ಬಾಲ್ಯವಿವಾಹ ಇತ್ಯಾದಿಗಳ ಕಡೆಗೂ ಲಕ್ಷ್ಯವಹಿಸಲಾರಂಭಿಸಿದರು. From here came the realization that these questions could not be seperated from India's political subjections. This the AIWC came to a point where it stressed the political goal of National self-government as a means to achieve women's aspirations (Kumar, 1993) (Gender and Politics in India, Nivedita Menon, 1999, P. 8). ಹೀಗೆ ಮಹಿಳಾ ಹೋರಾಟಗಳು ತಮ್ಮ ಬೇಡಿಕೆಗಳನ್ನು, ಹಕ್ಕುಗಳನ್ನು ಈಡೇರಿಸಿಕೊಳ್ಳುವ ಉದ್ದೇಶವನ್ನು ಒಡಲೊಳಗೆ ಇಟ್ಟುಕೊಳ್ಳುತ್ತಲೇ ರಾಷ್ಟ್ರೀಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡವು. ಈ ಶರತ್ತಿನೊಂದಿಗೆ ಪುರುಷ ರಾಜಕಾರಣದ ಹೋರಾಟದಲ್ಲಿ ಪ್ರವೇಶಿಸುವ ಹಕ್ಕನ್ನು ಪಡೆದಾಗಿತ್ತು. ಹೋರಾಟದಲ್ಲಿ ಪಾಲ್ಗೊಂಡ ಮಹಿಳೆಯರೇ ಮಾತನಾಡುವ ಹಕ್ಕನ್ನು ಪಡೆದಂತಿತ್ತು. ಮತದಾರ ಹಕ್ಕನ್ನು ಪಡೆಯುವವರೆಗಿನ ಮಹಿಳಾ ಹೋರಾಟ (೧೯೧೭ರಲ್ಲಿ ಮೊದಲಿಗೆ ಧ್ವನಿ ಎತ್ತಲಾಗಿತ್ತು) ೧೯೨೦ರ ನಂತರದಲ್ಲಿ ಕಾರ್ಮಿಕ ಮಹಿಳಾ ವರ್ಗದ ಉಗಮಕ್ಕೆ ದಾರಿಯಾಗಿತ್ತು. ೧೯೨೮-೨೯ರ ಬಾಂಬೆ ಟೆಕ್ಸ್‌ಟೈಲ್ಸ್ ಮುಷ್ಕರದಲ್ಲಿ ಭಾಗವಹಿಸಿದ್ದ ಮಹಿಳಾ ಸಾಗರ ಹೋರಾಟದ ಇನ್ನೊಂದು ಮೈಲಿಗಲ್ಲಾಗಿತ್ತು.

೧೯೧೭ರಲ್ಲಿ ಮೊಟ್ಟಮೊದಲಿಗೆ ಆಳುವ ಅರಸರ ವಿರುದ್ಧ ಮತದಾನದ ಹಕ್ಕಿನ ಕುರಿತು (ಮಹಿಳಾ ಮತದಾನದ ಹಕ್ಕು) ಮಂಡಿಸಲಾಗಿತ್ತು. ಆಗಿನ ಬ್ರಿಟಿಷ್ ಸರಕಾರ ಆರಂಭದಲ್ಲಿ ತಿರಸ್ಕರಿಸಿತ್ತಾದರೂ ನಂತರ ೧೯೧೯ ರ ಭಾರತ ಕಾಯಿದೆ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ (೧೯೨೮) ಒತ್ತಾಯದ ಫಲವಾಗಿ ೧೯೩೫ ರ ಭಾರತ ಕಾಯಿದೆ ಜಾರಿಗೊಳಿಸಿ, ಮತದಾನದ ಹಕ್ಕನ್ನು ಗೃಹಿಣಿಯರಿಗೆ ಮತ್ತು ವಿಧವೆಯರಿಗೆ ಮಾತ್ರ ನೀಡಲಾಗಿತ್ತು. ಇದನ್ನು ಮಹಿಳಾ ಸಂಘಟನೆಗಳು ತೀವ್ರವಾಗಿ ವಿರೋಧಿಸಿದ್ದರು. ರಾಷ್ಟ್ರೀಯ ಚಳುವಳಿಯ ಹೋರಾಟಗಾರ್ತಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಮಹಿಳಾ ಹಕ್ಕಿನ ಕುರಿತು 'We donot think that women's rights as a citizen should depend on her marriage... (Kumar, 1993 (Gender and Politics in India, Nivedita Menon, 1999, P.8) ಎಂದು ಬರೆದರು. ಹೀಗೆ ಹೆಚ್ಚಿನ ವಿರೋಧವಿಲ್ಲದಿದ್ದರೂ ಒಂದು ಮಿತಿಯೊಳಗೆ ಭಾರತದ ಮಹಿಳೆಯರಿಗೆ ಮತದಾನದ ಹಕ್ಕು ಲಭಿಸಿತು. ೧೯೫೦ರ ಜನವರಿ ೨೬ ರಂದು ಸಾಮಾಜಿಕ ನ್ಯಾಯದೊಂದಿಗಿನ ಸಮಾನತೆ, ಸ್ವಾತಂತ್ರ್ಯವನ್ನು ಎಲ್ಲ

ಕ್ಷೇತ್ರಗಳಿಗೂ ಅನ್ವಯಿಸಿದ ಸಂವಿಧಾನಬದ್ಧ ಪ್ರಜಾಪ್ರಭುತ್ವವನ್ನು ಅಳವಡಿಸಿಕೊಂಡ ಭಾರತ, ಮಹಿಳೆಯರ ಅಸ್ತಿತ್ವವನ್ನು ಸಾಮಾಜಿಕವಾಗಿ ಸರಿಯಾಗಿ ರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲು ಆರಂಭಿಸಿದ್ದೇ ೧೯೮೦ ರಲ್ಲಿ ಎಂಬುದನ್ನು ಗಮನಿಸಬಹುದು.

ಮಹಿಳಾ ಮತನಾನದ ಹಕ್ಕಿನ ವಿಷಯದ ಹೋರಾಟವು ವಾಸ್ತವದಲ್ಲಿ ಅಂದಿನ ರಾಷ್ಟ್ರೀಯ ಹೋರಾಟದ ಪೂರಕ ರಾಜಕೀಯ ಚಟುವಟಿಕೆಯಾಗಿಯೇ ರೂಪುಗೊಂಡಿತ್ತು. ಹಾಗಾಗಿಯೇ ಮಹಿಳಾ ರಾಜಕೀಯದ ಹಕ್ಕಿನ ಹೆಗ್ಗಳಿಕೆಯು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಹೆಚ್ಚಿನ ಫಲವನ್ನೇನೂ ನೀಡಲಿಲ್ಲ ಮತ್ತು ೮೦ರ ದಶಕದಲ್ಲಿ ಮಹಿಳಾ ರಾಜಕೀಯದ ಹಕ್ಕಿನ ಪ್ರಶ್ನೆಯನ್ನು ಸ್ವಾಯತ್ತ ಮಹಿಳಾ ಸಂಸ್ಥೆಗಳು ಈ ಭಿನ್ನಾಭಿಪ್ರಾಯದೊಂದಿಗೆ ಮೀಸಲಾತಿಯ ನೆಲೆಯಲ್ಲಿ ಪ್ರಸ್ತಾಪಿಸಬೇಕಾಯಿತು, ಹೋರಾಟಕ್ಕಿಳಿಯ ಬೇಕಾಯಿತು.

ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದ್ದ ಮಹಿಳಾ ಹೋರಾಟಗಾರ್ತಿಯರು ಮಧ್ಯಮವರ್ಗದ ಮಹಿಳೆಯರೇ ಎಂಬುದು ನಿರ್ವಿವಾದವಾಗಿತ್ತು. ಇದರ ಯಾವ ಸೋಂಕು ತಟ್ಟದ ಬಹುಸಮಾಜದ ಮಹಿಳೆಯರು ಈ ಹೋರಾಟದಲ್ಲಿ ಭಾಗವಹಿಸಲು 'ಸ್ವದೇಸಿ' ಪರಿಕಲ್ಪನೆಯಡಿ ಮಹಿಳಾ ಸಂಘಟಕರು, ನಾಯಕರು ಹುರಿದುಂಬಿಸತೊಡಗಿದರು. ನೂಲುವುದು, ಕೃಷಿ ಕೆಲಸ ಇತ್ಯಾದಿ ಗೃಹ ಕೈಗಾರಿಕೆ ವಲಯಗಳಲ್ಲಿನ ಮಹಿಳೆಯರನ್ನು ರಾಷ್ಟ್ರೀಯ ಹೋರಾಟದಲ್ಲಿ ಸೇರಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಈ ಸಂದರ್ಭದಲ್ಲಿಯೇ ಆ ಮಹಿಳೆಯರು ತಮ್ಮ ಕೂಲಿಯನ್ನು ಹೆಚ್ಚಿಸುವಂತೆ, ಪುರುಷರಿಗೆ ಸರಿ ಸಮಾನವಾಗಿ ಕೆಲಸ ಮಾಡುವ ತಮ್ಮನ್ನು ಸಮಾನತೆಯಿಂದ ಕಾಣುವಂತೆಯೂ, ವೇತನ ಹೆಚ್ಚಳ, ಸೌಲಭ್ಯ ನೀಡಿಕೆ ಇತ್ಯಾದಿ ಕುರಿತು ಬೇರೆ ಬಗೆಯ ಬೇಡಿಕೆಯೊಂದಿಗೆ ಹೋರಾಟಗಳು ಬಾಂಬೆ, ಗುಜರಾತ್‌ಗಳಲ್ಲಿ ಕಾಣಿಸಿಕೊಳ್ಳುವಂತಾದವು. ಕಾರ್ಮಿಕ ವಲಯಗಳಲ್ಲಿ ಅಸಂಖ್ಯಾತ ಮಹಿಳೆಯರು ಸಂಘಟನೆಗೊಳ್ಳತೊಡಗಿದರು. ಒಂದು ರೀತಿಯ ಶಕ್ತಿ ಬಂದಿತ್ತು. ಈ ವರ್ಗವನ್ನು ತನ್ನ ರಾಷ್ಟ್ರೀಯ ಹೋರಾಟದಲ್ಲಿ ಕಡೆಗಣಿಸುವುದು ಅಪಾಯಕಾರಿ ಎಂಬುದು ಚಳುವಳಿಕಾರರಿಗೆ ಅರಿವಾಗಿತ್ತು. ಹೀಗೆ ಒಂದೆಡೆ ದೇಶಕ್ಕೆ ಮುಕ್ತಿ, ಇನ್ನೊಂದೆಡೆ ಪುರುಷ ಶೋಷಣೆಯಿಂದ ಮುಕ್ತಿ ಇವೆರಡೂ ಏಕಕಾಲಕ್ಕೆ ಘಟಿಸುತ್ತಿದ್ದ ಪ್ರಕ್ರಿಯೆಗಳಾಗಿದ್ದವು. ರಾಷ್ಟ್ರೀಯ ಹೋರಾಟ, ಮಹಿಳಾ ಹೋರಾಟ, ಸ್ತ್ರೀವಾದ ಇವುಗಳಲ್ಲಿ ಯಾವುವು ಮುಖ್ಯವಾದವು ಎಂಬ ಜಿಜ್ಞಾಸೆ, ಪ್ರಶ್ನೆಗಳು ಹುಟ್ಟಿಕೊಂಡವು. 'ಸ್ತ್ರೀವಾದವೋ? ರಾಷ್ಟ್ರೀಯ ವಾದವೋ? ಈ ಸಂದರ್ಭದಲ್ಲಿ ಮಹಿಳೆಯರಿಗೆ ತಮ್ಮ ಹಿತವನ್ನು ತಾವೇ ಮುಂದುಮಾಡಿ ಮಾತಿಗೆ ತೊಡಗುವುದು ತುಂಬಾ ಮುಜುಗರವನ್ನು ತರುತ್ತಿತ್ತು. ಹಾಗಾದರೆ ಆಯ್ಕೆ ಒಂದೋ ರಾಷ್ಟ್ರೀಯವಾದ ಅಥವಾ ಇನ್ನೊಂದು ಸ್ತ್ರೀವಾದ. ಇದಕ್ಕೆ ಒಂದು ಪರಿಹಾರವಾಗಿ ಸಾಮಾಜಿಕ ಸ್ತ್ರೀವಾದ ಎಂಬ ಪರಿಕಲ್ಪನೆಯೊಂದು ಸೃಷ್ಟಿಯಾಯಿತು. ಇದರಲ್ಲಿ ಸ್ತ್ರೀವಾದ ಹಾಗೂ ರಾಷ್ಟ್ರೀಯವಾದಗಳು ಒಟ್ಟೊಟ್ಟಿಗೆ ಹೊಂದಿಕೊಂಡಿರುವುದು ಸಾಧ್ಯವಿತ್ತು. ಈ ಹೊಸ ರಚನೆಯನ್ನು ಮಾರ್ಗ್ರಾಟ್ ಬದ್ರನ್ ಸ್ತ್ರೀವಾದಿ ರಾಷ್ಟ್ರೀಯವಾದ' ಎಂದು ಹೆಸರಿಸಿದ್ದರು. (Women in Modern India, Geraldine Forbes, 1996, P. 90-91).

ಇದೇ ವೇಳೆಗೆ ನಡೆದ ಸಾರ್ವಜನಿಕ ಹೋರಾಟ ಮುಷ್ಕರಗಳಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಅವುಗಳಲ್ಲಿ ೨ ಮುಖ್ಯವಾದವು. Tebhaga Movement, a peasant struggle in Bengal for the right to one-third of the crop and the Telengana struggle against feudal exploitation (Kannobiran and Lalita, 1989). However, in the course of these movements, women also raised questions of oppression of women in the family by their own men. (Gender and Politics in India, Nivedita Menon, 1999, P. 9).

## ಈ. ಮಹಿಳಾ ಹೋರಾಟಗಳ ಸಂದರ್ಭದಲ್ಲಿ ಮಂಡಿಸಲಾದ ಮತದಾನದ ಬೇಡಿಕೆ ಹಾಗೂ ರಾಜಕೀಯ ಮೀಸಲಾತಿ

೧೯೩೦ ರಿಂದ ೧೯೫೦ರ ವರೆಗಿನ ಅವಧಿಯಲ್ಲಿ ವೈವಿಧ್ಯಮಯ ಸಾಮಾಜಿಕ ಹಾಗೂ ರಾಜಕೀಯ ಚಳುವಳಿಗಳು ತೀವ್ರವಾಗಿದ್ದ ಸಂದರ್ಭದಲ್ಲಿ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡಿದ್ದರು. ೧೯೩೭ರ ಚುನಾವಣೆ, ೧೯೪೨ರ ಭಾರತ ಬಿಟ್ಟು ತೊಲಗಿ ಚಳವಳಿ, ಬ್ರಿಟಿಷ್ ವಿರೋಧಿ ಚಳವಳಿ (ಮಹಾಯುದ್ಧಗಳ ಸಂದರ್ಭದಲ್ಲಿ) ಗಳಂತಹ ಎಲ್ಲ ಪ್ರಧಾನ ಘಟನೆಗಳಲ್ಲೂ ಮಹಿಳೆಯರು ಭಾಗವಹಿಸಿದರೆಂಬುದು ಮಾತ್ರ ಗಮನಿಸಬೇಕಾದ ಮಹತ್ವದ ಸಂಗತಿಯಾಗಿತ್ತು. ಹೀಗೆ ವೈವಿಧ್ಯಮಯ ಸಾಮಾಜಿಕ ಹಾಗೂ ರಾಜಕೀಯ ಚಳವಳಿಗಳಲ್ಲಿ ಭಾಗವಹಿಸಿದ ಮಹಿಳೆಯರು, ಹೆಚ್ಚು ಕ್ರಿಯಾಶೀಲರಾಗಿ ಪ್ರಧಾನ ಮಹಿಳಾ ಸಂಸ್ಥೆಗಳ ಯಜಮಾನಿಕೆಯ ಮಾತುಗಳನ್ನು ಮೂಲೆಗೆ ತಳ್ಳಲಾರಂಭಿಸಿದರು ಅಥವಾ ನಿರಾಕರಿಸತೊಡಗಿದರು. ಅವರ ಅಗತ್ಯಗಳನ್ನು ಗುರುತಿಸುವ ಚರ್ಚೆಯ ಸ್ವರೂಪಗಳು ಬದಲಾಗಲು ಹೊಸ ಚಿಂತನೆಗಳು ಕಾರಣವಾದವು. ತೀವ್ರಗಾಮಿ, ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ನಿರತರಾಗಿದ್ದ ಮಹಿಳೆಯರು ಜೈಲುಗಳನ್ನು ಸೇರಿದ ಸಂದರ್ಭದಲ್ಲಿ, ಅವರು ಸಮಾಜವಾದವನ್ನು ಕುರಿತ ಸಾಹಿತ್ಯ ಓದತೊಡಗಿದರು. ಕಾರ್ಲ್‌ಮಾರ್ಕ್ಸ್‌ನ ಸಿದ್ಧಾಂತಗಳಿಗೆ ಮನಸೋತು ತಮ್ಮ ಆದರ್ಶಗಳಲ್ಲಿಯೇ ಹೊಸ ಪರಿವರ್ತನೆಗಳನ್ನು ಕಂಡುಕೊಳ್ಳತೊಡಗಿದರು. ಹೊಸ ಚಿಂತನೆಗಳನ್ನು ಅವುಗಳ ಅಗತ್ಯತೆಯನ್ನು ಒತ್ತಿ ಹೇಳತೊಡಗಿದರು.

ಜೈಲುಗಳಿಂದ ಹೊರಬಂದ ಮಹಿಳೆಯರು ಸಮಾಜದ ಕ್ರಾಂತಿಯನ್ನು ಹಬ್ಬಿಸುತ್ತಿದ್ದ ಪುರುಷರ ಜೊತೆಗೂಡಿ ದುಡಿಯಲಾರಂಭಿಸಿದರು. ಇವರೊಂದಿಗೇ ತಮ್ಮದೇ ಆದ ಮಹಿಳಾ ಶಾಖೆಗಳನ್ನು ಸ್ಥಾಪಿಸಿಕೊಂಡು ಮಹಿಳಾ ವಿಷಯಗಳನ್ನು ಪ್ರಧಾನವಾಗಿಸಿಕೊಂಡು ಕಾರ್ಯಪ್ರವೃತ್ತರಾದವು. ಈ ಮೂಲಕ ತಮ್ಮ ಅಗತ್ಯಗಳನ್ನು ಕುರಿತು ಹೊಸಬಗೆಯ ವ್ಯಾಖ್ಯಾನಗಳನ್ನು ಕೊಡಲಾರಂಭಿಸಿದರು. ಇಂತಹ ಭಾಗವಹಿಸುವಿಕೆಯಿಂದಾಗಿ ಅಗತ್ಯದ ಸೂತ್ರವೆನಿಸಿ ನಿರ್ಮಾಣಗೊಳಿಸಲ್ಪಟ್ಟ (ಪುರುಷರಿಂದ) 'ಭಾರತೀಯ ಮಹಿಳೆ' ಎಂಬ ಆದರ್ಶದ ಭ್ರಮೆ ಛಿದ್ರವಾಯಿತು. ಮಹಾಯುದ್ಧಗಳ ನಂತರದ (೧೯೩೯-೧೯೪೫) ಅವಧಿಯಲ್ಲಿ ಅನೇಕ ಶಿಕ್ಷಿತ ಮಹಿಳೆಯರು ರೈತ ಚಳುವಳಿಗಳ ಜೊತೆ ಕೂಡಿದರು. ಭಾರತ ಬಿಟ್ಟು ತೊಲಗಿ ಚಳುವಳಿಯ ಕಾಲಕ್ಕೆ ತೊಡಗಿಕೊಂಡ

ರಾಜಕೀಯ ಚಟುವಟಿಕೆಗಳು ಅವರನ್ನು ಈಗಾಗಲೇ ಹೇಳಿದಂತೆ ವಿಚಾರವಾದಿಗಳನ್ನಾಗಿ ಮಾಡಿತ್ತು. ಹೊಸ ಪರಿವರ್ತನೆಗಳನ್ನು ಅಪೇಕ್ಷಿಸಿದ್ದರು. ಈ ಅವಧಿಯಲ್ಲಿ ತರುಣ ಜನಾಂಗದವರಿಗೆ ವ್ಯವಸ್ಥೆಯ ಸಮಾನತೆಗಳಲ್ಲಿ (ಸಮಾಜವಾದದಿಂದ ಆಕರ್ಷಿತರಾಗಿದ್ದುದು ಮುಖ್ಯ ಕಾರಣ) ಭವಿಷ್ಯದ ಭಾರತವು ಸ್ತ್ರೀ-ಪುರುಷರೆಂಬ, ಬಡವ-ಶ್ರೀಮಂತರೆಂಬ ಭೇದವಿಲ್ಲದೆ ಎಲ್ಲರಿಗೂ ಸಾಮಾಜಿಕ ಹಾಗೂ ಆರ್ಥಿಕ ನ್ಯಾಯವನ್ನು ಒದಗಿಸಬೇಕೆಂಬ ಕನಸು ಕಾಣುತ್ತ ಅದಕ್ಕಾಗಿ ಹೋರಾಡ ತೊಡಗಿದರು. ಅವರು ರೈತ ಚಳುವಳಿಗಳಲ್ಲಿಳಿದಿದ್ದು ಅದ್ಭುತ ಕ್ರಾಂತಿಕಾರಿ ಪರಿವರ್ತನೆಗಾಗಿಯೆ. ೧೯೪೬ರ ಸೆಪ್ಟಂಬರ್‌ನಲ್ಲಿ ಬಂಗಾಲ ಪ್ರಾಂತ್ಯದ ಕಿಸಾನ್ ಸಭಾ, ಗೇಣಿದಾರರು ಮೂರನೇ ಒಂದು ಭಾಗ (ತೇಭಾಗ)ದ ಬೆಳೆಯ ಪಾಲು ಪಡೆಯಲು ಸಾಮೂಹಿಕವಾಗಿ ಹೋರಾಟಕ್ಕಿಳಿಯಬೇಕೆಂಬ ಕಡೆಗೆ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರೇ ಪಾಲ್ಗೊಂಡಿದ್ದು ವಿಶೇಷವಾಗಿತ್ತು. ತರುಣ ಕಮ್ಯೂನಿಸ್ಟರು ಗ್ರಾಮೀಣ ಪ್ರದೇಶಗಳ ರೈತರನ್ನು ಒಗ್ಗೂಡಿಸಿದರು. ಈ ಚಳುವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಕೂಡಲು ಕಾರಣ, ಕೂಲಿ ವೇತನದ ತಾರತಮ್ಯ, ಸಮಾನ ಸೌಲಭ್ಯ ಒದಗಿಸುವಂತೆ ಕೋರುವುದು ಆಗಿತ್ತು.

ಮಹಿಳಾ ಚಳುವಳಿಗಳು ಅಥವಾ ಹೋರಾಟವನ್ನು ಮೂರು ಸ್ತರಗಳಲ್ಲಿ ಅವಲೋಕಿಸಬಹುದು.

೧. ಆರಂಭಿಕ ಮಹಿಳಾ ಹೋರಾಟಗಳು ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯಲ್ಲಿನ ಸಾಮೂಹಿಕ ಮಹಿಳಾ ಪ್ರವೇಶವೇ ಆಗಿದ್ದವು. ಅಷ್ಟಕ್ಕೆ ಸೀಮಿತಗೊಂಡಿದ್ದು, ಉದ್ದೇಶವೂ ದೇಶದ ವಿಮುಕ್ತಿಯೊಂದೇ ಆಗಿತ್ತು.

೨. ಮಹಿಳಾ ಹೋರಾಟಗಳು, ಆಳುವ ಸರಕಾರಗಳು ಅನುಸರಿಸುತ್ತಿರುವ ತಾರತಮ್ಯ ನೀತಿಯ ವಿರುದ್ಧವಾಗಿದ್ದವು. ೧೯೬೦ರಲ್ಲಿ ಮಹಿಳೆಯರು ಸರಕಾರದ ಯೋಜನೆಗಳನ್ನು, ಸುಧಾರಣೆ ಕಾರ್ಯಕ್ರಮಗಳನ್ನು, ಅಧಿಕಾರ ಹಂಚಿಕೆಯ ರಚನೆಯ ವಿಷಯದಲ್ಲಿ ಸಾರ್ವತ್ರಿಕವಾಗಿ ಪ್ರಶ್ನೆಗಳನ್ನು ಎತ್ತುತ್ತಿದ್ದವು.

೩. ಮೂರನೇ ಹೋರಾಟಗಳು ೧೯೭೦ರ ನಂತರದಲ್ಲಿನ ಮಹಿಳಾ ಚಳವಳಿಗಳು ಅವರ ಬೇಡಿಕೆಗಳು ನಿಜವಾಗಿಯೂ ಮಹಿಳೆಯರ ಕುರಿತಾದ್ದು. ಸ್ತ್ರೀವಾದದ ಆದರ್ಶದೊಂದಿಗೆ ಹಕ್ಕೊತ್ತಾಯದಂತಹ ಬೇಡಿಕೆಗಳನ್ನು ಆಳುವ ಸರಕಾರಗಳಲ್ಲಿ ಕೇಳತೊಡಗಿದರು.

There was the growth of 'autonomous' Women's groups in town and cities, without party affiliations or formal hierarchical structures, although individual members often had party connections. The debate in the women's movement in the late 70s/early 80s was about her feminist politics could best be conducted. The critique from women in the Left parties was that these 'autonomous' groups were urban and middle class and therfore could not represent Indian women and the role of feminism

was therefore, to raise questions within mole organisations. However, feminism within autonomous groups pointed out that Left parties and trade unions were as patriarchal as any other and so it was necessary to stay independent while allying on a platform. Feminist compaigns of that period were dominated by these new city-based groups. There were nationvide compaigns on dowry and rape, and women's rsourse centres were set up in several cities. (Gender and politics in India, Nivedita Menon, 1999, P.19).

ಈ ಸಮಕಾಲೀನ ಮಹಿಳಾ ಚಳುವಳಿಯನ್ನು, ಭಾರತದ ಮಹಿಳಾ ಚಳುವಳಿಯನ್ನು ಸ್ತ್ರೀವಾದದ ಮೊದಲ ಅಲೆ ಎಂದೇ ಕರೆಯಲಾಗಿದೆ. ಇಂತಹ ಚಳುವಳಿಗಳನ್ನು ಆರಂಭಿಸಿದ ಸಂಸ್ಥೆಗಳ ಮುಂದಾಳುಗಳು ಲಿಂಗಾಧಾರಿತ ಕಾರಣದಿಂದಾಗಿಯೇ ಆಡಳಿತಕ್ಕೆ ಒಳಗಾದವರು ಎಂಬುದನ್ನು ಪ್ರಧಾನವಾಗಿ ಭಾವಿಸಿದರೆಂಬುದರಿಂದ ಈ ಚಳುವಳಿಯೂ ಸ್ತ್ರೀವಾದಿ ಎನಿಸಿತು.

❖ ❖

೩

# ನಗರ ಹಾಗೂ ಗ್ರಾಮೀಣ ಪರಿಕಲ್ಪನೆಗಳು

ನಾಗರೀಕತೆಯ ಆರಂಭದಿಂದಲೂ ಗ್ರಾಮವು ಸಮಾಜದ ಒಂದು ಬಹುಮುಖ್ಯ ಅಂಗವೂ, ಘಟಕವೂ ಆಗಿತ್ತು. ಗ್ರಾಮಸಭೆ ಅಥವಾ ಪಂಚಾಯತಿಯು ಇದರ ಮೂಲ ತಳಹದಿಯಾಗಿತ್ತು. ಗ್ರಾಮಗಳ ಉದಯ ಸಾಮಾಜಿಕ ವಿಕಾಸದ ಒಂದು ಮಹತ್ವದ ಹಂತ. ಇದು ಅನಾಗರಿಕ ಮಾನವ ನಾಗರಿಕತೆಯೆಡೆಗೆ ಮುನ್ನಡೆದ ಹೆಜ್ಜೆಯನ್ನು ಗುರುತಿಸುತ್ತದೆ. ಏಕೆಂದರೆ ಸಂಸ್ಕೃತಿಯ ಅಭಿವೃದ್ಧಿ ಘೋಷಣೆಯೂ ಗ್ರಾಮವ್ಯವಸ್ಥೆಯಿಂದ ಮಾತ್ರ ಸಾಧ್ಯವೆಂಬುದು ಅಂದಿನಿಂದ ಇಂದಿನವರೆಗೂ ತಿಳಿದುಬಂದ ಸತ್ಯ. ಈ ಹಿನ್ನೆಲೆಯಲ್ಲಿ ಭಾರತದೇಶವನ್ನು ಹಳ್ಳಿಗಳಿಂದ ಕೂಡಿದ ಉಪಖಂಡವೆಂದು ಕರೆಯುವ ಪದ್ಧತಿಯೂ ಇದೆ.

“ಈ ಜಗತ್ತು ಅಥವಾ ಪ್ರಪಂಚ ಎನ್ನುವ ಪದವೇ ಪಂಚಭೂತಗಳಾದ ನೀರು, ಗಾಳಿ, ಬೆಳಕು, ಭೂಮಿ, ಆಕಾಶಗಳಿಂದ ಆವರಿಸಲ್ಪಟ್ಟಿರುವುದು. ಇಂತಹ ಪ್ರಾಕೃತಿಕ ಸಂಪತ್ತನ್ನು ಅನುಭವಿಸಲು ಲಕ್ಷಾಂತರ ಜೀವಿಗಳು ಸೃಷ್ಟಿಯಾಗಿವೆ. ಅವುಗಳೇ ಜೀವಜಂತುಗಳು, ಸಸ್ತನಿಗಳು, ಮೃಗ-ಪಕ್ಷಿಗಳು, ನರ-ವಾನರರೆಂದು ಕರೆಯುವುದು. ಒಂದೊಂದು ಜೀವಿಯೂ ಒಂದೊಂದು ತೆರನಾದ ವಾಸ್ತವ್ಯವನ್ನು ಕಂಡುಕೊಳ್ಳುತ್ತದೆ. ಮೀನು ನೀರಿನಲ್ಲಿ, ಹಕ್ಕಿಪಕ್ಷಿ ತಾವೇ ರಚಿಸಿಕೊಂಡ ಗೂಡಿನಲ್ಲಿಯೂ, ಕೀಟಾದಿಗಳೂ ಅವುಗಳ ಸಾಮರ್ಥ್ಯಕ್ಕನುಗುಣವಾದ ಸಸ್ಯ ಸಂಪತ್ತನ್ನಾಶ್ರಯಿಸಿ ಜೀವಿಸುವುದು ಋತುಚಕ್ರಕ್ಕನುಗುಣವಾಗಿ ನಡೆದೆ ಇದೆ. ಹೀಗಿರುವಾಗ ಬುದ್ಧಿಪ್ರಧಾನತೆ ಇರುವ ಮಾನವನ ಬದುಕು ಬಹು ಎತ್ತರದಲಿ ನಿಲ್ಲುತ್ತದೆ. ಆ ಬದುಕಿಗೆ ಬಹು ವಿಸ್ತಾರವಾದ

ಸಂಸ್ಕೃತಿ, ಚರಿತ್ರೆ, ಪರಂಪರೆಗಳೂ ಜೀವನದುದ್ದಕ್ಕೂ ಪ್ರವಹಿಸುವ ನದಿಯಂತೆ ಹರಿದು ಬರುತ್ತಲೇ ಇರುತ್ತವೆ.'' (ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ಡಾ.ವಿಶ್ವನಾಥ, ದೇವೀ ಪ್ರಕಾಶನ, ಮೈಸೂರು, ೨೦೦೦, ಪು. ೧) ಈ ಹಿನ್ನೆಲೆಯನ್ನು ನೋಡಿದಾಗ ಮೂಲತಃ ಅಲೆಮಾರಿಯಾಗಿದ್ದ ಮಾನವ ಕೃಷಿ ಕಲೆಯನ್ನು ಕಲೆತು ಒಂದು ನಿರ್ದಿಷ್ಟ ಭೂಪ್ರದೇಶದಲ್ಲಿ ವಾಸಿಸಲು ತೊಡಗಿದಾಗಿನಿಂದ ಅವನ ಸಾಮಾಜಿಕ ಇತಿಹಾಸ ಆರಂಭವಾಯಿತು. ಹೀಗೆ ಭೂಮಿಯನ್ನು ಅವಲಂಬಿಸಿ ಒಂದೆಡೆ ನೆಲೆನಿಂತು ಬದುಕು ಪ್ರಾರಂಭಿಸಿದಾಗಲೇ ಗ್ರಾಮಗಳ ಉದಯವಾಯಿತೆಂದರೆ ತಪ್ಪಾಗಲಾರದು. ಅಲೆಮಾರಿ ಬದುಕಿನ ತೆಳುವಾದ ಸಾಮಾಜಿಕ ವ್ಯವಸ್ಥೆಯೊಂದು ನೆಲೆನಿಂತು ಸಾಂಸ್ಥಿಕವಾದ ಗ್ರಾಮರಚನೆಯಾಗಿ ಮಾರ್ಪಟ್ಟದ್ದು 'ಒಂದು ಪ್ರಮುಖ ಸಂಗತಿ. ಅಲೆಮಾರಿ (Nomadic)ಗಳಾಗಿದ್ದ ಸಂದರ್ಭದಲ್ಲಿ ಅಪ್ರಧಾನವಾಗಿದ್ದ ಭೂಮಿ ಮತ್ತು ಕೃಷಿಗಳು ತದನಂತರ ಅವರ ಒಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಧಾನ ಪಾತ್ರ ವಹಿಸತೊಡಗಿದವು. ಆ ಭೂಮಿಯು ಕೇವಲ ಅವರ ಜೀವನಾಧಾರ ಮಾತ್ರವಾಗಿರದೇ ನಿರ್ದಿಷ್ಟ ಪ್ರದೇಶವೊಂದರಲ್ಲಿ ನೆಲೆನಿಂತು ವಾಸಮಾಡುವ ಜನರ ನಡುವಿನ ಸಂಬಂಧ ಸೇತುವೆಯೂ ಆಯಿತು. ಹೊರಗಿನವರ ಆಕ್ರಮಣಗಳಿಂದ ತಮ್ಮ ನೆಲವನ್ನು ರಕ್ಷಿಸಿಕೊಳ್ಳುವಷ್ಟರ ಮಟ್ಟಿಗೆ ಅವರನ್ನು ಪರಸ್ಪರ ಬಂಧಿಸಿತು. ಈ ನೆಲೆಯಲ್ಲಿ ಗ್ರಾಮ ಸಮುದಾಯಗಳು ಅಸ್ತಿತ್ವಕ್ಕೆ ಬಂದವು.

ಗ್ರಾಮವನ್ನು ಭಾರತದ ಬೇರೆ ಬೇರೆ ಕಡೆಗಳಲ್ಲಿ ಹಳ್ಳಿ, ಪಳ್ಳಿ, ಊರ್, ಪಾದ್ರ, ಖೇಡ್‌ಗಾಂವ್, ಗುಡಾ -ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಭರತನು ಗ್ರಾಮವನ್ನು ಬ್ರಾಹ್ಮಣಾದಿ ವರ್ಣಗಳಿಂದ ಕೂಡಿದ, ಪ್ರಾಕಾರ ಕಂದಕಗಳಿಲ್ಲದ ಬಹುಜನವಸತಿಗಳೆಂದು ಹೇಳಿದ್ದಾನೆ. ಇವನ್ನು ಸಾಮಾನ್ಯವಾಗಿ ಶಾಶ್ವತ ವಾದ, ಗಾತ್ರದಲ್ಲಿ ಚಿಕ್ಕದಾದ, ಮುಖ್ಯವಾಗಿ ಭೂವ್ಯವಸಾಯವುಳ್ಳ ಹತ್ತಿರ ಹತ್ತಿರ ವಾಸಿಸುವ ಕೆಲವು ಕುಟುಂಬ ಗಳಿರುವ ಪ್ರಾಥಮಿಕ ಸಂಬಂಧಗಳು ಪ್ರಧಾನವಾಗಿರುವ ನೆಲೆಗಳೆಂದು ಕರೆಯಬಹುದು. ಮಾರ್ಕಂಡೇಯ ಪುರಾಣವೆಂಬ ಗ್ರಂಥದಲ್ಲಿ ''ಶೂದ್ರರು ಹೆಚ್ಚಾಗಿ ನೆಲೆಸಿರುವ, ಸಮೃದ್ಧವಾಗಿರುವ, ಸಾಗುವಳಿ ಯೋಗ್ಯವಾದ ಭೂಮಿಯ ಮಧ್ಯದಲ್ಲಿರುವ ಜನವಸತಿಗೆ ಗ್ರಾಮವೆಂದು ಹೆಸರು''. ಋಗ್ವೇದವು ಗ್ರಾಮವನ್ನು ಹಲವು ಕುಟುಂಬಗಳಿರುವ ನೆಲೆಯೆಂದು ವರ್ಣಿಸುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗ್ರಾಮಗಳೆಂದರೆ ನೂರಕ್ಕೆ ಕಡಿಮೆಯಿಲ್ಲದಷ್ಟು ಆದರೆ ೫೦೦ಕ್ಕೆ ಮೀರದಷ್ಟು ಶೂದ್ರರಾದ ಕೃಷಿಕರ ಕುಟುಂಬಗಳಿರುವ, ಒಂದು ಕ್ರೋಶ (ಎರಡು ಮೈಲು) ಅಳತೆಯ ದೂರದವರೆಗೆ ಹರಡಿರುವ, ಹಾಗೂ ನದಿ, ಪರ್ವತ, ಕಾಡು, ಹೂಬಿಡುವ ಮರ ಗಳಿಂದ ಕೂಡಿದ ಮೇರೆಗಳಿರುವ ಮತ್ತು ತಮ್ಮನ್ನು ತಾವೇ ಸಂರಕ್ಷಿಸಿಕೊಳ್ಳಬಲ್ಲ ಜನವಸತಿಗಳೆಂದು ವರ್ಣಿಸ ಲಾಗಿದೆ. ಹೆನ್ರಿ ಮೆಯಿನ್ ಹೇಳುವಂತೆ 'ಭಾರತದ ಗ್ರಾಮ ಸಮಾಜ ಒಕ್ಕಲಿಗರ ಗುಂಪು' (ಭಾರತೀಯ ಸಾಮಾಜಿಕ ಸಂಸ್ಥೆಗಳು, ಎಂ.ನಂಜಮ್ಮಣ್ಣಿ, ಮೈಸೂರು ವಿಶ್ವವಿದ್ಯಾಲಯ, ೧೯೮೨, ಪು.೨೩೬).

ಚಾರ್ಲ್ಸ್‌ಮೆಟ್ ಕ್ಯಾಫ್ (Charls metcalf) ಗ್ರಾಮಗಳನ್ನು ಕುರಿತು 'ಗ್ರಾಮೀಣ ಸಮುದಾಯಗಳು ಇತರರಿಂದ ಪೂರ್ಣವಾಗಿ ಸ್ವತಂತ್ರವಾದ ತಮಗೆ ಬೇಕಾದ ಎಲ್ಲವನ್ನು ಪಡೆದುಕೊಂಡಿರುವ ಪುಟ್ಟ

ಮೇಲೆ ಪ್ರಬಲವಾದ ಪರಿಣಾಮ ಬೀರಿತು. ಈ ಪರಿಣಾಮಗಳ ಅಧ್ಯಯನವನ್ನು ಅನೇಕ ಸಂಶೋಧಕರು ಕೈಗೊಂಡರು. ಗ್ರಾಮಗಳು ಬೆಳೆದು ಬಂದ ಬಗೆ, ವಿಧಗಳು, ಬದಲಾವಣೆ ಮತ್ತು ಅಭಿವೃದ್ಧಿ ಮುಂತಾದವುಗಳು ಅವರ ಆಸಕ್ತಿಯ ವಿಷಯಗಳಾಗಿದ್ದವು. ಅವರ ಸಂಶೋಧನೆಯಿಂದ ಹೊರಬಂದ ತೀರ್ಪುಗಳು ಗ್ರಂಥಗಳಾಗಿ ಪ್ರಕಟಗೊಂಡು ಗ್ರಾಮೀಣ ಸಮಾಜದ ಬಗೆಗಿನ ಸಾಹಿತ್ಯ ಬೆಳೆಯತೊಡಗಿತು. ಗ್ರಾಮಸಮಾಜದ ಅಧ್ಯಯನ ಒಂದು ವಿಜ್ಞಾನವಾಗಿ ಬೆಳೆದು ಬಂದ ಕತೆ ಕುತೂಹಲಕರವಾದದ್ದು. ಈ ಶಾಸ್ತ್ರವು ಮೊದಲು ಜನ್ಮತಾಳಿದ್ದು, ಇಂದು ಪ್ರಪಂಚದಲ್ಲಿಯೇ ಅತಿ ಹೆಚ್ಚಿನ ಪ್ರಮಾಣದಲ್ಲಿ ನಗರೀಕರಣಗೊಂಡ ಅಮೇರಿಕೆಯ ಆ ನಂತರವಷ್ಟೇ ಈ ಶಾಸ್ತ್ರವು ಜಗತ್ತಿನೆಲ್ಲೆಡೆ ಹರಡಿತು.

ಕ್ರಿ.ಶ. ೧೮೯೦ - ೧೯೨೦ರ ಅವಧಿಯನ್ನು ಅಮೇರಿಕೆಯ ಇತಿಹಾಸದಲ್ಲಿ 'ಸಂಕಟಕಾಲ'ವೆಂದು ಗುರುತಿಸಲಾಗಿದೆ. ["During what is called "Exploiter Period" of American society (1890-1920) a period when the American rural society witnessed allround decay, a considerable literature, describing and analysing the problems arising out of its growing crisis, came into existance."] (Rural Sociology in India, A.R. Desai, Popular Prakashan Bombay, 1994 p.No.7)

ಈ ಅವಧಿಯಲ್ಲಿ ಅತಿಯಾದ ಔದ್ಯೋಗಿಕರಣದಿಂದ ಅಮೇರಿಕದ ಗ್ರಾಮಗಳು ನಿರ್ಲಕ್ಷಿಸಲ್ಪಟ್ಟವು. ಅವುಗಳ ಅವಸಾನದ ಪರಮಾವಧಿ ಕಾಲವದು. ಗ್ರಾಮಗಳಲ್ಲಿ ಅಶಾಂತಿ, ಸಂಕಟ, ಗೊಂದಲಗಳು ಹೆಚ್ಚಾಗಿ ಅವುಗಳ ಪರಿಹಾರಕ್ಕಾಗಿ ಅನೇಕ ಚರ್ಚೆಗಳು, ವಾದ - ವಿವಾದಗಳು ಪ್ರಾರಂಭವಾದವು. ಆಗಿನ ಅಧ್ಯಕ್ಷರಾಗಿದ್ದ ಥಿಯೋಡರ್ ರೂಸ್‌ವೆಲ್ಟ್ ೧೯೦೮ರಲ್ಲಿ ಗ್ರಾಮಗಳು ಎದುರಿಸುತ್ತಿದ್ದ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಪಡೆಯಲೇಬೇಕೆಂಬ ನಿರ್ಧಾರದಿಂದ, ಸುಪ್ರಸಿದ್ಧ ಸಂಶೋಧಕರಾದ ಡೀನ್ ಬೇಲಿಯವರ ಅಧ್ಯಕ್ಷತೆಯಲ್ಲಿ ಕಂಟ್ರಿ ಲೈಫ್ ಕಮಿಶನ್ ಗ್ರಾಮಜೀವನ ಆಯೋಗವನ್ನು ನೇಮಕ ಮಾಡಿದರು. ಈ ಆಯೋಗದ ಮುಖ್ಯ ಉದ್ದೇಶವು ಗ್ರಾಮೀಣ ಜನರ ಸಮಸ್ಯೆಗಳ ಅಧ್ಯಯನ ಹಾಗೂ ಪರಿಹಾರೋಪಾಯಗಳನ್ನು ಸೂಚಿಸುವುದಾಗಿತ್ತು. ಅನೇಕ ಕಾರಣಗಳಿಂದಾಗಿ ಈ ಆಯೋಗದ ವರದಿಯು ಐತಿಹಾಸಿಕವಾದದು. ಈ ವರದಿಯನ್ನು ಗ್ರಾಮೀಣ ಸಮಾಜಶಾಸ್ತ್ರದ 'ಚಾರ್ಟರ್' ಎಂದು ಪರಿಗಣಿತವಾಗಿದೆ.

ಇದೇ ಅವಧಿಯಲ್ಲಿ ಅಂಕಿ ಸಂಖ್ಯೆಗಳ ಹಾಗೂ ಐತಿಹಾಸಿಕ ಅಂಶಗಳ ಆಧಾರ ಮತ್ತು ಸಂದರ್ಶನಗಳಿಂದ ಪಡೆದ ಮಾಹಿತಿಗಳನ್ನಾಧರಿಸಿ ಅಮೇರಿಕದಲ್ಲಿನ ಗ್ರಾಮಸಮುದಾಯಗಳ ಅಧ್ಯಯನಗಳೂ ನಡೆದವು. ಅನೇಕ ಸಂಶೋಧನ ವಿದ್ಯಾರ್ಥಿಗಳು ಗ್ರಾಮೀಣ ಸಮಾಜದ ಸಮಸ್ಯೆಗಳ ಕುರಿತು ಮಹಾಪ್ರಬಂಧಗಳನ್ನು ವಿಶ್ವವಿದ್ಯಾಲಯಗಳಿಗೆ ಸಲ್ಲಿಸತೊಡಗಿದರು. ೧೯೦೮ ರಿಂದ ೧೯೧೨ರ ಅವಧಿಯಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯದ ಜೇಮ್ಸ್ ಮೈಕಲ್ ವಿಲಿಯಮ್ಸ್ ಮತ್ತು ವಾರನ್ ಎಚ್.ವಿಲ್ಸನ್ ಮುಂತಾದವರೂ ಇಂತಹ ಸಂಶೋಧನೆಗಳನ್ನು ಕೈಗೊಂಡರು. ೧೯೧೫ರಲ್ಲಿ ಡಾ.ಸಿ.ಜೆ.ಗಾಲ್ಪಿನ್ ಅವರು ವಿಸ್ಕಾನ್ಸಿನ್

ವಿಶ್ವವಿದ್ಯಾನಿಲಯದ ಸಹಕಾರದೊಂದಿಗೆ ಕೈಗೊಂಡ (ಅಮೇರಿಕೆಯ ಗ್ರಾಮೀಣ ಬದುಕಿಗೆ ಸಂಬಂಧಿಸಿದ) ಸಂಶೋಧನೆಯು ಈ ದಿಶೆಯಲ್ಲಿ ಮಹತ್ವದ್ದಾಗಿತ್ತು. ೧೯೧೬ರಲ್ಲಿ ಜಾನ್ ಎಂ. ಗಿಲೆಟಿಯವರು 'ಗ್ರಾಮೀಣ ಸಮಾಜಶಾಸ್ತ್ರ' ಎಂಬ ಗ್ರಂಥವನ್ನು ಬರೆದರು. ಅದು ಗ್ರಾಮೀಣ ಸಮಾಜಶಾಸ್ತ್ರದ ಪ್ರಪ್ರಥಮ ಪಠ್ಯಪುಸ್ತಕವೆಂಬ ಹೆಗ್ಗಳಿಕೆ ಪಡೆಯಿತು. ೧೯೩೦ರಲ್ಲಿ ಪ್ರಕಟವಾದ ಗ್ರಂಥ "A Systematic Source Book in Rural Sociology" ಗ್ರಾಮೀಣ ಸಮಾಜಶಾಸ್ತ್ರದ ಬೆಳವಣಿಗೆಯನ್ನು ತೀವ್ರಗೊಳಿಸಲು ಸಹಾಯಮಾಡಿತು.

ಹೀಗೆ ಇನ್ನೂ ಅನೇಕ ಅಮೇರಿಕದ ಬುದ್ಧಿಜೀವಿಗಳು, ಸಂಶೋಧಕರು ಗ್ರಾಮೀಣ ಸಮಾಜಶಾಸ್ತ್ರ, ಒಂದು ವಿಜ್ಞಾನವಾಗಿ ಬೆಳೆಯಲು ಮಹತ್ತರ ಕೊಡುಗೆಯನ್ನು ನೀಡಿದ್ದಾರೆ. ಅವರಲ್ಲಿ ಸಾರೋಕಿನ್, ಜಿಮರ್‌ಮನ್ ಗಾಲ್ಪಿನ್ ಟೈಲರ್, ಕೋಲ್ಪ್, ಬ್ರನ್ನರ್, ಸಿಮ್ಸ್, ಡ್ವೈಟ್ ಸ್ಯಾಂಡರ್ಸ್‌ನ್, ಲ್ಯಾಂಡಿಸ್, ರೆಡ್‌ಫೀಲ್ಡ್ ಮತ್ತು ಸ್ಮಿತ್ ಪ್ರಮುಖರು. ಇಂದು ಗ್ರಾಮೀಣ ಸಮಾಜಶಾಸ್ತ್ರ ಹೊಸ ಅಧ್ಯಯನದ ಶಿಸ್ತು ಆಗಿದ್ದರು ಕೂಡಾ ಅಮೇರಿಕದಲ್ಲಿ ಇದರ ಬೆಳವಣಿಗೆಗಾಗಿ ೮೦೦ಕ್ಕೂ ಹೆಚ್ಚು ಪ್ರಾಧ್ಯಾಪಕರು ಹಾಗೂ ಸಂಶೋಧಕರು ಅವಿರತ ಶ್ರಮಿಸುತ್ತಿದ್ದಾರೆ.

ಪ್ರಸ್ತುತ ಸಂದರ್ಭದಲ್ಲಿಯೂ ಕೂಡ ದೇಶೀಯ, ಅಂತರರಾಷ್ಟ್ರೀಯ ಹಾಗೂ ಜಾಗತಿಕಮಟ್ಟದಲ್ಲಿನ ಸಂಸ್ಥೆಗಳು ಗ್ರಾಮೀಣ ಸಮಾಜಶಾಸ್ತ್ರವನ್ನು ಅಧ್ಯಯನವನ್ನಾಗಿಸುವ ಮತ್ತು ಕ್ರಮಬದ್ಧಗೊಳಿಸುವ ಕೆಲಸವನ್ನು ಮಾಡುತ್ತಿವೆ. ಉದಾಹರಣೆಗೆ UNO, UNESCO, FAO ಇತ್ಯಾದಿಗಳು ಗ್ರಾಮ ಸಮಾಜಶಾಸ್ತ್ರಕ್ಕೆ ಹೆಚ್ಚಿನ ಕೊಡುಗೆಯನ್ನು ನೀಡಿವೆ, ನೀಡುತ್ತಲಿವೆ. ಈ ಪ್ರಯತ್ನದಲ್ಲಿ ಭಾರತವೂ ಮುಂಚೂಣಿಯಲ್ಲಿದೆ. ಏಕೆಂದರೆ ಬಹುಪಾಲು ಗ್ರಾಮೀಣ ಪ್ರದೇಶ ಜನರನ್ನು ಹೊಂದಿರುವ ಬೃಹತ್ ರಾಷ್ಟ್ರವಾಗಿರುವುದರಿಂದ, ಸಂಕೀರ್ಣ ಸಂಸ್ಕೃತಿ ಸಮಸ್ಯೆಗಳ ಹಿನ್ನೆಲೆಯಲ್ಲಿ ಅನೇಕ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಆಯೋಜಿಸಿಕೊಂಡು ಅಭಿವೃದ್ಧಿಯೆಡೆಗೆ ಸಾಗುವ ಪ್ರಯತ್ನದಲ್ಲಿದೆ.

## ೧. ಪ್ರಾಚೀನ ಭಾರತದಲ್ಲಿ ಗ್ರಾಮಸಮಾಜ

ಭಾರತದ ಗ್ರಾಮಸಮಾಜವು ವೈಶಿಷ್ಟ್ಯಪೂರ್ಣವಾಗಿದ್ದು, ವಿಶ್ವದ ಇತರೆ ದೇಶಗಳಾದ ಪಶ್ಚಿಮ ಯೂರೋಪ್‌ನ ಹಳ್ಳಿ, ರಷ್ಯಾದ ಮಿರ್, ಜರ್ಮನಿಯ ಮಾರ್ಕ್ ಅಥವಾ ಚೀನಾದ ಗ್ರಾಮಗಳಿಗಿಂತ ಭಿನ್ನವಾಗಿದೆ. ಈ ಗ್ರಾಮಸಮಾಜದ ಉದಯದ ಕುರಿತು ಅನೇಕ ಚಿಂತನೆಗಳು, ಪ್ರಯತ್ನಗಳು ನಡೆದಿವೆ. ಹೆನ್ರಿ ಮೇನ್‌ರವರು ಈ ದಿಶೆಯಲ್ಲಿ ಹೆಚ್ಚಿನ ಪ್ರಯತ್ನ ನಡೆಸಿ ಮೊಟ್ಟ ಮೊದಲಬಾರಿಗೆ ಗ್ರಾಮ ಸಮುದಾಯಗಳ ವೈಜ್ಞಾನಿಕ ಅಧ್ಯಯನಕ್ಕೆ ನಾಂದಿ ಹಾಡಿದರು. ಇವರು ಬರೆದ Ancient Law (೧೮೬೧), Village Communities in the East and West (೧೮೭೬) ಮತ್ತು The early History of Institutions (೧೮೮೦) ಮುಂತಾದ ಕೃತಿಗಳು ವಿಮರ್ಶಕರ ಕಟು ಟೀಕೆಗೆ ಗುರಿಯಾದರೂ ಕೂಡಾ ಅವು ಗ್ರಾಮೀಣ

ಸಮಾಜಶಾಸ್ತ್ರದ ವಿದ್ಯಾರ್ಥಿಗಳಿಗೆ ಜ್ಞಾನದ ಹೊಸದಿಕ್ಕನ್ನು ಅನಾವರಣಗೊಳಿಸಲು ಸಹಕಾರಿಯಾಯಿತು. ಅಷ್ಟೇ ಅಲ್ಲ ಭಾರತದಲ್ಲಿ ಗ್ರಾಮಸಮುದಾಯಗಳ ವೈಜ್ಞಾನಿಕ ಅಧ್ಯಯನದ ಪ್ರಾರಂಭವು ಇವರು ಬರೆದ ಕೃತಿಗಳಿಂದಲೇ ಅಧಿಕೃತಗೊಳ್ಳಲಾರಂಭಿಸಿತು.

ಭಾರತದಲ್ಲಿ ಗ್ರಾಮಸಮುದಾಯಕ್ಕೆ ಸುಮಾರು ಎರಡು ಮಿಲೇನಿಯಂ ವರ್ಷಗಳಷ್ಟು ಸಾಹಿತ್ಯದ ಹಿನ್ನೆಲೆಯಿದೆ ಎಂದು ಹೇಳಲಾಗುತ್ತಿದೆ. ಆ ಕಾರಣಕ್ಕಾಗಿ ಇದು ಅತೀ ಪ್ರಾಚೀನವಾದದ್ದು. ಭಾರತೀಯ ಸಮಾಜದ ಪ್ರಾಚೀನ ಇತಿಹಾಸವನ್ನು ಕುರಿತು ನಡೆಸಿದ ಇತ್ತೀಚಿನ ಸಂಶೋಧನೆಯ ಪ್ರಕಾರ ಆರ್ಯರು ಭಾರತಕ್ಕೆ ಬರುವ ಪೂರ್ವದಲ್ಲಿಯೇ ಇಲ್ಲಿ ಪರಿಪೂರ್ಣವಾದ ಗ್ರಾಮಸಮುದಾಯಗಳಿದ್ದವೆಂದು ತಿಳಿದುಬರುತ್ತದೆ. ಭೂ ಅಗೆತದಲ್ಲಿ ದೊರೆತ ಪ್ರಾಚೀನ ಅವಶೇಷ ಮತ್ತಿತರ ಐತಿಹಾಸಿಕ ದಾಖಲೆಗಳ ಪ್ರಕಾರ ದ್ರಾವಿಡ ಅಥವಾ ಸುಮೇರಿಯನ್ ಆಗಿರಬಹುದಾದ ಆರ್ಯಪೂರ್ವ ಜನರ ಕೃಷಿ ಆಧಾರಿತವಾದ, ಸುಸಂಘಟಿತವಾದ ಗ್ರಾಮಸಮುದಾಯಗಳನ್ನು ಭಾರತವು ಹೊಂದಿತ್ತು. ಇದರಿಂದ "ಗ್ರಾಮಗಳ ಉಗಮ ಹಾಗೂ ನೆಲೆನಿಂತ ಜನಜೀವನ ಆರ್ಯರಿಂದ ಅಲ್ಲವೆಂಬುದು ವೇದ್ಯವಾಗುತ್ತದೆ. ಆರ್ಯ ಜನಾಂಗದ ವಿಶಿಷ್ಟ ಲಕ್ಷಣಗಳಲ್ಲಿ ಒಂದೆನಿಸಿದ್ದ ನೈಸರ್ಗಿಕ ಗ್ರಾಮಗಳು, ಸ್ವಯಂ ಸೃಷ್ಟಿತ ಗ್ರಾಮಸಮುದಾಯಗಳು ತದನಂತರದಲ್ಲಿ ಸಂಸ್ಥೆ ಎನಿಸಿಕೊಳ್ಳಲು ಸಾಧ್ಯವಾಗಲಿಲ್ಲ." (ಗ್ರಾಮಸಮಾಜ, ಡಾ. ಜೋಗನ್ ಶಂಕರ್, ಜೀವ ಪ್ರಕಾಶನ, ಮೈಸೂರು, ೧೯೯೫, ಪು. ೧೦ - ೧೧)

## ೨. ವೇದಗಳ ಕಾಲದಲ್ಲಿ ಗ್ರಾಮಸಮಾಜ

ಆರ್ಯಪೂರ್ವ ಭಾರತದಲ್ಲಿನ ಗ್ರಾಮಗಳ ಕುರಿತು ಸಿಗುವ ಮಾಹಿತಿಯು ಅತ್ಯಲ್ಪ. ಹೀಗಾಗಿ ವೈದಿಕ ಮೂಲದ ಪ್ರಾಚೀನ ಸಾಹಿತ್ಯ ಹಾಗೂ ಇನ್ನಿತರ ಮೂಲಗಳಿಂದ ದೊರಕುವ ಅತ್ಯಲ್ಪ ಮಾಹಿತಿಯನ್ನು ಅವಲಂಬಿಸಿ ಅಂದಿನ ಸಾಮಾಜಿಕ ಜೀವನವನ್ನು ಸ್ಪಷ್ಟವಾಗಿ ಚಿತ್ರಿಸಲೂ ಸಾಧ್ಯವಾಗುವುದಿಲ್ಲ. ಧಾರ್ಮಿಕವಾದ ಈ ಸಾಹಿತ್ಯ ಮೂಲಗಳಿಂದ ದೊರೆಯುವ ಅಲ್ಪ ಮಾಹಿತಿಯ ಉಲ್ಲೇಖಗಳೆಲ್ಲವೂ ಕೂಡಾ ಪ್ರಮುಖವಾಗಿ ದೊರೆಗಳು, ಸಾಮ್ರಾಟರು ಹಾಗೂ ಆರ್ಯರು ಮತ್ತು ಮೂಲನಿವಾಸಿಗಳ ನಡುವೆ ನಡೆದ ಹೋರಾಟಗಳ ವಿಷಯಗಳಿಂದ ಕೂಡಿದೆ. ಆರ್ಯಪೂರ್ವ ಸಮಾಜದ ಜನಜೀವನದ ಬಗೆಗೆ ಮಾಹಿತಿ ನೀಡುವಂತಹ ಅಂಶಗಳು ವೇದಗಳಲ್ಲಿ ಅಲ್ಪಮಟ್ಟಿಗೆ ದೊರಕುತ್ತವೆ. ಡಾ. ರಾಧಾ ಕುಮುದ ಮುಖರ್ಜಿಯವರು ವೇದಕಾಲದಲ್ಲಿ ಅಸ್ತಿತ್ವದಲ್ಲಿದ್ದ ಗ್ರಾಮಸಮುದಾಯಗಳು ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಿರುವುದನ್ನು ಗುರುತಿಸಿ ಒಂದು ಪಟ್ಟಿಯನ್ನು ಮಾಡಿದ್ದಾರೆ. ಅವೆಂದರೆ, ಕುಲ, ಗಣ, ಜಾತಿ, ಪುಗ, ವ್ರತ, ಶ್ರೇಣಿ, ಸಂಘ, ಸಮುದಾಯ, ಸಮೂಹ, ಸಂಭೂಯಸಮುತ್ತನ, ಪರಿಶಾಲ, ಚರಣ ಇತ್ಯಾದಿ. ಈ ಪ್ರಾಚೀನ ಗ್ರಾಮಸಮುದಾಯಗಳು, ಆಡಳಿತ, ಕಾರ್ಯನಿರ್ವಹಣೆಯ ಕುರಿತು ವೇದಕಾಲದ ಮಾಹಿತಿಗಳ ಆಧಾರದ ಮೇಲೆ ಚರ್ಚಿಸಬಹುದು.

ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖಿತವಾಗಿರುವ ಘೋಷೆ ಮತ್ತು ಗ್ರಾಮಗಳೆಂಬ ಹಳ್ಳಿಗಳು ಅನುಕ್ರಮವಾಗಿ ಘೋಷ - ಮಹತ್ತರ ಮತ್ತು ಗ್ರಾಮ - ಮಹತ್ತರ ಎಂಬ ಅಧಿಕಾರಿಗಳ ಅಧೀನದಲ್ಲಿರುತ್ತಿದ್ದವು. ಇವರು ಗ್ರಾಮದ ಜನರ ಜೀವನದ ಒಳಿತಿಗಾಗಿ ಮೇಲ್ವಿಚಾರಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ರಾಮಾಯಣದಲ್ಲಿ 'ಗ್ರಾಮಣಿ' ಎಂಬ ಮತ್ತೊಬ್ಬ ಗ್ರಾಮಾಧಿಕಾರಿಯು ಇದ್ದಾನೆಂದು ತಿಳಿದುಬರುತ್ತದೆ. ಮಹಾಭಾರತದಲ್ಲಿಯೂ ಕೂಡ ಮೇಲಿನ ಘೋಷ ಮತ್ತು ಗ್ರಾಮಗಳೆಂಬ ಎರಡು ಗ್ರಾಮಗಳ ಉಲ್ಲೇಖವನ್ನು ಕಾಣುತ್ತೇವೆ. ಈ ಗ್ರಾಮಗಳಲ್ಲಿ ಮೊದಲನೆಯದು ಚಿಕ್ಕದು ಹಾಗೂ ಎರಡನೆಯದು ದೊಡ್ಡ ಗಾತ್ರದ್ದು. ಅರಣ್ಯಕ್ಕೆ ಸಮೀಪವಾಗಿರುತ್ತಿದ್ದ ಈ ಗ್ರಾಮಸಮುದಾಯಗಳ ನಿವಾಸಿಗಳನ್ನು ಗೋಪರು' ಎಂದು ಕರೆಯಲಾಗಿದೆ. ಮನು "ಗ್ರಾಮ ಮುಖ್ಯಸ್ಥನನ್ನು ಗ್ರಾಮೀಕ ಎಂದು ಕರೆದಿದ್ದಾನೆ. ಗ್ರಾಮೀಕನು ಹಳ್ಳಿಯ ಮುಖ್ಯಸ್ಥನಾಗಿ, ಅಲ್ಲಿನ ಎಲ್ಲ ವಿದ್ಯಮಾನಗಳ, ಸಮಸ್ಯೆಗಳ ಮಾಹಿತಿಯನ್ನು ತನ್ನ ಮೇಲಿನ ಅಧಿಕಾರಿಗಳಿಗೆ ತಿಳಿಸುವುದು ಅವನ ಜವಾಬ್ದಾರಿಯಾಗಿತ್ತು. ಗ್ರಾಮಾಡಳಿತದ ಸಂಪೂರ್ಣ ಜವಾಬ್ದಾರಿಯು ಇವನದಾಗಿದ್ದು, ರಾಜನಿಗೆ ಸಲ್ಲಿಸಬೇಕಾದ ಕಂದಾಯಬಾಕಿ, ತೆರಿಗೆಗಳನ್ನು ಹಳ್ಳಿಗರಿಂದ ಸಂಗ್ರಹಿಸಿ ಕೊಡಬೇಕಾಗಿತ್ತು. ಈತನ ಮೇಲಾಧಿಕಾರಿಯು ಹತ್ತು ಹಳ್ಳಿಗಳ ಮುಖ್ಯಸ್ಥನಾಗಿದ್ದು, ಅವನನ್ನು ದಶಿ ಎಂದು ಕರೆಯಲಾಗುತ್ತಿತ್ತು. ದಶಿಯ ಮುಂದಿನ ಮೇಲಾಧಿಕಾರಿ ಇಪ್ಪತ್ತು ಹಳ್ಳಿಗಳ ಮುಖ್ಯಸ್ಥ, ವಿಶಾಂತಿಗೆ ಅಧೀನನಾಗಿ ಆಡಳಿತ ನಿರ್ವಹಿಸ ಬೇಕಾಗಿರುತ್ತದೆ. ವಿಶಾಂತಿಯ ಮೇಲಿನ ಮುಖ್ಯಸ್ಥನನ್ನು ಶತಿ ಅಥವಾ ಶತಗ್ರಾಮಾಧಿಪತಿ. ಅಂದರೆ ೧೦೦ ಹಳ್ಳಿಗಳ ಮುಖ್ಯ ಅಧಿಕಾರಿಯೆಂದು ಕರೆಯಲಾಗಿತ್ತು. ಈ ಶತ ಗ್ರಾಮಾಧಿಪತಿಯು, ೧೦೦೦ ಹಳ್ಳಿಗಳ ಮುಖ್ಯಸ್ಥನಾದ ಸಹಸ್ರ ಗ್ರಾಮಾಧಿಪತಿಯ ಅಡಿಯಲ್ಲಿ ಕೆಲಸ ನಿರ್ವಹಿಸಬೇಕಾಗಿತ್ತೆಂದು ಉಲ್ಲೇಖಿತವಾಗಿದೆ" (Rural Sociology in India, A.R.Desai, Popular Prakashana, Bombay 1994, P. 172).

ಈ ಎಲ್ಲ ಅಧಿಕಾರಿಗಳು ಆಡಳಿತ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರೂ ಕೂಡ ಗ್ರಾಮನಿವಾಸಿಗಳ ಅಥವಾ ಗ್ರಾಮದ ಜನರ ಇಚ್ಛೆಗೆ ವಿರುದ್ಧವಾಗಿ ಎಂದೂ ವರ್ತಿಸುತ್ತಿರಲಿಲ್ಲ ಎಂಬುದಕ್ಕೆ ಡಾ.ಅಲ್ಟೇಕರ್ ಪುರಾವೆಯನ್ನು ಒದಗಿಸುತ್ತದೆ. ಗ್ರಾಮದ ಮುಖ್ಯಸ್ಥನನ್ನು ರಾಜನು ಗ್ರಾಮಣಿ ಎಂದು ನೇಮಕಮಾಡಿದ್ದಾಗ್ಯೂ ಹಳ್ಳಿಗರ ಒಪ್ಪಿಗೆಯಿಲ್ಲದೇ ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳುತ್ತಿರಲಿಲ್ಲ ಎಂಬುದು ಗಮನಾರ್ಹವಾದದ್ದು. ಗ್ರಾಮಣಿಯು ತನ್ನಿಷ್ಟ ಬಂದಂತೆ ವರ್ತಿಸುವಂತಿರಲಿಲ್ಲ. ಅವನು ಗ್ರಾಮದ ಹಿರಿಯರ, ಮುಖ್ಯ ಯಜಮಾನರ, ಹಳ್ಳಿಯ ಹಿರಿಯ ವೃದ್ಧರ, ಅಂದರೆ ಗ್ರಾಮಸಮಿತಿಯಿಂದ ಆರಿಸಲ್ಪಟ್ಟ ಮುಖ್ಯಸ್ಥ, ಹಿರಿಯ ಸದಸ್ಯರ ಸಲಹೆಯೊಂದಿಗೆ ಆಡಳಿತವನ್ನು ನಡೆಸಿಕೊಂಡು ಹೋಗಬೇಕಾಗಿತ್ತು. ಈ ಪದ್ಧತಿಯನ್ನು ಡಾ. ಅಲ್ಟೇಕರ್‌ರವರು ಬಹುವಾಗಿ ಗಮನಿಸಿ ಹೀಗೆ ಹೇಳುತ್ತಾರೆ. "These Gramanis, as the village Mukliyas a class in our villages which continued even though the british period, beleft, of course, of all the glory and functions of the past, and the village scribe, the record - keeper (like our patwaris, patels, Kulkarnis, etc of the day), "could not act as they like. They had to work in accordance with the advice of the Gramvridhas. These

have functioned from the earliest times as a non-official body. The Mukhiya was the executive authority, but if he ever acted against the custamary practices, the Gram Vridhas used to correct him" (Rural Sociology in India, A.R.Desai, Popular Prakashana, Bombay 1994, P. 172).

ಈ ಕಾರಣಕ್ಕಾಗಿ ಪ್ರಾಚೀನ ಹಳ್ಳಿಗಳು ಗಣರಾಜ್ಯಗಳಾಗಿದ್ದವು, ಪ್ರಜಾಪ್ರಭುತ್ವ ಆದರ್ಶಗಳಿಂದ ಕೂಡಿದ್ದಾವೆಯೇ ಎಂದು ಹೇಳಲಾಗುತ್ತಿದ್ದರೂ ಅದನ್ನು ಸಂಪೂರ್ಣವಾಗಿ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಹಳ್ಳಿಗಳು ಸಂಪ್ರದಾಯದ ಜಾತಿಪದ್ಧತಿಯನ್ನು ಪೋಷಿಸುವ, ಶ್ರೇಣೀಕೃತ ವ್ಯವಸ್ಥೆ ಹೊಂದಿರುವ, ಮನುಷ್ಯ - ಮನುಷ್ಯನ ನಡುವೆ ಅಘೋಷಿತ ಕಂದಕವನ್ನೇ ಸೃಷ್ಟಿಮಾಡುವಂತಹವು ಎಂಬುದನ್ನು ಡಾ. ಬಿ.ಆರ್. ಅಂಬೇಡ್ಕರ್ ಮಾತಿನಲ್ಲಿಯೇ ನೋಡೋಣ : "ಈ ಗ್ರಾಮ ಗಣರಾಜ್ಯಗಳೇ ಭಾರತದ ಸರ್ವನಾಶಕ್ಕೆ ಕಾರಣವಾಗಿದೆ ಎಂಬುದು ನನ್ನ ದೃಢ ಅಭಿಪ್ರಾಯ. ಪ್ರಾಂತೀಯತೆಯನ್ನು ಜಾತೀಯತೆಯನ್ನು ಖಂಡಿಸುವ ಜನರೇ ಗ್ರಾಮರಾಜ್ಯದ ಪುರಸ್ಕೃತರಾಗಿರುವುದನ್ನು ಕಂಡು ನನಗೆ ಆಶ್ಚರ್ಯವಾಗುತ್ತದೆ. ಗ್ರಾಮಗಳೆಂದರೆ ಪ್ರಾದೇಶಿಕತೆಯ ಕೊಳೆಗುಂಡಿಗಳಲ್ಲದೆ ಬೇರೇನು? ಅವು ಅಜ್ಞಾನದ, ಸಂಕುಚಿತ ಮನೋಭಾವದ, ಜಾತೀಯತೆಯ ಬಿಲಗಳಲ್ಲದೆ ಮತ್ತೇನು? ಕರಡು ಸಂವಿಧಾನದ ಗ್ರಾಮಗಳನ್ನು ಕೈಬಿಟ್ಟು ವ್ಯಕ್ತಿಗಳನ್ನೇ ಘಟಕಗಳನ್ನಾಗಿ ತೆಗೆದುಕೊಂಡದ್ದಕ್ಕಾಗಿ ನನಗೆ ಸಂತೋಷವಾಗಿದೆ." (ಗ್ರಾಮಾಂತರ, ಎಚ್.ವಿ.ನಾಗೇಶ್, ಸುಜಾತಾ ಪ್ರಕಾಶನ, ಧಾರವಾಡ, ೧೯೮೮, ಪು. ೨೨೮) ಚಾರಿತ್ರಿಕ, ವೈದಿಕ, ಧಾರ್ಮಿಕ ಸಾಹಿತ್ಯಗಳನ್ನು ವಿಶ್ಲೇಷಿಸಿದಾಗ ವಾಸ್ತವದಲ್ಲಿ ಪ್ರಾಚೀನ ಗ್ರಾಮಗಳು - ಗ್ರಾಮಸಮುದಾಯಗಳಾಗಿದ್ದವು ಹಾಗೂ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದ್ದವು. ಅವೆಂದೂ ಗಣರಾಜ್ಯಗಳಾಗಿರಲಿಲ್ಲ. ಏಕೆಂದರೆ ಒಂದಿಲ್ಲೊಂದು ವಿಧದಲ್ಲಿ ಗ್ರಾಮಗಳು ಚಕ್ರಾಧಿಪತ್ಯದಡಿ ಘಟಕಗಳಾಗಿ ಅಸ್ತಿತ್ವದಲ್ಲಿರುತ್ತಿದ್ದವು. ಆಗಿನ ಮೌರ್ಯರು, ಚಾಲುಕ್ಯರು, ರಾಷ್ಟ್ರಕೂಟರು, ವಲಭಿ ಮತ್ತು ಯಾದವರ ಆಳ್ವಿಕೆಯಲ್ಲಿ ಕೇಂದ್ರ ಸರಕಾರವೇ ಹಳ್ಳಿಗಳ ನೇರ ಆಡಳಿತವನ್ನು ನಿಯಂತ್ರಣದಲ್ಲಿಟ್ಟಿದ್ದರು. ವಿವಿಧಬಗೆಯ ಕರ, ಕಂದಾಯ, ತೆರಿಗೆ, ಹಣಕಾಸಿನ ವ್ಯವಸ್ಥೆಯನ್ನೆಲ್ಲಾ ಕೇಂದ್ರ ಚಕ್ರಾಧಿಪತ್ಯಗಳೇ ನಿಗದಿಗೊಳಿಸಿ ವಿಧಿಸುವ ಅಧಿಕಾರವನ್ನು ಇಟ್ಟುಕೊಂಡಿದ್ದವು. ಯುದ್ಧ ಸಂದರ್ಭಗಳಲ್ಲಿ ಅಥವಾ ತುರ್ತು ಪ್ರಸಂಗಗಳಲ್ಲಿ ಹಳ್ಳಿಗಳನ್ನು ರಣರಂಗದ ತಾಣಗಳಾಗಿ, ಸೈನಿಕರ ಕೇಂದ್ರಗಳಾಗಿ ಪರಿವರ್ತಿಸುತ್ತಿದ್ದರು. ಹೀಗಾಗಿ ಪ್ರಾಚೀನ ಭಾರತದ ಗ್ರಾಮಗಳು ಇತ್ತ ಗಣರಾಜ್ಯಗಳೂ ಅಲ್ಲ, ಅತ್ತ ಪ್ರಜಾಪ್ರಭುತ್ವ ಮಾದರಿಯ ಗ್ರಾಮಗಳು ಆಗಿರಲಿಲ್ಲ. ಬದಲಿಗೆ ಅವು ಗ್ರಾಮಸಮುದಾಯಗಳ, ಸ್ವಯಂ ಆಡಳಿತ ಸಂಸ್ಥೆ ಅಥವಾ ಘಟಕಗಳಾಗಿದ್ದವು. ವ್ಯಕ್ತಿ ಸ್ವಾತಂತ್ರ್ಯ, ಸಮಾನತೆ, ಲಿಂಗ ಭೇದರಹಿತ ಸಮಾಜದ ವ್ಯವಸ್ಥೆ ಕಲ್ಪಿಸಲೂ ಸಾಧ್ಯವಾಗದ ಸ್ಥಿತಿ ಅದಾಗಿತ್ತು.

ಪ್ರಾಚೀನ ಗ್ರಾಮಪಂಚಾಯಿತಿ ಅಥವಾ ಸಮಿತಿಗಳ ಮತ್ತು ಗ್ರಾಮಣಿಗಳ ಅಧಿಕಾರ ಮತ್ತು ಕಾರ್ಯಗಳನ್ನು ಹೀಗೆ ವಿವರಿಸಲಾಗಿದೆ.

೧. ಗ್ರಾಮಣಿಯು ರಾಜ್ಯ ಮತ್ತು ಗ್ರಾಮ ಸಮುದಾಯದ ನಡುವಿನ ಸಂಬಂಧದ ಸೇತುವೆ ಯಾಗಿರುತ್ತಾನೆ. ಹಳ್ಳಿಯ ಜನರಿಗೂ ಮತ್ತು ರಾಜ್ಯಕ್ಕೂ ಆಡಳಿತಾತ್ಮಕ ಮಧ್ಯವರ್ತಿ ಯಾಗಿರುತ್ತಾನೆ.

೨. ಆತನು ಗ್ರಾಮಸಮುದಾಯದ ಎಲ್ಲರಿಗೂ ತಂದೆ ಹಾಗೂ ತಾಯಿಯಾಗಿ ಸರ್ವರ ಹಿತಾಸಕ್ತಿ ಯನ್ನು ರಕ್ಷಿಸುವಂತವನಾಗಿರುತ್ತಾನೆ.

೩. ಆತನು ರಾಜ್ಯಡಳಿತಕ್ಕೆ ಎಷ್ಟು ಪ್ರಮುಖನೋ ಅಷ್ಟೇ ಪ್ರಮುಖನಾಗಿ ಗ್ರಾಮಸಮುದಾಯದ ಆಡಳಿತದಲ್ಲಿ ಕೆಲಸ ನಿರ್ವಹಿಸುವ ಅಧಿಕಾರ ಹೊಂದಿರುತ್ತಾನೆ.

೪. ಗ್ರಾಮಣಿಯು ಹಳ್ಳಿಯ ರಕ್ಷಣೆ ಹಾಗೂ ಅದಕ್ಕಾಗಿ ನಿಯೋಜಿಸಲ್ಪಟ್ಟ ಯೋಧರ, ಸ್ವಯಂಸೇವಕರ ಮುಖ್ಯಸ್ಥನಾಗಿ ಕರ್ತವ್ಯ ನಿರ್ವಹಿಸಬೇಕಾಗಿರುತ್ತದೆ. ಗ್ರಾಮರಕ್ಷಣಾದಳದ ಮುಖ್ಯಸ್ಥನು ಈತನೇ ಆಗಿರುತ್ತಾನೆ.

೫. ರಾಜ್ಯಾಡಳಿತಕ್ಕೆ ಅಥವಾ ಅರಸನಿಗೆ ತೆರಬೇಕಾದ ಎಲ್ಲ ಬಗೆಯ ತೆರಿಗೆಗಳನ್ನೂ ವಸೂಲಿ ಮಾಡಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಇಟ್ಟಿರುವುದು.

೬. ಗ್ರಾಮದ ಎಲ್ಲ ವಿಷಯಗಳ ಪ್ರಸ್ತಾವನೆಯನ್ನು ನೇರವಾಗಿ ಗ್ರಾಮಣಿಯು ಪಂಚಾಯತಿಯ ಸದಸ್ಯರ ಅಂದರೆ ಹಿರಿಯ ಸದಸ್ಯರ ಒಪ್ಪಿಗೆಯೊಂದಿಗೆ ಪರಿಶೀಲಿಸಿ ರಾಜ್ಯಾಡಳಿತಕ್ಕೆ ಸಲ್ಲಿಸಬೇಕಾಗಿರುತ್ತದೆ. ಹಾಗೆಯೇ ಇನ್ನೂ ಕೆಲವು ವಿಷಯಗಳಲ್ಲಿ ಗ್ರಾಮಸಮುದಾಯದ ಪೂರ್ಣ ಸಹಕಾರವನ್ನು ಪಡೆಯುವ ಜವಾಬ್ದಾರಿಯೂ ಈತನದೇ ಆಗಿರುತ್ತದೆ.

೭. ಈ ಕಾರ್ಯಗಳೊಂದಿಗೆ ನ್ಯಾಯತೀರ್ಮಾನದ ಗುರುತರ ಜವಾಬ್ದಾರಿಯನ್ನು ಗ್ರಾಮಣಿಯು ಪಂಚಾಯತಿಯ ಪರಿಗಣನೆಯೊಂದಿಗೆ ನಿರ್ವಹಿಸಬೇಕಾಗಿತ್ತು. ಮಹಾಭಾರತದ 'ಶಾಂತಿಪರ್ವ'ದಲ್ಲಿ ಹೇಳಿದಂತೆ, 'ಗಣ (ಪಂಚಾಯತಿ, ಹಳ್ಳಿ, ಗ್ರಾಮ) ಗಳಲ್ಲಿರುವ ಅಧ್ಯಕ್ಷನು ಅಥವಾ ಮುಖ್ಯಸ್ಥನು ಕ್ರಿಮಿನಲ್ ಮೊಕದ್ದಮೆಗಳನ್ನು ವಿಚಾರಣೆಗೊಳಪಡಿಸಿ, ನ್ಯಾಯತೀರ್ಪು ನೀಡುವಲ್ಲಿ ನಿಷ್ಪಕ್ಷಪಾತನು, ಅಗಾಧ ಕಾನೂನು ಪಾಂಡಿತ್ಯ ಹೊಂದಿದವನು ಪ್ರಾಮಾಣಿಕ ಆಡಳಿತಗಾರನು ಆಗಿರಬೇಕು' ಈ ಗಣದ ನ್ಯಾಯ ತೀರ್ಪನ್ನು ಸಮಯ ಎಂದು ಕರೆಯುವ ಪದ್ಧತಿಯನ್ನು ಕೆ.ಪಿ.ಜಯಸ್‌ವಾಲ ಅವರು ಗುರುತಿಸಿದ್ದಾರೆ.

K.P. Jayasval points out that the laws of Ganas called "Samaya, literally means a decision or a resolution arrived at in an assembly that is, the laws of the ganas were passed in their meetings" (Rural Sociology, A.R.Desai, Popular Prakashan, Bombay 1994, p.No. 173)

ವೇದಗಳಲ್ಲಿ ದೊರಕುವ ಆರ್ಯಪೂರ್ವ ಸಮಾಜದ ಗ್ರಾಮಸಮುದಾಯದ ಜನಜೀವನ ಬಗೆಗಿನ

ಅಂಶಗಳು ಇನ್ನಷ್ಟು ಚಿಂತನೆಯ ಬೆಳಕನ್ನು ಚೆಲ್ಲುತ್ತವೆ. ಉದಾ : ಪುರಂದರರು ಎಂದು ಸಂಬೋಧಿಸಲ್ಪಡುವ ನಗರಗಳನ್ನು ನಾಶಮಾಡುವ ಜನರು ತಮ್ಮ ಬಲಾಢ್ಯ ದೇವತೆಗಳ ಮಹಿಮೆಯನ್ನು ಕೊಂಡಾಡುವ ಶ್ಲೋಕ ಒಂದು ಲಭ್ಯವಿದೆ. ಆರ್ಯಪೂರ್ವ ಕಾಲದ ಇತಿಹಾಸದಲ್ಲಿ ಕವಿದಿದ್ದ ಕತ್ತಲೆಯ ಮೇಲೆ ಈ ವಿನಾಶಕರ ದೇವತೆಗಳ ವಿಚಾರ ತುಸು ಬೆಳಕನ್ನು ಚೆಲ್ಲುತ್ತದೆ. ಇದರಿಂದಾಗಿ ಆರ್ಯಪೂರ್ವಕಾಲದ ನಿವಾಸಿಗಳು ದೊಡ್ಡನಗರಗಳನ್ನು ನಿರ್ಮಿಸಲು, ನಾಶಮಾಡಲೂ ಸಮರ್ಥರಾಗಿದ್ದರು ಎಂದು ಇತಿಹಾಸಕಾರರು ಇಂತಹ ಕೆಲವು ಸಾಕ್ಷಿಗಳ ಬಲದಿಂದ ನಿರೂಪಿಸಿದ್ದಾರೆ. ಇತ್ತೀಚೆಗೆ ಹರಪ್ಪಾ ಮಹೆಂಜೋದಾರೊಗಳಲ್ಲಿ ನಡೆದ ಶೋಧನೆಗಳೂ ಕೂಡ ಈ ದೃಷ್ಟಿಕೋನವನ್ನು ಬಲಪಡಿಸುತ್ತವೆ. ಈ ಸಂಶೋಧನೆಗಳನ್ನು ವಿಮರ್ಶಿಸುತ್ತಾ ಡಾ.ಪಣೀಕರ್ ಹೀಗೆ ಹೇಳುತ್ತಾರೆ. "ಸ್ವಯಂ ಸುಸಜ್ಜಿತವಾದ ಗ್ರಾಮಗಳು ಆರ್ಯ ಸೃಷ್ಟಿಯೇ ಅಥವಾ ಮೂಲನಿವಾಸಿಗಳ ಸಾಮಾಜಿಕ ವ್ಯವಸ್ಥೆಯ ಮುಂದುವರಿಕೆಯೇ ಎಂದು ಹೇಳುವುದು ಕಷ್ಟ. ಮಹೆಂಜೋದಾರೋದಂತಹ ನಗರವು ಮಾತ್ರ ಹಳ್ಳಿಗಳನ್ನಾಧರಿಸಿದ ಗ್ರಾಮೀಣ ಆರ್ಥಿಕ ವ್ಯವಸ್ಥೆ ಹಾಗೂ ವ್ಯಾಪಕವಾದ ಕೃಷಿ ವ್ಯವಸ್ಥೆ ಇವುಗಳ ಮೇಲೆ ಊರ್ಜಿತವಾಗಿರಲು ಸಾಧ್ಯ. ಆರ್ಯರು ಕೃಷಿಕರಾದ ಮೇಲೆ ಗ್ರಾಮ ವ್ಯವಸ್ಥೆಗಳನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡಿರಬಹುದು ಎಂಬ ಕಾರಣವೇ ಹೆಚ್ಚು ಯೋಗ್ಯವಾದುದಾಗಿದೆ. ಆರ್ಯಪೂರ್ವ ಕೃಷಿ ಸಮಾಜಗಳಲ್ಲಿ ವ್ಯವಸಾಯವು ಬಹುಮುಖ್ಯ ಪಾತ್ರ ವಹಿಸಿದೆ ಎಂದು ಊಹಿಸಬಹುದು. ಇಡೀ ಸಾಮಾಜಿಕ ರಚನೆಯೇ ಕೃಷಿಯ ಸುತ್ತ ಏರ್ಪಟ್ಟಿದೆ. ಭೂಮಿಯ ವ್ಯವಸಾಯವೇ ಗ್ರಾಮ ಸಮುದಾಯಗಳು ನಡೆಸಿದ ಪ್ರಯತ್ನದ ಫಲವು ಆಗಿದೆ. ಕೃಷಿ ಕುಟುಂಬಗಳನ್ನಲ್ಲದೆ ಅನುವಂಶಿಕವಾಗಿ ಇತರ ಕಲೆ ಹಾಗೂ "ವ್ಯವಸಾಯ ಸಂಬಂಧಿತ ವೃತ್ತಿಗಳಲ್ಲಿ ತೊಡಗಿದ ಕುಟುಂಬಗಳು ಅಲ್ಲಿ ಇದ್ದಿರಬೇಕು."

## ೩. ಬೌದ್ಧರ ಕಾಲದಲ್ಲಿ ಗ್ರಾಮಸಮಾಜ

ಕ್ರಿ.ಪೂ. ೫ನೇ ಶತಮಾನದ ಜೈನ ಮತ್ತು ಬೌದ್ಧ ಗ್ರಂಥಗಳಲ್ಲಿ ಉಲ್ಲೇಖಿತವಾದಂತೆ ಗ್ರಾಮಸಮುದಾಯಗಳು ಸ್ವಯಂ ಆಡಳಿತವನ್ನು ಹೊಂದಿದ್ದವು. ದೇಶದ ಬಹುಪಾಲು ನೆಲ ಗ್ರಾಮಸಮುದಾಯಗಳಿಂದ ಕೂಡಿತ್ತು. ಬೌದ್ಧಗ್ರಂಥಗಳು ಆಗಿನ ಗ್ರಾಮಗಳ, ಪಟ್ಟಣ ಹಾಗೂ ಕೋಟೆಗಳ ನಿರ್ಮಾಣದ ಕುರಿತು ಅನೇಕ ಮಾಹಿತಿಗಳನ್ನು ಒದಗಿಸಿವೆ. ಇಂತಹ ಗ್ರಾಮಸಮುದಾಯಗಳು ಗಾಮ, ನಿಗಮ, ಕುಲ ಮತ್ತು ನಗರಕ ಎಂಬ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಿದ್ದವು. ಜೈನ ಗ್ರಂಥಗಳಲ್ಲಿ ಘೋಷ, ಖೇತ, ಖರ್ವಾತ, ಗ್ರಾಮ, ಪಲ್ಲಿ, ಪಟ್ಟಣ, ಸಂವಹ, ಯುಗರ (Uagara) ಮಾತಂಬ ಇತ್ಯಾದಿ ಹೆಸರುಗಳಿಂದ ಗ್ರಾಮಗಳನ್ನು ಉವಾಚಿಸಲಾಗಿತ್ತು ಎಂಬುವುದು ಕೆಲವು ಆಧಾರಗಳಿಂದ ವ್ಯಕ್ತವಾಗುತ್ತದೆ.

ಈ ಕಾಲದ ಗ್ರಾಮಗಳು (ಬೌದ್ಧ ಜಾತಕದಲ್ಲಿಯಂತೆ) ಒಂದು ಗ್ರಾಮ ಸುಮಾರು ೧೦೦೦ ಕುಟುಂಬಗಳನ್ನು ಹೊಂದಿತ್ತು. ಹಳ್ಳಿಗಳೆಲ್ಲಾ ಅಕ್ಕಪಕ್ಕದಲ್ಲಿರುತ್ತಿದ್ದವು. ಒಂದಕ್ಕೊಂದು ಪೂರಕವಾಗಿಯೇ ಇರುತ್ತಿದ್ದವು. ಆದರೆ ಪ್ರತಿಯೊಂದು ಗ್ರಾಮವು ತನ್ನದೇ ಆದ ಬಾಗಿಲು ಅಂದರೆ ಗ್ರಾಮದ್ವಾರ (ದ್ವಾರಬಾಗಿಲು)

ಹೊಂದಿರುತ್ತಿದ್ದವು. ಹಳ್ಳಿಯಲ್ಲಿ ಹಣ್ಣುಗಳ ತೋಟವನ್ನು ಹಾಗೂ ಕೃಷಿಗಾಗಿ ಗ್ರಾಮಕ್ಷೇತ್ರವೊಂದನ್ನು ಉಳುಮೆಮಾಡಲು ಹೊಂದಿರುತ್ತಿದ್ದರು. ಬೆಳೆದುನಿಂತ ಫಸಲು, ಹಣ್ಣುಬೆಳೆ ಹಾಗೂ ಕಾಳುಕಡಿಗಳನ್ನು ಸಂರಕ್ಷಿಸಲು ಸುತ್ತ ಮುಳ್ಳುಬೇಲಿಯನ್ನು ಹಾಕಲಾಗುತ್ತಿತ್ತು. ಇದರೊಂದಿಗೆ ಗದ್ದೆಕಾರ್ಯವನ್ನು ಸಹ ಕಾವಲಿಗಾಗಿ ನಿಯೋಜಿಸುತ್ತಿದ್ದರು. ಅವಶ್ಯವೆನಿಸಿದಲ್ಲಿ ಗ್ರಾಮಕ್ಷೇತ್ರವನ್ನು ಅಂದರೆ ಕೃಷಿಭೂಮಿಯನ್ನು ವಿಸ್ತರಿಸಲು ಅರಣ್ಯಪ್ರದೇಶವನ್ನು ಅತಿಕ್ರಮಿಸಿ ಹಸನು ಮಾಡಿಕೊಳ್ಳುತ್ತಿದ್ದರು. Buddhist India ಎಂಬ ಗ್ರಂಥದ ಲೇಖಕ ರೈಸ್ ಡೇವಿಡ್ಸ್ (Rys Davids) ರವರು ಆರ್ಯ ಪೂರ್ವ ಗ್ರಾಮ ಸಮುದಾಯಗಳ ಗಾತ್ರವು ಪ್ರಧಾನವಾಗಿ ಭೂಮಿ ಫಲವತ್ತತೆ ಹಾಗೂ ನೀರಿನ ಪ್ರಕೃತಿಗಳನ್ನವಲಂಬಿಸಿದ್ದು, ಹೀಗಾಗಿ ಗ್ರಾಮಸಮುದಾಯಗಳು ಗಾತ್ರದಲ್ಲಿ ಚಿಕ್ಕದಾಗಿದ್ದವು ಎಂದು ಗುರಿತಿಸಿದ್ದಾರೆ. ಪಶು ಸಂಗೋಪನೆ ಹಾಗೂ ಹೈನುಗಾರಿಕೆ ಇವರ ಮುಖ್ಯ ಕಸುಬು. ಪ್ರತಿಯೊಂದು ಗ್ರಾಮವು ಸ್ವಪರಿಪೂರ್ಣವಾದ, ಹೊರಜಗತ್ತಿನೊಂದಿಗೆ ಅತ್ಯಲ್ಪ ಸಂಪರ್ಕವನ್ನಿಟ್ಟುಕೊಂಡಿದ್ದಂತಹ ಅಸ್ತಿತ್ವಗಳಾಗಿ ಗೋಚರಿಸುತ್ತವೆ. ಈ ಗ್ರಾಮಗಳ ಸರಹದ್ದು (Border) ಮರಗಳಿಂದಲೂ, ತೊರೆಗಳಿಂದಲೂ, ಬೆಟ್ಟ ಸಾಲುಗಳಿಂದಲೂ, ನದಿ ಹಾಗೂ ಕೆರೆಗಳಿಂದಲೂ ನಿರ್ದಿಷ್ಟಪಡಿಸಲಾಗುತ್ತಿತ್ತು. ಗ್ರಾಮದ ಭೂಮಿಯ ಮೇಲೆ ನಿವಾಸಿಗಳಿಗಿದ್ದ ವಿಶೇಷ ಹಕ್ಕುಗಳನ್ನು ಅತೀ ಕಾಳಜಿಪೂರ್ವಕವಾಗಿ ಕಾಯ್ದುಕೊಳ್ಳಲಾಗುತ್ತಿತ್ತು. ಅರಸನು ಎಷ್ಟೇ ಅಧಿಕಾರ ಪಡೆದಿದ್ದಾಗ್ಯೂ ಗ್ರಾಮದ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವಂತಿರಲಿಲ್ಲ. ವಿವಿಧ ಹೆಸರುಗಳಿಂದ ಗುರುತಿಸಲ್ಪಟ್ಟಿದ್ದ ಗ್ರಾಮದ ಮುಖ್ಯಸ್ಥನು ಗ್ರಾಮದ ಜಮೀನಿನ ವ್ಯವಸಾಯ, ಅದರ ಭೂ ಬಾಡಿಗೆ ಮತ್ತು ಕಂದಾಯಗಳಂತಹ ತೆರಿಗೆ ವಸೂಲಿಯಂತಹ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದನು.

ಬೌದ್ಧರ ಕಾಲದಲ್ಲಿ ಗ್ರಾಮದ ಸಾಮಾಜಿಕ ರಚನೆಯೊಳಗೆ ಯಾವುದೇ ಗಮನಾರ್ಹ ಪರಿವರ್ತನೆಗಳಾದುದು ಕಂಡುಬಂದಿಲ್ಲ. ಗ್ರಾಮುಸಮುದಾಯಗಳು ಎಂದಿನಂತೆ ಸ್ವತಂತ್ರವಾಗಿ ಮುಂದುವರೆದಿದ್ದವು. ರೈಸ್ ಡೆವಿಡ್ಸ್ ರ ಪ್ರಕಾರ "ಗ್ರಾಮದ ಜಮೀನು, ಗೋಮಾಳ ಹಾಗೂ ಬಂಜರು ಭೂಮಿಗಳು ಗ್ರಾಮದ ಸಾರ್ವತ್ರಿಕ ಒಡೆತನಕ್ಕೆ ಒಳಪಟ್ಟಿದ್ದವು. ಯಾರೊಬ್ಬರು ಕೂಡ ಕೃಷಿ ಭೂಮಿ ಗೋಮಾಳಗಳನ್ನು ಖಾಸಗಿ ಆಸ್ತಿಯಾಗಿ ಹೊಂದಿರಲಿಲ್ಲ. ಆದರೆ ಪಶು ಪ್ರಾಣಿಗಳಂತಹ ಚರಾಸ್ತಿಗಳನ್ನು ಖಾಸಗಿ ಆಸ್ತಿಯಾಗಿ ಪರಿಗಣಿಸಲಾಗಿತ್ತು. ಭೂಮಿಯ ವ್ಯವಸಾಯ, ನೀರಾವರಿನಾಲೆ, ನೀರಿನ ಪೂರೈಕೆ ಇತ್ಯಾದಿ ಎಲ್ಲಾ ಸಮುದಾಯಿಕ ಚಟುವಟಿಕೆಗಳು ಗ್ರಾಮದ ಮುಖ್ಯಸ್ಥನ ಉಸ್ತುವಾರಿಯಲ್ಲಿ ನಡೆಯುತ್ತಿದ್ದವು."

ಈ ಗ್ರಾಮಸಮುದಾಯಗಳಲ್ಲಿ ವಾಸಿಸುತ್ತಿರುವ ವ್ಯಕ್ತಿ ಎಷ್ಟೇ ಪ್ರಬಲನಾಗಿದ್ದಾಗ್ಯೂ ಗ್ರಾಮದ ಗೋಮಾಳವನ್ನಾಗಲಿ ಅಥವಾ ಉಪವಸ್ತುಗಳನ್ನಾಗಲೀ ಅನುವಂಶೀಯವಾಗಿ ಇಲ್ಲವೆ ಖರೀದಿಯ ಮೂಲಕವಾಗಲಿ ಪಡೆಯಬಹುದಾದ ಸಾಧ್ಯತೆಯೇ ಇರಲಿಲ್ಲ. ಅರಸರಿಗೂ ಕೂಡ ಭೂಮಿಯಂತಹ ಆಸ್ತಿ ಇರುತ್ತಿರಲಿಲ್ಲ. ತೆರಿಗೆಯನ್ನು ಅರಸೊತ್ತಿಗೆಯ ಬೊಕ್ಕಸಕ್ಕೆ ಮಾತ್ರ ನೀಡಬೇಕಾಗಿತ್ತು. ಹೀಗೆ ನೀಡುತ್ತಿದ್ದ

ತೆರಿಗೆ ಭೂಮಿಯ ಒಡೆಯನು ಅರಸನು ಎಂಬ ಕಾರಣಕ್ಕಾಗಿ ಅಲ್ಲ, ಬದಲಾಗಿ ಪರಕೀಯ ಆಕ್ರಮಣಗಳಿಂದ ಗ್ರಾಮಸ್ಥರನ್ನು ಆತನು ರಕ್ಷಿಸುತ್ತಿದ್ದ ಎಂಬ ಕಾರಣಕ್ಕಾಗಿ.

ರಾಜಮನ್ನಣೆಯ ವಿಚಾರದಲ್ಲಿ ಅರಸನು ಭೂಮಿಯನ್ನು ಉಂಬಳಿಯಾಗಿ ಕೊಡುತ್ತಿರಲಿಲ್ಲ; ಬದಲಾಗಿ ವಾರ್ಷಿಕ ತೆರಿಗೆಯಾಗಿ ಸರ್ಕಾರಕ್ಕೆ ಸಂದ ಭೂ ಉತ್ಪನ್ನಗಳನ್ನು ಕೊಡುತ್ತಿದ್ದ. ಅರಸೊತ್ತಿಗೆಯ ಬದಲಾವಣೆಯಿಂದ ರೈತರಿಗೆ ಯಾವುದೇ ರೀತಿಯ ಚ್ಯುತಿ ಉಂಟಾಗುತ್ತಿರಲಿಲ್ಲ. ವಾಸ್ತವವಾಗಿ ಸರ್ಕಾರದಲ್ಲಾಗುತ್ತಿದ್ದ ಬದಲಾವಣೆಗಳು ಅಥವಾ ಆಳುವವರ ಬದಲಾವಣೆಗಳು ರೈತರ ಪರಿಸ್ಥಿತಿಯನ್ನು ಮತ್ತಷ್ಟು ಸುಧಾರಿಸುತ್ತಿದ್ದವು. ಹಿಂದೆ ಪಡೆಯುತ್ತಿದ್ದಷ್ಟೆ ತೆರಿಗೆಯನ್ನು ಪಡೆದು ಹೆಚ್ಚಿನ ರಕ್ಷಣೆಯನ್ನು ನೀಡಲಾಗುತ್ತಿತ್ತು.

## ೪. ಮೌರ್ಯರ ಕಾಲದಲ್ಲಿ ಗ್ರಾಮಸಮಾಜ

ಕ್ರಿ.ಪೂ. ೫ನೇ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯದ ಸ್ಥಾಪನೆಯಾಯಿತು. ಮೌರ್ಯ ಸಾಮ್ರಾಟ ಚಂದ್ರಗುಪ್ತನ ಕಾಲದಲ್ಲಿ ರಚಿತವಾದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗ್ರಾಮಸಮುದಾಯವನ್ನು ಕುರಿತು ಚಿತ್ರಿಸಲ್ಪಟ್ಟ ಅಂಶಗಳು ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ. ಇಲ್ಲಿ ಚಿತ್ರಿಸಲ್ಪಟ್ಟ ಅಂಶಗಳು ವಾಸ್ತವಕ್ಕಿಂತ ಆದರ್ಶ ಸ್ವರೂಪವಾಗಿದ್ದವೆಂಬ ಟೀಕೆಯಿದೆ. ಒಟ್ಟಿನಲ್ಲಿ ಆಡಳಿತದ ವಿಚಾರವಾಗಿ ಗ್ರಾಮವು ಅತೀ ಮುಖ್ಯ ಘಟಕವಾಗಿರುವುದು ತಿಳಿದುಬರುತ್ತದೆ. ಪ್ರತಿಯೊಂದು ಹಳ್ಳಿಗೂ ಮರ, ನದಿ ಮತ್ತು ಬೆಟ್ಟಗಳಿಂದ ಕೂಡಿದ ನಿಶ್ಚಿತ ಎಲ್ಲೆ Border ಕಂಡುಬರುತ್ತದೆ. ಗ್ರಾಮದಿಂದ ಗ್ರಾಮಕ್ಕೆ ಇರುವ ಅಂತರ ಒಂದು ಕ್ರೋಶ ಅಥವಾ ಎರಡು ಕ್ರೋಶ (ಒಂದು ಕ್ರೋಶ = ೨ ಮೈಲುಗಳು)ವಾಗಿರಬೇಕೆಂದು ಉಲ್ಲೇಖಿತವಾಗಿದೆ. ಎಲ್ಲ ಗ್ರಾಮಗಳು ಒಕ್ಕೂಟವನ್ನು ರಚಿಸಿಕೊಳ್ಳಬೇಕು. ಹತ್ತು ಹಳ್ಳಿಗಳ ಕೂಟಕ್ಕೆ ಸಮ್‌ಗ್ರಹಣ, ೨೦೦ ಹಳ್ಳಿಗಳ ಕೂಟಕ್ಕೆ ಕಾರ್ವಟಿಕ, ೪೦೦ ಹಳ್ಳಿಗಳಿಗೆ ದ್ರೋಣಮುಖ ಮತ್ತು ೮೦೦ ಹಳ್ಳಿಗಳ ಕೂಟಕ್ಕೆ ಮಹಾಗ್ರಾಮ; ಆಡಳಿತ ಪರಿಭಾಷೆಯಲ್ಲಿ ಇದನ್ನು Sthatnuja ಸ್ತತ್ನುಜ ಎಂತಲೂ, ವ್ಯಾಪಾರ ವಹಿವಾಟುಗಳ ಹಾಗೂ ನೆರೆಹೊರೆಯ ಗ್ರಾಮಸಮುದಾಯಗಳ ಕೇಂದ್ರವೆಂತಲೂ ಕರೆಯುತ್ತಿದ್ದರು.

ಗ್ರಾಮಾಡಳಿತವು ಕೃಷಿಗೆ ಸಂಬಂಧಿಸಿದ ಅಭಿವೃದ್ಧಿಗಾಗಿ ತನ್ನದೇ ಆದ ಆಡಳಿತ ಸಿಬ್ಬಂದಿ ವ್ಯವಸ್ಥೆಯನ್ನು ಹೊಂದಿತ್ತು.

೧. ಅಧ್ಯಕ್ಷ (ಮುಖ್ಯಸ್ಥ) ೨. ಸಂಖ್ಯಾಯಕ Samkhayaka (ಅಕೌಂಟೆಂಟ್ ಲೆಕ್ಕಿಗ) ೩. ಸ್ಥಾನಿಕರು (ಗ್ರಾಮದ ವಿವಿಧ ಶ್ರೇಣಿಯ ಅಧಿಕಾರಿಗಳು) ೪. ಅನಿಕಸ್ತ Anikasta (ಪಶುವೈದ್ಯರು) ೫. ಜಂಘಾಕಾರಿಕ Jamghakarika (Village Couriers) ಇದರೊಂದಿಗೆ ಚಿಕಿತ್ಸಕ (ನೈರ್ಮಲ್ಯ), ಅಶ್ವಧಮಕ

(ಅಶ್ವತರಬೇತುದಾರ) ಇವರುಗಳಿಗೆಲ್ಲಾ ಬಾಡಿಗೆರಹಿತ ಮನೆ, ತೆರಿಗೆರಹಿತ ಭೂಮಿ ನೀಡಲಾಗಿತ್ತು. ಆದರೆ ಇವರುಗಳನ್ನು ಪರಕೀಯರಿಗೆ ಮಾರಾಟಮಾಡುವುದಾಗಲಿ, ಒತ್ತೆಯಾಳಾಗಿಸುವುದಾಗಲಿ ಮಾಡುವಂತಿರಲಿಲ್ಲ.

ಚಂದ್ರಗುಪ್ತಮೌರ್ಯನ ಕಾಲದಲ್ಲಿ ಗ್ರಾಮಗಳನ್ನು ಆಡಳಿತದ ದೃಷ್ಟಿಯಿಂದ ಜನಸಂಖ್ಯಾ ಗಾತ್ರದ ಮೇಲೆ ಮೂರು ವರ್ಗಗಳಾಗಿ ವಿಂಗಡಿಸಲಾಗಿತ್ತು. ೧. ಜೇಷ್ಠ ಅಂದರೆ ದೊಡ್ಡದು ೨. ಮಧ್ಯಮ ಅಂದರೆ ಮಧ್ಯಮ ಗಾತ್ರದ್ದು ಹಾಗೂ ೩. ಕನಿಷ್ಠ ಅಂದರೆ ಕಡಿಮೆ - ಚಿಕ್ಕ ಗಾತ್ರದ ಗ್ರಾಮ. ಪುನ: ಈ ಗ್ರಾಮಗಳನ್ನು ರಾಜ್ಯ ಆದಾಯದ ದೃಷ್ಟಿಯಿಂದ ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿತ್ತು.

ಅ. ಗ್ರಾಮಗ್ರಸ Gramagras or Ordinary Villages - ಈ ಗ್ರಾಮಗಳು ರಾಜ್ಯಕ್ಕೆ ಸಲ್ಲಿಸಬೇಕಾದ ಕಂದಾಯವನ್ನು ತೆರಬೇಕು.

ಬ. ಪರಿಹಾರಕ ಗ್ರಾಮಗಳು ಯಾವುದೇ ಕಂದಾಯವನ್ನು ತೆರಬೇಕಾಗಿರಲಿಲ್ಲ. ಈ ಗ್ರಾಮಗಳನ್ನು ಅರ್ಚಕರಿಗೆ, ಶಿಕ್ಷಕರಿಗೆ ನೀಡುತ್ತಿದ್ದರು. ಬದಲಿಗೆ ಅವರು ಜನರಿಗೆ ಶಿಕ್ಷಣವನ್ನು, ನೀತಿಯನ್ನು ಬೋಧಿಸಬೇಕಾಗಿತ್ತು. ಜನರಿಂದ ಪಡೆದ ಕಾಣಿಕೆ ದೇವರ ಕಾಣಿಕೆ - ಧರ್ಮ ಅವರ ಸಂಬಳವಾಗಿತ್ತು.

ಕ. ಆಯುಧುಜ ಗ್ರಾಮಗಳು ಕಂದಾಯ ರಹಿತ ಗ್ರಾಮಗಳು. ಇವರು ಯಾವುದೇ ತೆರನಾದ ತೆರಿಗೆಯನ್ನು ರಾಜ್ಯಬೊಕ್ಕಸಕ್ಕೆ ಕೊಡಬೇಕಾಗಿರಲಿಲ್ಲ. ಈ ಗ್ರಾಮಗಳು ಯುದ್ಧದ ಸಂದರ್ಭದಲ್ಲಿ ಯೋಧರನ್ನು ತರಬೇತುಗೊಳಿಸಿ ಕಳಿಸಬೇಕಾಗಿತ್ತು. ಅನೇಕ ಸೈನಿಕರ ತರಬೇತಿ, ಸೈನಿಕ ಕಾರ್ಯಗಾರಗಳು ಈ ಗ್ರಾಮಗಳಲ್ಲಿ ನಡೆಯುತ್ತಿದ್ದವು. ಯಾವತ್ತೂ ಯುದ್ಧ ಸನ್ನದ್ಧ ಸ್ಥಿತಿಯಲ್ಲಿ ಸೈನಿಕರನ್ನು ಅಣಿಗೊಳಿಸಿಕೊಳ್ಳಬೇಕಾಗಿರುತ್ತಿತ್ತು.

ಡ. ಕೊನೆಯದಾಗಿ ಮೇಲಿನ ಮೂರು ವರ್ಗಗಳಿಗೆ ಸೇರದ ಗ್ರಾಮಗಳು ಸರ್ಕಾರಕ್ಕೆ ತೆರಿಗೆಗಳನ್ನು ನಗದು ಹಣ ಪಾವತಿ ಹೊರತುಪಡಿಸಿ ಕೊಡಬೇಕಾಗಿತ್ತು. ಅವೆಂದರೆ, ಕೃಷಿ ಉತ್ಪನ್ನ, ಪ್ರಾಣಿಗಳು, ಅರಣ್ಯ ಉತ್ಪನ್ನಗಳು, ಬಂಗಾರ, ಬೆಳ್ಳಿ, ಮುತ್ತು, ಒಡವೆಗಳು, ಭೂಮಿಯಿಂದ ಅಗೆದ ಗಣಿಸಂಪತ್ತು ಹಾಗೂ ಶ್ರಮವನ್ನು ಒದಗಿಸಬೇಕಾಗಿತ್ತು.

ಚಂದ್ರಗುಪ್ತನ ರಾಜಕೀಯ ಮಾರ್ಗದರ್ಶಿಯಾದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖಿಸಲಾದ ಗ್ರಾಮಗಳು, ಅವುಗಳ ವಿಂಗಡಣೆ, ಗ್ರಾಮಸ್ತರ ಆಡಳಿತ ವ್ಯವಸ್ಥೇ ... ಇತ್ಯಾದಿಗಳು ಮೌರ್ಯರ ಆಡಳಿತದ ಬಗ್ಗೆ ಬೆಳಕನ್ನು ಚೆಲ್ಲುತ್ತವೆ. ಪ್ರತಿಯೊಂದು ಗ್ರಾಮವು 'ಗ್ರಾಮಣಿ' ಎಂಬ ನಾಯಕನನ್ನು ಹೊಂದಿರುತ್ತಿತ್ತು. ಆತನನ್ನ ರಾಜನೇ ನೇಮಿಸುತ್ತಿದ್ದನೋ ಅಥವಾ ಗ್ರಾಮಸ್ಥರಿಂದ ಚುನಾಯಿತನಾಗುತ್ತಿದ್ದನೋ ಎಂಬುದರ ಬಗ್ಗೆ ಖಚಿತ ಸುಳಿವು ಇಲ್ಲದಿದ್ದರೂ ಗ್ರಾಮಣಿಯು ಆಯಾ ಗ್ರಾಮದ ಎಲ್ಲ ವ್ಯಕ್ತಿಗಳ ಮೇಲೆ ಪ್ರಭಾವ ಬೀರುವ ಅಧಿಕಾರಿಯಂತೂ ಆಗಿದ್ದ. ಈತನು ಸಮಾಜದಲ್ಲಿ ಚಲಾವಣೆಯಲ್ಲಿದ್ದ ಸನಾತನ ಸಂಪ್ರದಾಯಗಳನ್ನು ಮೀರಿದ ವ್ಯಕ್ತಿಗಳಿಗೆ ಶಿಕ್ಷಿಸುವ ಅಧಿಕಾರ ಹೊಂದಿದ್ದ. ಈ ಅಧಿಕಾರವನ್ನು ಆತ ಆಗಿನ ರೀತಿ - ರಿವಾಜುಗಳನ್ನು

ಹಾಗೂ ಜನಾಭಿಪ್ರಾಯಗಳನ್ನು ಗಮನದಲ್ಲಿಟ್ಟುಕೊಂಡೇ ಚಲಾಯಿಸುತ್ತಿದ್ದನು. ಹೀಗಾಗಿ ಅಧಿಕಾರದ ದುರುಪಯೋಗವಾಗುವ ಸಾಧ್ಯತೆಗಳು ಇಲ್ಲವಾಗಿತ್ತು. ಚಂದ್ರಗುಪ್ತ ಮೌರ್ಯನ ನಂತರವೂ ಈ ಪದ್ಧತಿ ಮುಂದುವರಿದಿತ್ತು.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಹೇಳಿರುವ ಮೂರು ಗ್ರಾಮಗಳ ಮಾದರಿಯಲ್ಲಿಯೇ ಶುಕ್ರಾಚಾರ್ಯನು ತನ್ನ 'ಶುಕ್ರನೀತಿಸಾರ'ದಲ್ಲಿಯೂ ಕುಂಭ, ಪಲ್ಲಿ ಮತ್ತು ಗ್ರಾಮಗಳು ಎಂದು ವಿಂಗಡಿಸಿದ್ದಾನೆ. ಕುಂಭವು ಗಾತ್ರದಲ್ಲಿ ಪಳ್ಳಿಯ ಅರ್ಧದಷ್ಟಾದರೆ, ಪಳ್ಳಿಯು ಗ್ರಾಮದ ಅರ್ಧದಷ್ಟಿರುತ್ತಿತ್ತು. ಗ್ರಾಮಗಳ ಆಡಳಿತ ನಡೆಸುವ ಸಲುವಾಗಿ ಅಧಿಕಾರಿಗಳ ಪಟ್ಟಿಯ ಉಲ್ಲೇಖವೂ ಈ ಗ್ರಂಥದಲ್ಲಿ ಕಂಡುಬರುತ್ತದೆ. ಗ್ರಾಮಮಟ್ಟದ ಅಧಿಕಾರಿಯಾದ 'ಗ್ರಾಮಪ' ಅಥವಾ 'ಗ್ರಾಮನೇತ'ನು ತುಂಬಾ ಪ್ರಭಾವಶಾಲಿಯಾಗಿದ್ದ. ಆತ ಗ್ರಾಮಗಳಲ್ಲಿ ಶಾಂತಿ ಮತ್ತು ಸುರಕ್ಷತೆಯನ್ನು ಕಾಪಾಡುತ್ತಿದ್ದ.

ಭೂ ಒಡೆತನಕ್ಕೆ ಸಂಬಂಧಪಟ್ಟ ಹಾಗೇ ಗ್ರಾಮದ ಜಮೀನು ಇಡೀ ಗ್ರಾಮದ ಸ್ವಾಧೀನವನ್ನು ಪಡೆದಿತ್ತು. ಗ್ರಾಮದ ಜಮೀನನ್ನು ಕೃಷಿಗಾಗಿ ವರ್ಷದಿಂದ ವರ್ಷಕ್ಕೆ ವಿತರಿಸುವ ಕಾರ್ಯವನ್ನು ಮತ್ತು ಅದರ ನಿರ್ವಹಣೆ ಹಾಗೂ ಅರಸೊತ್ತಿಗೆಗೆ ಸಲ್ಲಿಸಬೇಕಾದಂತಹ ತೆರಿಗೆ ಕಾರ್ಯವನ್ನು ಪಂಚಾಯತಿ ಮಾಡುತ್ತಿತ್ತಾದರೂ ಇದು ಗ್ರಾಮ ಅಧಿಕಾರಿಯ ಮೂಲಕವೇ ರಾಜನಿಗೆ ಸಲ್ಲಿಸಬೇಕಾಗಿತ್ತು. ಅವನ ಮೂಲ ಜವಾಬ್ದಾರಿಯೂ ಆಗಿತ್ತು. ಹೀಗೆ ವಸೂಲಾದ ಕಂದಾಯದ ಮೂಲಕವೇ ಇತರ ಅಧಿಕಾರಿಗಳ ಸಂಭಾವನೆಯನ್ನು ಕೊಡಲಾಗುತ್ತಿತ್ತು.

## ೫. ಮಧ್ಯಕಾಲೀನ ಭಾರತದಲ್ಲಿ ಗ್ರಾಮಸಮಾಜ

ಭಾರತದಲ್ಲಿ ಮುಸ್ಲಿಂರ ಆಳ್ವಿಕೆ ೧೧ನೇ ಶತಮಾನದ ವೇಳೆಗೆ ಆರಂಭವಾಯಿತು. ಈ ಅವಧಿಯಲ್ಲಿ ಮುಸ್ಲಿಂ ಆಡಳಿತದ ಕಾಲದವರೆಗೆ ಗ್ರಾಮಗಳ ರಚನೆ ಸಾಮಾನ್ಯವಾಗಿ ಅಬಾಧಿತವಾಗಿಯೇ ಉಳಿದಂತೆ ತೋರುತ್ತದೆ. ಕಂದಾಯ ವಸೂಲಿ ವ್ಯವಸ್ಥೆಯಲ್ಲಿ ಕೆಲವು ಪ್ರಮುಖ ಬದಲಾವಣೆಗಳಾದವು. ಮೊಘಲ್ ದೊರೆ ಅಕ್ಬರನ ಆಳ್ವಿಕೆಯ ಸಮಯದಲ್ಲಿ (೧೫೫೬-೧೬೦೫) ಆಸ್ಥಾನದ ಹಣಕಾಸುಮಂತ್ರಿಯಾಗಿದ್ದ ರಾಜಾತೋಡರಮಲ್ಲನ ಮಾರ್ಗದರ್ಶನದಂತೆ ಮಾಡಿದ ಕಂದಾಯ ನಿಷ್ಕರ್ಷೆಯು ವಿಖ್ಯಾತವಾದುದು. ಈ ಹೊಸ ಕಂದಾಯ ನಿಷ್ಕರ್ಷೆಯು ಯಾವುದೇ ಮೂಲಭೂತ ಬದಲಾವಣೆಯನ್ನುಂಟು ಮಾಡಲಿಲ್ಲ. ಹಾಗೆಯೇ ಭೂ ಒಡೆತನದ ಬಗ್ಗೆಯೂ ಯಾವುದೇ ಹೊಸ ಸಿದ್ಧಾಂತದ ವ್ಯಾಖ್ಯಾನವನ್ನು ಮಂಡಿಸಲಿಲ್ಲ. ಇದು ಕಂದಾಯವನ್ನು ಬೆಳೆಯ ಆಧಾರ ಹಾಗೂ ಮಣ್ಣಿನ ಗುಣದ ಆಧಾರದ ಮೇಲೆ ನಿಶ್ಚಯಪಡಿಸಿತ್ತು. ಅಲ್ಲಿ ಆಕ್ಷೇಪಿಸುವ ಅಥವಾ ಕಾಲಾನುಕಾಲದಿಂದಲೂ ನಡೆದುಬಂದಿದ್ದ ಭೂ ಹಿಡುವಳಿ ಪದ್ಧತಿಗಳನ್ನು ಬದಲಾಯಿಸುವ ಯಾವ ಉದ್ದೇಶವೂ ತೋರಿಲ್ಲವೆಂಬುದು ನಿಚ್ಚಳವಾಗಿಯೇ ಕಾಣಸಿಗುತ್ತದೆ. ಕಂದಾಯ ಪದ್ಧತಿಯು ಅದೇ ಹಳೆಯ ದೇಶೀಯ ರೀತಿಯಲ್ಲಿ ಮುಂದುವರೆಯಿತು. ಹೊಸ ಹೆಸರಿನ ಬಳಕೆಯಾಗಿತ್ತೇ

(ಜಮೀನ್ದಾರಿ, ಖಾಲ್ಸಾ, ಮಿರಾಸಿ) ಹೊರತು ಮುಸ್ಲಿಂರ ಕರ ಅಥವಾ ಸೋತವರ ಮೇಲೆ ಹೇರಲಾಗಿದ್ದ ಖಿರಾಜಿನ ಕಾನೂನು ಸಿದ್ಧಾಂತಗಳಿಂದ ಇದು ಬಂಧಿತವಾಗಿರಲಿಲ್ಲ. (ಗ್ರಾಮಸಮಾಜ, ಡಾ. ಜೋಗನ್ ಶಂಕರ್, ಚೇತನ ಪ್ರಕಾಶನ, ಮೈಸೂರು, ೧೯೯೫, ಪು. ೨೫)

ಒಟ್ಟಿನಲ್ಲಿ ಸೋತ ಸಮುದಾಯಗಳ ಸಮಸ್ತಭೂಮಿಗೆ ಗೆದ್ದವನೆ ಒಡೆಯನಾಗಿ, ಸ್ಥಳೀಯ ರೈತರು - ಕೃಷಿಕರು ಅವನ ಗೇಣಿದಾರರು ಮಾತ್ರವಾಗಿರುವ ಈ ತತ್ವವು ಬಹುಶಃ ಮುಸ್ಲಿಂ ಆಕ್ರಮಣಕಾರರಿಂದಲೇ ಹುಟ್ಟಿದ್ದು ಎಂದು ಹೇಳಲಾಗುತ್ತದೆ. 'ಸೋತವರ ಸ್ವತ್ತು ಗೆದ್ದವರ ಹಕ್ಕು' ಎಂಬ ಮುಸ್ಲಿಂ ಸಿದ್ಧಾಂತದಿಂದ ಹಕ್ಕಿನ ಪ್ರಶ್ನೆಯು ವಿಶೇಷ ಸ್ಫೂರ್ತಿಯನ್ನು ಪಡೆಯಿತು. ಹೀಗಾಗಿ ಹೊಸ ಪ್ರದೇಶವನ್ನು ಗೆದ್ದಾಗ ಮೊಘಲ್ ದೊರೆಗಳು ಆ ಪ್ರದೇಶಕ್ಕೆ ತಾವೇ ಒಡೆಯರೆಂದು ಸಾರಿ ಅಲ್ಲಿ ತಮ್ಮ ಉಪ - ಅಧಿಕಾರಿಗಳನ್ನು ಕಂದಾಯ ರೈತರೆಂಬುದಾಗಿ ನೇಮಿಸುತ್ತಿದ್ದರು. ಈ ಹೊಸ ಹುದ್ದೆಯ ಪರಿಚಯಿಸಿದ ಪರಿಣಾಮವಾಗಿ ಭಾರತದ ಗ್ರಾಮೀಣ ರಚನೆಯ ಮೇಲೆ ದೀರ್ಘಾವಧಿಯ ಪರಿಣಾಮವನ್ನುವುಂಟುಮಾಡಿತ್ತು.

ಅಕ್ಬರನ ಕಾಲದಲ್ಲಿ ಕಂಡಂತಹ, ಆಗಾಗ ಸಂಭವಿಸುತ್ತಿದ್ದ ರಾಜಕೀಯ ಗೊಂದಲಗಳು, ಆಡಳಿತ ಶಿಥಿಲಗೊಳ್ಳಲು ಕಾರಣವಾದಂತೆ, ಕೇಂದ್ರದಲ್ಲಿದ್ದ ಸರಕಾರಿ ಸಂಸ್ಥೆಗಳ ವೈಫಲ್ಯತೆಯಿಂದಾಗಿ ಅಧೀನ ರಾಜರು ಕಾಲಕ್ರಮೇಣ ತಮ್ಮ ಸೈನ್ಯ ಹಾಗೂ ದ್ರವ್ಯಾಡಳಿತವನ್ನು ತಮ್ಮ ಕೈಗೆ ಮರಳಿ ಪಡೆಯಲು ಅನುವು ಮಾಡಿಕೊಟ್ಟಿತು. ಈಗಾಗಲೇ ಪದಚ್ಯುತಿಗೊಂಡಿದ್ದ ಹಿಂದೂ ಅರಸರು ಸಹಜವಾಗಿ ಹಳ್ಳಿಗಳಲ್ಲಿ ತಮ್ಮ ಅಧಿಕಾರವನ್ನು ಪಡೆಯುವುದರೊಂದಿಗೆ ಮೊಘಲ್ ದೊರೆಗಳಿಗೆ ಕಂದಾಯ ಸಂಗ್ರಾಹಕರಾದರು. ಇವರನ್ನು ಚಕ್ರವರ್ತಿಗಳು ಜಮೀನುದಾರರು ಅಥವಾ ತಮ್ಮ ಜಮೀನಿನ ಮೇಲ್ವಿಚಾರಕನ್ನಾಗಿ ಪರಿವರ್ತಿಸಿ ಘೋಷಿಸಿದರು. ಹೀಗೆ ಭಾರತೀಯ ಇತಿಹಾಸದಲ್ಲಿ "ಜಮೀನುದಾರ" ವರ್ಗವೊಂದು ಸೃಷ್ಟಿಯಾಗಲು ಕಾರಣವಾಯಿತು. ಆದರೆ ಉತ್ತರ ಭಾಗದಲ್ಲಿದ್ದಂತಹ ಜಮೀನ್ದಾರಿ ಪದ್ಧತಿಯನ್ನು ದಕ್ಷಿಣಭಾಗದಲ್ಲಿ ಸೃಷ್ಟಿಸುವಲ್ಲಿ ಈ ಸರಕಾರಗಳು ಯಶಸ್ವಿಯಾಗಲಿಲ್ಲ. ಕಾರಣ ಆ ಕಾಲದಲ್ಲಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳು ಹೆಚ್ಚು ಕಡಿಮೆ ಸ್ವತಂತ್ರವಾಗಿದ್ದವು.

ಮುಸ್ಲಿಂ ರಾಜರ ಆಡಳಿತ ಕಾಲದಲ್ಲಿ ರಾಜನೇ ಭೂಮಿಯ ಒಡೆಯನೆಂದು ಸಾರಿದರು. ಹಾಗೂ ಅವರು ನೇಮಕಮಾಡಿದ ಅಧಿಕಾರಿಗಳು ಗ್ರಾಮಗಳಿಗೆ ಹೋಗಿ ಕಪ್ಪಕಾಣಿಕೆ ಕಂದಾಯಗಳ ವಸೂಲಿಗೆ ನಿಂತರು. ಪರಿಣಾಮವಾಗಿ ಕಡೆ ಕಡೆಗೆ ಈ ಅಧಿಕಾರಿಗಳೇ ಗ್ರಾಮಗಳ ಒಡೆಯರಂತೆ ವರ್ತಿಸಿದ್ದರಿಂದ ಅಧೀನರಾಜರು ಮುಸ್ಲಿಂ ಆಳ್ವಿಕೆ ಅಂತ್ಯಗೊಳ್ಳಲು ಪ್ರಮುಖ ಕಾರಣಕರ್ತರಾದರು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು, ಮುಸಲ್ಮಾನ ಆಡಳಿತಗಾರರು ರಾಜಧಾನಿಯ ರಾಜಕೀಯದಲ್ಲಿ ಕೈಹಾಕಿದರೇ ಹೊರತು ಗ್ರಾಮದ ಆಗು - ಹೋಗುಗಳು ಅಥವಾ ಆಡಳಿತದ ಬಗೆಗೆ, ಜನರ - ಜೀವನದ ಬಗೆಗೆ ಗಮನ ಕೊಡಲಿಲ್ಲವೆಂಬುದು. ಮೇಲಾಗಿ ಈ ದೊರೆಗಳು ನಗರೀಕರಣಕ್ಕೆ ವಿಶೇಷ ಮಹತ್ವವನ್ನು ಕೊಡುತ್ತಿದ್ದರು. ಹಾಗಾಗಿ ಮೊಘಲ್ ಸಾಮ್ರಾಟರು ಅನೇಕ ಹೊಸ ನಗರಗಳ ನಿರ್ಮಾಣಕಾರ್ಯದಲ್ಲಿ ತೊಡಗಿದ್ದರು. ಇದರಿಂದಾಗಿ ಅವರ ವ್ಯಾಪಾರ

ವೃದ್ಧಿಯಾದುದಲ್ಲದೇ ಜ್ಞಾನಾರ್ಜನೆಗೆ ಅವಕಾಶವಾಗಿ ಸಾಮಾಜಿಕ ಸಂಪರ್ಕಕ್ಕೆ ಅನುಕೂಲವಾಯಿತು. ಅವರು ಭೋಗ ವಿಲಾಸಿಗಳಾದುದರಿಂದ ವಿಶೇಷ ಸಂಖ್ಯೆಯಲ್ಲಿ ನಗರಗಳಲ್ಲಿಯೇ ವಾಸಮಾಡಲಾರಂಭಿಸಿದರು. ಒಟ್ಟಿನಲ್ಲಿ ನಗರಗಳಲ್ಲಿ ಜಾತೀಯ ಬಿಕ್ಕಟ್ಟು ಸಡಿಲವಾಗಿ ವೃತ್ತಿಗಳ ಮೇಲಿದ್ದ ಸ್ವಾಮ್ಯಗಳು ಕಡಿಮೆಯಾಗಿ ಹಿಂದೂ - ಮುಸ್ಲಿಂರ ಸಾಮಾಜಿಕ ಸಂಪರ್ಕಕ್ಕೆ ಎಡೆಯುಂಟಾಯಿತು. ನಗರಗಳಲ್ಲಿ ಒಂದೇ ಬಗೆಯ ಜೀವನದ ರೀತಿ - ನೀತಿಗಳು ಬೆಳೆದುಬರಲು ಅವಕಾಶ ದೊರೆತಂತಾಗಿತ್ತು. ಸರ್ವಸಮ್ಮತವಾದ ಒಂದೇ ರಾಜನೀತಿಯೂ, ದಂಡನೀತಿಯೂ ಜನರಲ್ಲಿ ಆಚರಣೆಗೆ ಬಂದಿತು.

ಮುಸ್ಲಿಂ ಆಳ್ವಿಕೆಯಲ್ಲಿ ಗ್ರಾಮಸಮಾಜದ ಇರುವಿಕೆ ಕುರಿತು ರಾಧಾಕುಮದ ಮುಕರ್ಜಿಯವರು ಹೀಗೆ ಅಭಿಪ್ರಾಯಪಡುತ್ತಾರೆ. "ಮುಸ್ಲಿಂ ಅರಸರು ರಾಜ್ಯಭಾರ ವಹಿಸಿಕೊಂಡ ಅವಧಿಯಲ್ಲಿ ನಮ್ಮ ದೇಶದಲ್ಲಿನ ಗ್ರಾಮಗಳು ತಮ್ಮ ಸ್ವಾತಂತ್ರ್ಯ ಹಾಗೂ ಸ್ವಾಯತ್ತತೆಗಳನ್ನು ಕಾಪಾಡಿಕೊಂಡಿದ್ದವು. ಹಿಂದಿನ ಆಕ್ರಮಣಗಳಿಗೆ ಹೋಲಿಸಿದರೆ ಮುಸ್ಲಿಂರ ಆಕ್ರಮಣದಿಂದ ಹಳ್ಳಿಗಾಡುಗಳ ಮೇಲೆ ಆದ ಪ್ರಭಾವ ಅತ್ಯಲ್ಪ. ಏಕೆಂದರೆ ಮುಸ್ಲಿಂರು ರಾಜ್ಯಸಿಂಹಾಸನ ಮತ್ತು ರಾಜಧಾನಿಗಳ ಮೇಲೆ ತಮ್ಮ ಆಧಿಪತ್ಯ ಸ್ಥಾಪಿಸಲೋಸುಗ ಮಾತ್ರ ತಮ್ಮ ಹೋರಾಟವನ್ನು ಸೀಮಿತಗೊಳಿಸಿ, ಗ್ರಾಮಜೀನದ ತಂಟೆಗೆ ಹೋಗಲಿಲ್ಲ. ಆದುದರಿಂದ ಮುಸ್ಲಿಂ ರಾಜರ ಆಳ್ವಿಕೆಯ ಕಾಲವನ್ನು 'ಮುಸ್ಲಿಂ - ಅವಧಿ' (Islamic period) ಎಂದು ಇತಿಹಾಸಕಾರರು ವರ್ಣಿಸುವುದು ಸಮಂಜಸವಲ್ಲ. ಏಕೆಂದರೆ ಮುಸ್ಲಿಂ ಆಳ್ವಿಕೆಯ ಕಾಲದಲ್ಲಿಯೂ, ಹಳ್ಳಿಗಾಡುಗಳಲ್ಲಿಯ ಜನಜೀವನವು ಮೊದಲಿದ್ದ ಸನಾತನ ಹಿಂದೂ ಮಾದರಿಯಲ್ಲಿಯೇ ಮುಂದುವರೆಯಿತು. ಆಡಳಿತದಲ್ಲಿ ಅಲ್ಪಸ್ವಲ್ಪ ಮಾರ್ಪಾಟಾದುದು ಆ ಮೇಲೆಯೇ." (ಗ್ರಾಮಸಮಾಜ, ಡಾ. ಜೋಗನ್ ಶಂಕರ್, ಚೇತನ ಪ್ರಕಾಶನ, ಮೈಸೂರು, ೧೯೯೫, ಪು. ೪)

## ೬. ಆಧುನಿಕ ಕಾಲದ ಗ್ರಾಮಸಮಾಜ ಅಥವಾ ವಸಾಹತುಶಾಹಿ ಗ್ರಾಮಸಮಾಜ

ಭಾರತಕ್ಕೆ ಬ್ರಿಟೀಷರ ವಸಾಹತು ಆಡಳಿತ ಯಂತ್ರದ ಮೂಲಕ ಆರಂಭವಾಗಿ ಇಲ್ಲಿನ ಸ್ಥಳೀಯರನ್ನು ತನ್ನ ಕಪಿಮುಷ್ಠಿಯಲ್ಲಿ ಗುಲಾಮರನ್ನಾಗಿಸಿದ್ದು, ಇಂಗ್ಲೀಷ್ ಶಿಕ್ಷಣದ ಮೂಲಕ ಅದೇ ಆಡಳಿತವು ಬಿಡುಗಡೆಗೊಳಿಸಿದ್ದನ್ನು ಭಾರತೀಯ ಸಂದರ್ಭದಲ್ಲಿ ಜೊತೆಜೊತೆಯಲ್ಲಿ ನೋಡಬೇಕಾಗುತ್ತದೆ. ವಸಾಹತುಶಾಹಿ ಆಡಳಿತದ ಅನುಭವವನ್ನು ಅನುಭವಿಸಿದ ವಿಶ್ವದ ಯಾವುದೇ ರಾಷ್ಟ್ರಗಳಿಗೆ ಈ ಹೇಳಿಕೆ ಅನ್ವಯಿಸುತ್ತದೆ. ದಕ್ಷಿಣ ಆಫ್ರಿಕಾದಲ್ಲಿ ಹೆಚ್ಚುಕಡಿಮೆ ಇದೇ ಸ್ವರೂಪವನ್ನು ಕಾಣಬಹುದು. ಪುರೋಹಿತಶಾಹಿ ಹಿಂಸೆಗಳಿಂದ ಕೆಳಜಾತಿ, ವರ್ಗ, ಮಹಿಳೆಯರನ್ನು ಪಾರುಮಾಡುವ, ಬಿಡುಗಡೆಗೊಳಿಸುವ ಹಾಗೂ ಅವರಲ್ಲಿ ಆತ್ಮಸ್ಥೈರ್ಯ ವನ್ನುಂಟುಮಾಡುವ ಏಕೈಕ ಮಾರ್ಗವೆಂದರೆ ಆ ಕಾಲದಲ್ಲಿ ಇಂಗ್ಲೀಷ್ ಶಿಕ್ಷಣವಾಗಿತ್ತು. ಈ ಬಗೆಯ ಶಿಕ್ಷಣ ಭಾರತೀಯ ಸಮಾಜದಲ್ಲಿ ಹಲವು ಬಗೆಯ ಸಂಘರ್ಷಗಳನ್ನು ಹುಟ್ಟುಹಾಕಿತು. ಭಾರತದ ಪಾರಂಪರಿಕ ಸಮಾಜದ ಸಾಮಾಜಿಕ ಸಮಸ್ಯೆಗಳಾದ ಜಮೀನ್ದಾರಿ ವ್ಯವಸ್ಥೆ, ಅಸ್ಪೃಶ್ಯತೆ, ಜೀತಪದ್ಧತಿ, ಜಾತಿವ್ಯವಸ್ಥೆ,

ಬಾಲ್ಯವಿವಾಹದಂತ ಅನಿಷ್ಟ ಪದ್ಧತಿಗಳ ಅಮಾನವೀಯತೆಯ ವಿರುದ್ಧ ಮಾತನಾಡುವ ಶಕ್ತಿಯನ್ನು ನೀಡಿತು. ಶಿಕ್ಷಣವು ಒಂದು ಜಾತಿವರ್ಗಕ್ಕೆ ಸೀಮಿತವಾಗಿದ್ದ ಕಾಲ ಬದಲಾಗಿ ಅದು ಸಾರ್ವತ್ರಿಕತೆಯನ್ನು ಪಡೆಯಿತು. ಹೀಗಾಗಿ ಗ್ರಾಮಸಮಾಜದಲ್ಲಿನ ಸ್ಥಿತ್ಯಂತರ ಹಾಗೂ ಬದಲಾವಣೆಗಳಿಗೆ ಶಿಕ್ಷಣ ಪರಿಣಾಮಕಾರಿಯಾಗಿ ಅಲ್ಲದಿದ್ದರೂ ಕೆಲ ಬದಲಾವಣೆಗಳನ್ನು ತಂದಿತ್ತೆನ್ನುವುದು ನಿಜ.

ವಸಾಹತು ಶಿಕ್ಷಣ ತಂದ ಆಧುನಿಕತೆ ಹಾಗೂ ಬದಲಾವಣೆಯ ಪ್ರಕ್ರಿಯೆಗಳಿಗೆ ಗ್ರಾಮಸಮಾಜ ಮುಖಾಮುಖಿಯಾಯಿತು. ಇದರಿಂದ ಉಂಟಾದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ, ವ್ಯೆಯಕ್ತಿಕ ಹೊಸ ಚಿಂತನೆಗಳು ತಳೆದ ಭಿನ್ನ ಧೋರಣೆಗಳು ಸಮಾಜದಲ್ಲಿ ಘಟಿಸಿದ ಸ್ಥಿತ್ಯಂತರಗಳನ್ನು ಕೆಲ ವಿದ್ವಾಂಸರ ಬರಹಗಳಲ್ಲಿ ಕಾಣಬಹುದಾಗಿತ್ತು. ಬ್ರಿಟೀಷರೊಂದಿಗೆ ಬಂದ ಆಧುನಿಕತೆ, ಶಿಕ್ಷಣ, ಸಂಪ್ರದಾಯ ಸಮಾಜಕ್ಕೆ ಕಂಟಕವಾಗಿ ಪರಿಣಮಿಸಿದಂತೆ, ಭಾರತದಲ್ಲಿ ನವಸಮಾಜದ ಉದಯಕ್ಕೆ ನಾಂದಿಯಾಯಿತು. ಆಧುನಿಕತೆ ತಂದ ಸವಲತ್ತುಗಳಿಗೆ ಗ್ರಾಮಸಮಾಜದಿಂದ ಮುಖಾಮುಖಿಯಾದಾಗ ಒಂದು ಬಗೆಯ ತಲ್ಲಣಗಳಿಗೆ, ಕುತೂಹಲಕ್ಕೆ ಗ್ರಾಮಸಮಾಜ ಒಳಗಾಯಿತು.

ಭಾರತೀಯರನ್ನು ಕ್ರೈಸ್ತಧರ್ಮಕ್ಕೆ ಮತಾಂತರಗೊಳಿಸುವ ಉದ್ದೇಶದಿಂದ ಬ್ರಿಟೀಷರು ಶಿಕ್ಷಣವನ್ನು ಜಾರಿಗೆ ತಂದರು. ಈ ಶಿಕ್ಷಣ ಗ್ರಾಮಸಮಾಜದಲ್ಲಿ ಹಲವು ಬಗೆಯ ಸಾಂಸ್ಕೃತಿಕ ಸಂಘರ್ಷಗಳಿಗೆ ಕಾರಣವಾಯಿತು. ಉದಾ : ಅಕ್ಷರಸ್ಥ ವರ್ಗ ತಂದೆ, ತಾಯಿ, ಬಂಧು, ಬಾಂಧವರನ್ನು ತಾವು ಹುಟ್ಟಿ ಬೆಳೆದ ಪ್ರದೇಶ, ಪರಿಸರದಿಂದ ದೂರಮಾಡಿತು. ಎಷ್ಟೋ ಅವಿಭಕ್ತ ಕುಟುಂಬಗಳು ಗ್ರಾಮಗಳಲ್ಲಿ ವಿಭಜನೆಯಾಗಿ ಬೇರೆ ಬೇರೆ ಕುಟುಂಬಗಳಾಗಿ ಜೀವಿಸತೊಡಗಿದ್ದವು. ಇಲ್ಲಿ ನಗರಗಳಿಗೆ ಉದ್ಯೋಗ ಅರಸಿ ವಲಸೆ ಹೊರಟರು. ಇದು ಗ್ರಾಮೀಣ ಅಭಿವೃದ್ಧಿಯಲ್ಲಿನ ಒಂದು ಗಂಭೀರ ತೊಡಕಾಗಿದೆ. ಹಾಗೆಯೇ ಇನ್ನೂ ಕೆಲವು ತಾತ್ವಿಕ - ವೈಚಾರಿಕ ಗೊಂದಲಗಳು ಗ್ರಾಮಸಮಾಜವನ್ನು ಬಹುವಾಗಿ ಬಾಧಿಸುತ್ತಿವೆ.

ಬ್ರಿಟಿಷರ ಆಧುನಿಕತೆಯಿಂದಾಗಿ ಕೇಂದ್ರೀಕೃತ ಆಡಳಿತದ ಪರಿಣಾಮದಿಂದಾಗಿ ಭಾರತದ ಪರಂಪರಾನುಗತ ಪಂಚಾಯತಿಗಳಿಗೆ - ಗ್ರಾಮಸಮಾಜ ಸಮಿತಿಗೆ ಹಿನ್ನಡೆಯುಂಟಾಯಿತು. ಗ್ರಾಮಪಂಚಾಯತಿಗಳ ಆಡಳಿತ ನೋಡಿಕೊಳ್ಳಲು ಪಟೇಲ, ಶಾನುಭೋಗ, ತೋಟಿ, ತಳವಾರ ಮುಂತಾದ ಹೊಸ ಗ್ರಾಮ ನೌಕರರ ಹುದ್ದೆಗಳು ನಿರ್ಮಾಣವಾದವು. ಆಡಳಿತ ಕೇಂದ್ರೀಕೃತವಾದ ಮೇಲೆ ನ್ಯಾಯಾಂಗ, ಪೋಲೀಸು ಸಂಸ್ಥೆಗಳು ಗ್ರಾಮಸ್ಥರ ವ್ಯವಹಾರಗಳ ಮೇಲ್ವಿಚಾರಣೆಗೆ ಏರ್ಪಾಡಾದವು. ಇದರಿಂದ ಗ್ರಾಮಪಂಚಾಯತಿಗಳ ಪ್ರಾಮುಖ್ಯ ಕಡಿಮೆಯಾಗಿ, ಅವು ಸ್ವಯಂ ಆಡಳಿತದ ಹಕ್ಕನ್ನು ಕಳೆದುಕೊಂಡಿದ್ದರಿಂದ ಜನರಲ್ಲಿ ದಾಸ್ಯಮನೋಭಾವ ಬಲವಾಗಿ ಬೇರೂರಲು ಕಾರಣವಾಯಿತು. ಈ ರಾಜಕೀಯ ದಾಸ್ಯ ಪ್ರವೃತ್ತಿ ಆರ್ಥಿಕ ಶೋಷಣೆಗೆ ದಾರಿಮಾಡಿಕೊಟ್ಟಿತು. ಗ್ರಾಮದ ಕೈಕಸುಬುಗಳಿಗೆ ಪ್ರೋತ್ಸಾಹ ದೊರಕದಾಯಿತು. ಹಿಂದಿನಿಂದಲೂ ಕೈ ಕಸುಬುಗಳಿಂದ ಬದುಕುತ್ತಿದ್ದ ಜನ ನಿರುದ್ಯೋಗಿಗಳಾದರು. ಭಾರತೀಯ ಗ್ರಾಮಸಮಾಜದವರು ಉತ್ಪಾದಿಸಿದ ಕಚ್ಚಾವಸ್ತುಗಳನ್ನು ಖರೀದಿಸಿದ

ಬ್ರಿಟೀಷರು ತಮ್ಮ ಸಿದ್ಧಮಾದರಿಯ ವಸ್ತುಗಳನ್ನು ದುಬಾರಿ ಬೆಲೆಗೆ ಮಾರತೊಡಗಿದರು. ಇದರ ಪರಿಣಾಮವಾಗಿ ಹಳ್ಳಿಗಳ ಜನ ಇನ್ನೂ ದರಿದ್ರರಾದರು. ಬ್ರಿಟೀಷರ ಕುಟಿಲ ನೀತಿಯಿಂದಾಗಿ ಗ್ರಾಮದ ಸಂಪತ್ತು ಸಂಪೂರ್ಣವಾಗಿ ಬೂದಿಯಾಗತೊಡಗಿತು. ಬೊಕ್ಕಸ ಬರಿದಾಯಿತು. ಗ್ರಾಮಾಂತರ ಪ್ರದೇಶಗಳು ಅದೇ ಮೊಟ್ಟಮೊದಲಬಾರಿಗೆ ಕ್ಷಾಮ - ಡಾಮರಗಳಿಗೆ ತುತ್ತಾದವು.

## ೭. ಗಾಂಧೀಜಿಯವರ ಗ್ರಾಮಸ್ವರಾಜ್ಯ ಅಥವಾ ಗ್ರಾಮಸಮಾಜ

ಬಹುಸಂಸ್ಕೃತಿಯ ದೇಶವಾದ ಭಾರತದ ಸಂಕೀರ್ಣ ಸ್ವರೂಪದ ಬಗ್ಗೆ ಗಾಂಧೀಜಿಯವರು ಬಹುವಾಗಿ ಚಿಂತಿಸಿದವರು. ದೇಶದ ಸರ್ವಾಂಗೀಣ ಅಭಿವೃದ್ಧಿ ಹಳ್ಳಿಗಳ ಉದ್ಧಾರದಲ್ಲಿದೆ ಎಂದು ಮನಗಂಡ ಅವರು ಜನತಾ ಸ್ವರಾಜ್ಯವನ್ನು ಕಟ್ಟುವಲ್ಲಿ ಹೆಚ್ಚು ಶ್ರಮ ವಹಿಸಿದರು. ಭಾರತವೆಂದರೆ ಗ್ರಾಮರಾಜ್ಯ ಎಂಬುದು ಅವರ ಅಭಿಮತವಾಗಿತ್ತು. ಆದರ್ಶವೂ ಗುರಿಯೂ ಅವರದಾಗಿತ್ತು. ಬಾಪೂಜಿಯವರ ಕಲ್ಪನೆಯ ರಾಮರಾಜ್ಯವೆಂದರೆ ಗ್ರಾಮಸ್ವರಾಜ್ಯವೇ ಆಗಿತ್ತು. ಅಂತೆಯೇ ಗಾಂಧೀಜಿಯವರು ಆದರ್ಶವಾದಿ ರಾಮರಾಜ್ಯದ ಅರ್ಥವನ್ನು ಹೀಗೆಂದಿದ್ದಾರೆ - "ರಾಮರಾಜ್ಯವೆಂದರೆ ಹಿಂದೂ ರಾಜ್ಯವಲ್ಲ, ದೇವರ ರಾಜ್ಯ. ಇಲ್ಲಿ ರಾಮ ರಹೀಮ ಎಲ್ಲರೂ ಒಂದೇ. ಮಾನವರನ್ನು ಬೆಸೆಯುವುದೇ ಧರ್ಮದ ಗುರಿ. ನನ್ನ ಕನಸಿನ ಭಾರತ ಹಿಂದುತ್ವ ಒಂದೇ ಬೆಳೆಯುವ ಅಥವಾ ಇಸ್ಲಾಂ ಒಂದೇ ಬೆಳೆಯುವ ಭಾರತದಲ್ಲಿ. ಎಲ್ಲಾ ಮತಧರ್ಮಗಳು ತಾಳ್ಮೆಯಿಂದ ಸೌಹಾರ್ದಯುತವಾಗಿ ಬೆಳೆಯುವಂತಹ, ಬಾಳುವಂತಹ ಭಾರತ." (ಗಾಂಧಿ ಭಾಷಣಗಳು ಭಾಗ ೨, ಪು. ೨.೩)

ಗಾಂಧೀಜಿಯ ಗ್ರಾಮಸ್ವರಾಜ್ಯದ ತಾತ್ವಿಕ ಹಿನ್ನೆಲೆಯ ಮೂಲ ಸೆಲೆ ಸರ್ವೋದಯ. ಗಾಂಧೀಜಿಯವರು ರಸ್ಕಿನ್ ಅವರ *ಅನ್‌ಟು ದಿಸ್ ಲಾಸ್ಟ್* (Unto this last) ಕೃತಿಯ ಪ್ರಭಾವಕ್ಕೊಳಗಾಗಿ ಈ ವಿಚಾರವನ್ನು ಹುಟ್ಟು ಹಾಕಿದರು. ಸರ್ವೋದಯ ಎಂಬುದು ವಿಶಾಲ ಅರ್ಥವನ್ನು ಸೂಚಿಸುತ್ತದೆ. ಸರ್ವೋದಯ ಸಮಾಜದಲ್ಲಿ ಪ್ರತಿಯೊಬ್ಬ ಪ್ರಜೆಯೂ ಕೂಡ ಸೇವಕ ಮತ್ತು ಸರ್ವಾಧಿಕಾರಿಯೂ ಆಗಿರುತ್ತಾನೆ. ಇದರ ತಳಹದಿ ಸತ್ಯ ಮತ್ತು ಅಹಿಂಸೆ ಇಲ್ಲಿ ಸ್ವಾರ್ಥಕ್ಕೆ ಅವಕಾಶವಿಲ್ಲ. ಸೋಮಾರಿಗಳಾಗಲು ಸಾಧ್ಯತೆಯಿಲ್ಲ. ತನ್ನ ದೈಹಿಕ ಶ್ರಮದಿಂದ ಪ್ರತಿಯೊಬ್ಬನು ಆಹಾರವನ್ನು ಪಡೆದುಕೊಳ್ಳಬೇಕು. ಜಾತಿ, ವರ್ಗ, ಲಿಂಗ ಇಲ್ಲಿ ಅಮುಖ್ಯ. ಖಾದಿಯ ಪ್ರಚಾರ ಮತ್ತು ಬಳಕೆ ವ್ಯಕ್ತಿಯನ್ನು ಸ್ವಾವಲಂಬಿಯಾಗಿಸುತ್ತದೆ. ಗ್ರಾಮೀಣ ಗುಡಿಕೈಗಾರಿಕೆಗಳ ಅಭಿವೃದ್ಧಿ, ಮೂಲಶಿಕ್ಷಣ, ಆದಿವಾಸಿಗಳ ಕಲ್ಯಾಣ, ಸ್ತ್ರೀ - ಪುರುಷರ ಸಮಾನ ಹಕ್ಕು, ಸಹಕಾರತತ್ವ ಇವು ಗಾಂಧೀಜಿಯವರು ಹಾಕಿಕೊಟ್ಟ ಸೂತ್ರಗಳು.

ಗಾಂಧೀಜಿಯ ಚಿಂತನೆಗಳಲ್ಲಿ 'ವಿಕೇಂದ್ರೀಕರಣವೂ' ಒಂದು. ಕೇಂದ್ರೀಕೃತ ಅಧಿಕಾರವನ್ನು ಅವರು ವಿರೋಧಿಸುತ್ತಿದ್ದರು. ಅಧಿಕಾರ ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಸ್ಥಾಪಿತಗೊಂಡರೆ ಅಲ್ಲಿ ಭ್ರಷ್ಟಾಚಾರ

ಹೆಚ್ಚಿ ಹಳ್ಳಿಗಳ ಉದ್ಧಾರ ಕನಸಿನ ಮಾತಾಗುತ್ತದೆ. ಇವರ ಚಿಂತನೆಯ 'ವಿಕೇಂದ್ರೀಕರಣ'ದಲ್ಲಿ ರಾಜಕೀಯ ಪಕ್ಷಗಳಿಗೆ, ಚುನಾವಣೆಗಳಿಗೆ ಹೊಡೆದಾಟ, ಕಚ್ಚಾಟಗಳಿಗೆ ಅವಕಾಶವಿರುವುದಿಲ್ಲ. ಇವರ ನಂತರದ ದಿನಗಳಲ್ಲಿ ಸರ್ವೋದಯದ ಸಮಾಜಕ್ಕೆ ದುಡಿದವರಲ್ಲಿ ವಿನೋಭಾಬಾವೆ, ಜಯಪ್ರಕಾಶ್ ನಾರಾಯಣ ಪ್ರಮುಖರು.

ಗಾಂಧೀಜಿಯವರ ಗ್ರಾಮಸ್ವರಾಜ್ಯದ ಬಗ್ಗೆ ಡಾ.ಅಂಬೇಡ್ಕರ್ ವಿರುದ್ಧವಾಗಿ ಚಿಂತನೆಗಳನ್ನು ಮಂಡಿಸುತ್ತಾರೆ. ಈರ್ವರ ಭಿನ್ನತೆ ವಿಚಾರಗಳಿಗೆ ಐತಿಹಾಸಿಕ ಸತ್ಯಗಳು ಕಾರಣವಾಗಿವೆ. ಅಂಬೇಡ್ಕರ್ ಹುಟ್ಟಿಬಂದ ಸಾಂಸ್ಕೃತಿಕ - ಸಾಮಾಜಿಕ ಪರಿಸರವೇ ಗಾಂಧಿ ಮತ್ತು ಸಮಾಜವಾದಿಗಳ ವಿರುದ್ಧದ ಚಿಂತನೆಗೆ ಕಾರಣವಾಗಿದೆ. ಅಂಬೇಡ್ಕರ್ 'ಗ್ರಾಮಸ್ವರಾಜ್ಯ'ವನ್ನು ವಿಕೇಂದ್ರೀಕರಣವನ್ನು ಪ್ರಮುಖವಾಗಿ ವಿರೋಧಿಸುತ್ತಾರೆ. ಈ ಗ್ರಾಮಸ್ವರಾಜ್ಯವೇ, ಹಿಂದೆ ಭಾರತವನ್ನು ಹಾಳುಗೆಡವಿದ್ದು, ಗ್ರಾಮವೆಂದರೇನು? ಸಂಕುಚಿತ ಪ್ರಾಂತೀಯತೆಯ ತವರು. ಮೌಢ್ಯ, ಸಣ್ಣತನ ಮತ್ತು ಜಾತ್ಯಂಧತೆಯಿಂದ ಕೂಡಿದ ಗೂಡು (ಡಾ.ಅರವಿಂದ ಮಾಲಗತ್ತಿ, ಸಂ, ಡಾ.ಅಂಬೇಡ್ಕರ್ ವಿಚಾರಧಾರೆ, ಪು. ೧೦, ೧೯೯೧). ಈ ಮಾತುಗಳಲ್ಲಿ ವಾಸ್ತಾವಾಂಶವಿಲ್ಲದಿಲ್ಲ. ಏಕೆಂದರೆ ಭಾರತೀಯ ಸಾಮಾಜಿಕ ವ್ಯವಸ್ಥೇ ಏಣಿಶ್ರೇಣಿ ಹೊಂದಿದ್ದು ಜಾತಿಯಾಧಾರಿತ ಅಸಮಾನತೆ, ಅಮಾನವೀಯವಾಗಿ ದುಡಿಸಿಕೊಳ್ಳುವ ಸ್ಥಿತಿ ಅಂಬೇಡ್ಕರ್‌ರಿಗೆ ಈ ಮಾತು ಹೇಳಲು ಸಾಧ್ಯವಾಗಿದೆ. ವಿಕೇಂದ್ರೀಕರಣ ವ್ಯವಸ್ಥೆ ಮೇಲುವರ್ಗದವರಿಗೆ ಉನ್ನತ ಸ್ಥಾನಗಳನ್ನು ಈಗಾಗಲೇ ಗ್ರಾಮೀಣ ಸಮಾಜದಲ್ಲಿ ಕಲ್ಪಿಸಿಕೊಟ್ಟಿದೆ. ಮೀಸಲಾತಿಯಡಿ 'ಸಶಕ್ತೀಕರಣದ' ಪರಿಕಲ್ಪನೆಯ ನಿಟ್ಟಿನಲ್ಲಿ ತಳಮಟ್ಟದವರಿಗೆ ಪ್ರಾಶಸ್ತ್ಯ ಕೊಡಬೇಕೆನ್ನುವ ದೃಷ್ಟಿಯಿಂದ ಮಹಿಳೆಯರಿಗೆ, ಕೆಳವರ್ಗದವರಿಗೆ ಅವಕಾಶ ಕಲ್ಪಿಸಿಕೊಟ್ಟರೂ ಆಕೆಯ ಗಂಡ ಹಾಗೂ ಮೇಲ್ವರ್ಗದವರ ಹಿತಾಸಕ್ತಿಗೆ, ಅವರ ಮೂಗಿನ ನೇರಕ್ಕೆ ಮಾತ್ರ ಆಡಳಿತ ನಡೆಸಬೇಕಾಗಿದೆ ಹಾಗಾಗಿ ಆಕೆ ಕೇವಲ ಅಧ್ಯಕ್ಷೆ, ಸದಸ್ಯರಾಗಿ ಅಷ್ಟಕ್ಕೆ ತೃಪ್ತಿ ಪಡೆದುಕೊಳ್ಳಬೇಕಾಗಿದೆ. ಇದು ಈಗಿನ ವಾಸ್ತವ ಸಂಗತಿ.

## ೮. ಸ್ವಾತಂತ್ರ್ಯಾನಂತರದ ಗ್ರಾಮಸಮಾಜ

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಗ್ರಾಮೀಣಾಭಿವೃದ್ಧಿಯ ಮಹತ್ವವನ್ನು ಮನಗಂಡರು. ಅದಕ್ಕಾಗಿ ಎರಡೂ ಸರಕಾರಗಳು ಗ್ರಾಮಸಮಾಜಾಭಿವೃದ್ಧಿಗೆ ಹೆಚ್ಚಿನ ಒತ್ತು ನೀಡಲಾರಂಭಿಸಿದವು. ಆಗಿನ ಪ್ರಥಮ ಪ್ರಧಾನಿ ಪಂಡಿತ್ ಜವಾಹರಲಾಲ್ ನೆಹರುರವರು ಭಾರತದ ಅಭಿವೃದ್ಧಿಗೆ ಬೃಹತ್ ಕೈಗಾರಿಕೆಗಳು, ಅಣೆಕಟ್ಟುಗಳು, ನಗರಗಳೇ ಅಗತ್ಯವೆಂದು ಭಾವಿಸಿದ್ದರು. ಆ ನಂತರದಲ್ಲಿ ನೆಹರೂರವರಿಗೆ ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕಲ್ಪನೆ ಹಾಗೂ ಭಾರತದ ಪ್ರಗತಿ ಹಳ್ಳಿಗಳ ಉದ್ಧಾರದಲ್ಲಡಗಿದೆ ಎಂಬುದು ಮನವರಿಕೆಯಾಯಿತು. ಸೈದ್ಧಾಂತಿಕವಾಗಿ, ತಾತ್ವಿಕವಾಗಿ ಗಾಂಧೀ ಮತ್ತು ನೆಹರುರವರ ವಿಚಾರಗಳು ಈ ವಿಷಯದಲ್ಲಿ ವ್ಯತಿರಿಕ್ತವಾಗಿದ್ದರೂ ಈರ್ವರ ಉದ್ದೇಶವೂ ಒಂದೇ ಆಗಿತ್ತು. ಅದೆಂದರೆ ಗ್ರಾಮಾಭಿವೃದ್ಧಿಯಿಂದಲೇ ದೇಶದ ಅಭಿವೃದ್ಧಿ ಸಾಧ್ಯ ಎನ್ನುವುದು. ಹಿಂದಿನ ಬ್ರಿಟಿಷ್ ಆಡಳಿತ ಕೇಂದ್ರೀಕೃತ ಸರಕಾರವನ್ನೇ ನೆಚ್ಚಿ ಪೋಷಿಸಿದ್ದರ ಪರಿಣಾಮವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಆಡಳಿತ

ಸಂಸ್ಥೆಗಳಿದ್ದರೂ ಕೂಡ ಅವುಗಳಿಗೆ ಹೆಚ್ಚಿನ ಸ್ವಾಯತ್ತತೆಯಾಗಲೀ, ಅಧಿಕಾರಗಳಾಗಲೀ ಇಲ್ಲದೆ ಶಿಥಿಲಾವಸ್ಥೆಗೆ ಇಳಿದಿದ್ದವು.

ವೈವಿಧ್ಯತೆಯಿಂದ ಕೂಡಿದ ಗ್ರಾಮೀಣ ಭಾರತದಲ್ಲಿ ಅಸಂಖ್ಯಾತ ಸಮಸ್ಯೆಗಳು ಆರಂಭದಿಂದಲೂ ಇವೆ. ಹಾಗೂ ಅಷ್ಟೇ ವಿಧದಲ್ಲಿ ಅಲಕ್ಷಿಸಲ್ಪಟ್ಟಿವೆ. ಒಟ್ಟು ರಾಷ್ಟ್ರ ಕೇಂದ್ರೀಕೃತ ಆಡಳಿತದಿಂದ ಜನಸಾಮಾನ್ಯನ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲಾಗದೆಂಬ ವಾಸ್ತವ ಸತ್ಯವನ್ನು ಅರಿತ ಸರಕಾರಗಳು ಗ್ರಾಮಗಳ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ಹಮ್ಮಿಕೊಂಡು ಜಾರಿಗೊಳಿಸಿದವು. ಈ ದಿಶೆಯಲ್ಲಿ ನೆಹರೂರವರ ಆಡಳಿತಾವಧಿಯಲ್ಲಿ ಕೈಗೊಂಡ ಪಂಚವಾರ್ಷಿಕ ಯೋಜನೆಗಳದ್ದು ಒಂದು ಮಹತ್ತರ ಕೊಡುಗೆಯೇ ಸರಿ. ಗ್ರಾಮೀಣ ಅಭಿವೃದ್ಧಿಗೆ ಈ ಹೊತ್ತಿನವರೆಗೂ ರೂಪಿಸಲಾದ ಯೋಜನೆಗಳನ್ನು (ಕೇಂದ್ರ ಮತ್ತು ರಾಜ್ಯ ಸರಕಾರಗಳೆರಡೂ) ಹೀಗೆ ಗುರುತಿಸಬಹುದು. ಕೃಷಿಯ ಅಭಿವೃದ್ಧಿ, ಭೂಸುಧಾರಣೆ, ಗ್ರಾಮೀಣ ಗೃಹನಿರ್ಮಾಣ, ಕುಡಿಯುವ ನೀರು, ಖಾದಿ, ಗ್ರಾಮ ಮತ್ತು ಗುಡಿಕೈಗಾರಿಕೆಗಳ ತರಬೇತಿ, ಬಡತನ ನಿವಾರಣಾ ಕಾರ್ಯಕ್ರಮ, (ಗರೀಬಿ ಹಟಾವೋ) ಪ್ರಾಥಮಿಕ ಶಿಕ್ಷಣ, ಕಡ್ಡಾಯ ಶಿಕ್ಷಣ, ಉಚಿತಶಿಕ್ಷಣ, ಗ್ರಂಥಾಲಯಗಳು, ವಯಸ್ಕರ ಮತ್ತು ಅನೌಪಚಾರಿಕ ಶಿಕ್ಷಣ, ತಾಂತ್ರಿಕತೆಯ ತರಬೇತಿ, ವೃತ್ತಿಶಿಕ್ಷಣ, ನಿರಂತರಶಿಕ್ಷಣ, ಸಾಂಸ್ಕೃತಿಕ ಚಟುವಟಿಕೆಗಳು, ಅವುಗಳ ಪೋಷಣೆ, ಗ್ರಾಮ ನೈರ್ಮಲ್ಯ, ಆರೋಗ್ಯ ಆಸ್ಪತ್ರೆಗಳ ನಿರ್ಮಾಣ, ಕುಟುಂಬ ಕಲ್ಯಾಣಯೋಜನೆ, ನ್ಯಾಯಬೆಲೆ ಅಂಗಡಿ ಯೋಜನೆ, ಮಹಿಳಾ-ಮಕ್ಕಳ ಯೋಜನೆ, ನಿರ್ಮಲ ಕರ್ನಾಟಕ ಯೋಜನೆ, ಸ್ವಚ್ಛ ಗ್ರಾಮಯೋಜನೆ, ಪ್ರಧಾನಮಂತ್ರಿಗಳ ಗ್ರಾಮ ಸಡಕ್ ಯೋಜನೆ, ಗ್ರಾಮೀಣ ವಿದ್ಯಾರ್ಥಿಗಳಿಗೆ ಕೃಪಾಂಕಯೋಜನೆ, ಉದ್ಯೋಗದಲ್ಲಿ ಗ್ರಾಮೀಣ ಅಭ್ಯರ್ಥಿಗಳಿಗೆ ಮೀಸಲಾತಿ, ಸ್ತ್ರೀಶಕ್ತಿ ಯೋಜನೆ ಇತ್ಯಾದಿ ಯೋಜನೆಗಳು ಗ್ರಾಮೀಣ ಜನರ ಬದುಕು ಹಸನಗೊಳಿಸಲು, ಸುಧಾರಣೆಗಾಗಿಯೇ ಯೋಜಿಸಲಾದ ಕಾರ್ಯಕ್ರಮಗಳು.

ಸ್ವಾತಂತ್ರ್ಯಾನಂತರ ರಾಷ್ಟ್ರದ ಆಡಳಿತ ಅಭಿವೃದ್ಧಿಯಲ್ಲಿ ಗ್ರಾಮೀಣ ಅಭಿವೃದ್ಧಿಯನ್ನು ನೆಲೆಯಾಗಿಟ್ಟುಕೊಂಡು ಹೆಚ್ಚು ಪ್ರಚಲಿತಗೊಂಡಿದ್ದು 'ವಿಕೇಂದ್ರೀಕರಣದ' ಪರಿಕಲ್ಪನೆ. ಇದರೊಟ್ಟಿಗೆ ಸುದ್ದಿಮಾಡುತ್ತಿರುವ ಮಹಿಳಾ ಮೀಸಲಾತಿ, ಸಶಕ್ತೀಕರಣ, ಸಬಲೀಕರಣದ ಆದರ್ಶಗಳು. ದೇಶವು ಸ್ವತಂತ್ರಗೊಂಡ ಆರಂಭದ ವರ್ಷಗಳಲ್ಲಿ ಕೇಂದ್ರ ಸರಕಾರವು ಜಾರಿಗೊಳಿಸಿದ ರಾಷ್ಟ್ರೀಯ ವಿಸ್ತರಣಾಯೋಜನೆ ಮತ್ತು ಸಮುದಾಯದ ಅಭಿವೃದ್ಧಿ ಯೋಜನೆಗಳು (೧೯೫೨) ನಿರೀಕ್ಷಿತ ಫಲ ದೊರೆಯದೇ ಹೋದ ಬಗ್ಗೆ ಕಾರಣಗಳನ್ನು ಹುಡುಕುವ ಚಿಂತನೆ ನಡೆಸಿತು. ಈ ಯೋಜನೆಗಳಲ್ಲಿ ವ್ಯವಸಾಯ, ಪಶುಸಂಗೋಪನೆ, ಸಂಚಾರ ಸೌಕರ್ಯ, ಆರೋಗ್ಯ, ಸಮಾಜಶಿಕ್ಷಣ, ಗ್ರಾಮಕೈಗಾರಿಕೆಗಳಿಗೆ ಹಾಗೂ ತರಬೇತಿಗಳಿಗೆ ಆದ್ಯತೆಯನ್ನು ಕೊಟ್ಟು ಅನುಷ್ಠಾನಗೊಳಿಸಿತ್ತು. ಆದರೆ ಈ ಅಭಿವೃದ್ಧಿಕಾರ್ಯಗಳು ಕೆಳಸ್ತರದ (ಗ್ರಾಮೀಣ ಜನ) ಹಂತಕ್ಕೆ ತಲುಪದೇ ತಾಲೂಕು ಅಭಿವೃದ್ಧಿ ಆಡಳಿತದ ಕೇಂದ್ರವಾಯಿತು. ಹಳ್ಳಿಗಳಲ್ಲಿ ಇವು ಜನತಾ ಚಳುವಳಿಯಾಗಬೇಕಾದರೆ,

ಜನರೇ ಯೋಜನೆಗಳನ್ನು ತಯಾರಿಸಿ ಕಾರ್ಯರೂಪಕ್ಕೆ ತರುವಂತಿರಬೇಕು. ಅಷ್ಟೇ ಅಲ್ಲದೆ ಅವುಗಳಿಗೆ ಸ್ಫೂರ್ತಿ ಒದಗಿಸಿ ತಾವು ಕಾರ್ಯಕ್ರಮಗಳಲ್ಲಿ ಮುಂದಾಳತ್ವನ್ನೂ ವಹಿಸಬೇಕು. ಸಂಸ್ಥಾನದ ಶಾಸನ ಸಭೆಗಳಾಗಲಿ, ಲೋಕಸಭೆಗಳಾಗಲಿ ಗ್ರಾಮೀಣ ಜನತೆಯ ಕುಂದುಕೊರತೆಗಳನ್ನು ನಿವಾರಿಸುವುದು ಕಷ್ಟ ಸಾಧ್ಯ. ಏಕೆಂದರೆ ಈ ಸಭೆಗಳಿಗೂ, ಗ್ರಾಮೀಣ ಜನತೆಗೂ ಇರುವ ಅಂತರ ಬಹಳ. ಈ ಅಂತರವನ್ನು ಕಡಿಮೆಮಾಡುವುದೇ ಪಂಚಾಯತ್ ರಾಜ್ಯದ ಸ್ಥಾಪನೆಯ ಉದ್ದೇಶ. ಪ್ರಜಾಪ್ರಭುತ್ವದಲ್ಲಿ ತಾವು ಭಾಗಿಗಳು ಎಂಬ ಜಾಗೃತಿ, ಅರಿವನ್ನುಂಟುಮಾಡುವುದು, ಆಡಳಿತವನ್ನು ವಿಕೇಂದ್ರೀಕರಣಗೊಳಿಸುವುದು ಪಂಚಾಯಿತ್ ರಾಜ್ಯದ ಉದ್ದೇಶವಾಗಿತ್ತು.

೧೯೫೭ರಲ್ಲಿ ಬಲವಂತರಾಯ ಮೆಹತಾ ಅವರ ಅಧ್ಯಕ್ಷತೆಯಲ್ಲಿ ಸಮಿತಿ ರಚನೆಯಾಗಿ ಗ್ರಾಮೀಣ ಅಭಿವೃದ್ಧಿಯಲ್ಲಿ ತೊಡಕಾದ ಅಂಶಗಳನ್ನು ಪರಿಶೀಲಿಸಿತು. ೧೯೫೮ರ ಜನವರಿ ೨೨ರಂದು ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಸಮಿತಿಯು ಒಂದು ವರದಿಯನ್ನು ಅಂಗೀಕರಿಸಿತು. ಪರಿಣಾಮವಾಗಿ ಮೊದಲಬಾರಿಗೆ ರಾಜಸ್ಥಾನ ಸರಕಾರವು ಈ ಪಂಚಾಯತ್ ರಾಜ್ ವ್ಯವಸ್ಥೆಯನ್ನು ೧೯೫೮ರಲ್ಲಿ ಜಾರಿಗೊಳಿಸಿತು. ಈ ನಿಟ್ಟಿನಲ್ಲಿ ಆಗಿನ ಮೈಸೂರು ಸರಕಾರವು ೧೯೫೯ರಲ್ಲಿ ಗ್ರಾಮಪಂಚಾಯಿತಿ ಮತ್ತು ಜಿಲ್ಲಾ ಬೋರ್ಡ್ ಕಾಯಿದೆಯನ್ನು ರೂಪಿಸಿತು. ಮುಂದೆ ಅಶೋಕ ಮೆಹತಾ ಸಮಿತಿಯ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರಕಾರವು ದಿ. ನಜೀರ್ ಸಾಬ್ ನೇತೃತ್ವದಲ್ಲಿ ೧೯೮೩ರಲ್ಲಿ "ಕರ್ನಾಟಕ ಜಿಲ್ಲಾ ಪರಿಷತ್, ತಾಲೂಕು ಪಂಚಾಯತ್ ಸಮಿತಿ, ಮಂಡಲಪಂಚಾಯತಿ ಮತ್ತು ನ್ಯಾಯಪಂಚಾಯತಿ ಕಾಯಿದೆ"ಯನ್ನು ಜಾರಿಗೆ ತಂದಿತು. ಆಗ ಬಹಳ ಜನ ಗಾಂಧೀಜಿಯವರ ಗ್ರಾಮ ಸ್ವರಾಜ್ಯ ಪರಿಕಲ್ಪನೆಯ ತಳಹದಿಯ ಮೇಲೆ ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದಿತೆಂದು ಹೇಳಲಾಗುತ್ತಿತ್ತು. ಆದರೆ ವಾಸ್ತವವಾಗಿ ಇದು ಗಾಂಧೀಜಿಯ ಕಲ್ಪನೆಗೆ - ಆದರ್ಶಕ್ಕೆ ವ್ಯತಿರಿಕ್ತವಾಗಿದ್ದರೆ ಅವರ ದೃಷ್ಟಿಯಲ್ಲಿ 'ಗ್ರಾಮಸ್ವರಾಜ್ಯ ಸಂಪೂರ್ಣ ಸ್ವಾಯತ್ತ ಗ್ರಾಮಸಮಾಜ, ಅಲ್ಲಿ ರಾಜಕೀಯವಿಲ್ಲ, ಚುನಾವಣೆಗಳಿಲ್ಲ. ಅಲ್ಲಿ ಯಾವುದೇ ಬಗೆಯ ತಾರತಮ್ಯವಾಗಲೀ, ಲಿಂಗಭೇದವಾಗಲೀ ಸುಳಿಯದು. ಜನರೇ ಸೇವಕರೂ, ಸರ್ವಾಧಿಕಾರಿಗಳು. ಭ್ರಷ್ಟತೆ, ಸ್ವಜನ ಪಕ್ಷಪಾತ, ಹಣದ ದಾಹ, ಕ್ರೌರ್ಯ-ಹಿಂಸೆಗಳಿಗೆ ಜಾಗವೇ ಇಲ್ಲ. ಅದೊಂದು ಮಾನವೀಕರಣದ ಸಾಧನ.' ಈ ಮೂಲ ಕಲ್ಪನೆಗೆ ವಿರುದ್ಧವಾದ ಪಂಚಾಯತ್ ವ್ಯವಸ್ಥೆ ಜಾರಿಯಲ್ಲಿದೆ. ನಿಜಾರ್ಥದಲ್ಲಿ ಪ್ರಜಾಪ್ರಭುತ್ವದ ಆಧಾರಸ್ತಂಭವೇ ಪಕ್ಷ ರಾಜಕಾರಣ. ಚುನಾವಣೆಗಳು ಭಾರತದಂತಹ ಬೃಹತ್ ಪ್ರಜಾಪ್ರಭುತ್ವ ದೇಶಗಳಿಗೆ ಅಗತ್ಯ. ರಾಷ್ಟ್ರದ ಅಭಿವೃದ್ಧಿ ರಥ ನಡೆಸಲು ಜನನಾಯಕರನ್ನು ಈ ಮೂಲಕವೇ ಪ್ರತಿನಿಧಿಸುವಂತಾಗಿಸಲು ಚುನಾವಣೆಗಳು ಅವಶ್ಯವೂ ಹೌದು. ಅನಿವಾರ್ಯವೂ ಹೌದು.

ಒಟ್ಟಿನಲ್ಲಿ ವಿಕೇಂದ್ರೀಕರಣದ ಪರಿಕಲ್ಪನೆಯಡಿ ಇಂದು ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಗ್ರಾಮೀಣಜನರಿಗೆ ಅಧಿಕಾರ ರಾಜಕಾರಣ ದೊರಕಿದೆ. ಮೀಸಲಾತಿಯಡಿ ಸಮಾಜದ ದುರ್ಬಲರಿಗೆ, ಕೆಳಜಾತಿಗಳ

ಜನರಿಗೆ, ಮಹಿಳೆಯರಿಗೆ ಆಡಳಿತದಲ್ಲಿ ಅಧಿಕಾರ ಪಾಲುದಾರರಾಗಿ ಭಾಗಿಯಾಗಲು ಸಾಧ್ಯವಾಗಿಸಿದ್ದರಿಂದ ಎಂಬುದನ್ನು ತಾತ್ವಿಕವಾಗಿಯಾದರೂ ಒಪ್ಪುವಂತಹದ್ದು. ಅದು ಎಷ್ಟರ ಮಟ್ಟಿಗೆ ದೀನ ದುರ್ಬಲರಿಗೆ, ಮಹಿಳೆಯರಿಗೆ ಸಶಕ್ತಿಯನ್ನು ನೀಡಬಲ್ಲದು? ಸಮಾಜದ ಎಲ್ಲಾ ಜಾತಿ-ವರ್ಗದ ಸಮೂಹಕ್ಕೆ ಇದರ ಫಲ ದೊರಕಿದೆ? ವಿಕೇಂದ್ರೀಕರಣ ಈ ದಿಶೆಯಲ್ಲಿ ಎಷ್ಟರಮಟ್ಟಿಗೆ ಫಲಪ್ರದವಾಗಿದೆ? ಎಂಬಿತ್ಯಾದಿ ಪ್ರಶ್ನೆಗಳು ಈ ಹೊತ್ತಿಗೂ ಹಾಗೆಯೇ ಉಳಿದಿವೆ.

ಪಂಚಾಯತ್ ರಾಜ್ ಸಂಸ್ಥೆಗಳ ಕುರಿತಾದ ಅನೇಕ ಅಪವಾದ-ಆಕ್ಷೇಪ-ಆರೋಪಗಳ ದೊಡ್ಡ ಪಟ್ಟಿಯೇ ಇದೆ. ಅವೆಂದರೆ; ಚುನಾವಣೆಗಳು ಗ್ರಾಮೀಣ ಜನರ ಒಗ್ಗಟ್ಟನ್ನು ಮುರಿಯುತ್ತವೆ. ಇದರಿಂದ ಕಲುಷಿತ ವಾತಾವರಣ ಉಂಟಾಗಿದೆ. ಸಾಮಾಜಿಕ ಸ್ವಾಸ್ಥ್ಯ ಹಾಳುಗೆಡವಿದೆ. ವ್ಯಕ್ತಿ-ವ್ಯಕ್ತಿಗಳ ಮಧ್ಯೆ ದ್ವೇಷ, ಜಾತಿ ವೈಷಮ್ಯ ಹೆಚ್ಚಾಗಿದೆ ಎಂಬೀ ಭಾವನೆಗಳು ಬಂದ ಮಾತ್ರಕ್ಕೆ ಜನರು ರಾಜಕೀಯದಿಂದ ದೂರ ಉಳಿಯಬೇಕೆ? ಇದು ಸಾಧ್ಯವಾಗದ ಮಾತು. ಗ್ರಾಮೀಣ ಸಮಾಜದಲ್ಲಿ ಪ್ರಬಲ ಜಾತಿಗಳು ತಮ್ಮ ಹಿತಾಸಕ್ತಿಗಾಗಿ ಈಗಾಗಲೇ ಸಾಕಷ್ಟು ಅಧಿಕಾರವನ್ನು ಅನುಭೋಗಿಸಿದ್ದಾರೆ. ಈಗಲೂ ಅವರ ಪ್ರಭಾವ, ವರ್ಚಸ್ಸು ಕಡಿಮೆಯಾಗಿಲ್ಲ. ಅದು ಬೇರೆ ರೂಪದಲ್ಲಿ ಕಾರ್ಯ ಪ್ರವೃತ್ತವಾಗಿರುತ್ತದೆ. ವಿಕೇಂದ್ರೀಕರಣದ ಅಧಿಕಾರವನ್ನು ಮೀಸಲಾತಿಯಡಿ ಕೆಳಜಾತಿಗಳಿಗೆ ಲಭ್ಯವಾಗಿದ್ದರೂ ರಿಮೋಟ್ ಕಂಟ್ರೋಲ್ ಮೇಲ್ಜಾತಿಯ ಜನರಲ್ಲಿಯೇ ಇರುತ್ತದೆಯೆನ್ನುವುದು ಕಟು ಸತ್ಯ. ಹಾಗೆಯೇ ಮಹಿಳಾ ಅಧಿಕಾರ ವಿಷಯದಲ್ಲಿಯೂ ಪುರುಷನೇ ಸೂತ್ರಧಾರನಾಗಿ ಎಲ್ಲಾ ಅಧಿಕಾರದ ಕ್ಷಣಗಳನ್ನು ಪರೋಕ್ಷವಾಗಿ ಅನುಭವಿಸುತ್ತಾನೆ. ಎಲ್ಲಿಯವರೆಗೆ ಈ ಶೋಷಿತ ಸಮುದಾಯಗಳು (ಜಾತಿ ಹಾಗೂ ಲಿಂಗಾಧಾರಿತವಾಗಿ) ಎಚ್ಚರದ ಸ್ಥಿತಿಯನ್ನು ತಲುಪುವುದಿಲ್ಲವೋ ಅಲ್ಲಿಯವರೆಗೆ 'ವಿಕೇಂದ್ರೀಕರಣ' ಮಹಿಳಾ ಮೀಸಲಾತಿ, ಸಶಕ್ತೀಕರಣ - ಸಬಲೀಕರಣಗಳು ಅರ್ಥವಂತಿಕೆಯನ್ನು ಪಡೆಯಲಾರವು. ಅದು ಸಮಾಜದ ಆತ್ಮವಿಮರ್ಶೆಗೆ ಬಿಟ್ಟದ್ದು.

ಭಾರತದಲ್ಲಿ ಗ್ರಾಮಸಮಾಜ ನಿರಂತರವಾಗಿ ಬದಲಾವಣೆಗೆ ಒಳಪಟ್ಟಿದೆ. ಬ್ರಿಟಿಷರ ಆಡಳಿತದಿಂದ ಗ್ರಾಮಸಮಾಜದಲ್ಲಿ ಸಾಕಷ್ಟು ಬದಲಾವಣೆಗಳು ಘಟಿಸಿವೆ. ಗ್ರಾಮೀಣ ಅಭಿವೃದ್ಧಿಯ ಹಾದಿಯಲ್ಲಿ ಅನೇಕ ಆತಂಕಗಳಿವೆಯೆಂಬುದು ನಿಜ. ಯೋಜನೆಗಳು ನಗರವಾಸಿಗಳ ಕೈಯಲ್ಲಿವೆ. ನಗರ ಮೂಲದ ಆಡಳಿತಶಾಹಿಯು ಅಧಿಕಾರಗಳನ್ನು, ಅವಕಾಶಗಳನ್ನು ಕಬಳಿಸಿಕೊಳ್ಳುತ್ತಿವೆಯೆಂಬುದೂ ನಿಜ. ನಗರಗಳು ಹಳ್ಳಿಗಳ ಶೋಷಣೆ ನಡೆಸಿವೆಯೆಂದು ಗ್ರಾಮೀಣರು ಸಂಶಯ ವ್ಯಕ್ತಪಡಿಸುತ್ತಿರುವುದು ಒಂದೆಡೆ ಸರಿಯಿದೆ. ಹಾಗೆಯೆ ಈ ಹೊತ್ತಿನ ಜಾಗತೀಕರಣದ ಸಂದರ್ಭದಲ್ಲಿ ಕೂಡ ಗ್ರಾಮ ಸಮಾಜ ಅನೇಕ ಬದಲಾವಣೆಗಳಿಗೆ, ತಲ್ಲಣಗಳಿಗೆ, ಸಂಕಟಗಳಿಗೆ ಒಳಗಾಗಿದೆ. ಸಾಮ್ರಾಜ್ಯಶಾಹಿಯ ಲೂಟಿ ಇನ್ನಷ್ಟು ತೀವ್ರಗೊಳಿಸಿದೆ. ಆರ್ಥಿಕತೆಯೇ ನವವಸಾಹತುಶಾಹಿಯ ಪ್ರಧಾನ ಉದ್ದೇಶವಾದುದರಿಂದ ಭಾರತವೂ ಸೇರಿದಂತೆ ತೃತೀಯ ಜಗತ್ತಿನ ರಾಷ್ಟ್ರಗಳನ್ನು ಬಹುರಾಷ್ಟ್ರೀಯ ಕಂಪನಿಗಳು ಮಾರುಕಟ್ಟೆಗಳಾಗಿಸಿಕೊಂಡಿವೆ. ಇದರಿಂದಾಗಿ ಏಕರೂಪತೆಯ ಹೆಸರಿನಲ್ಲಿ ಕೇಂದ್ರೀಕರಣವಾಗುವ

ಅಬ್ಬರದಲ್ಲಿ ಗ್ರಾಮಗಳು ಈ ಹೊತ್ತಿನ ದಿನಮಾನಗಳಲ್ಲಿ ಮತ್ತುಷ್ಟು ಶೋಷಣೆಗೆ, ನಿರ್ಲಕ್ಷ್ಯತೆಗೆ ಒಳಗಾಗುವ ಅಪಾಯಗಳಿವೆ. ಹೀಗಿದ್ದರೂ ಗ್ರಾಮಗಳು ಬದುಕಿ ಉಳಿಯುವ ಮಾರ್ಗಗಳುಂಟು. ಗ್ರಾಮೀಣ ಜನರ ಆರ್ಥಿಕ ಸಾಮಾಜಿಕ ಅಸಮಾನತೆಗಳು ಹೆಚ್ಚದಂತೆ ನಿಗ್ರಹಿಸುವುದು. ಅವರಿಗೆ ರಾಜಕೀಯ ಅಧಿಕಾರ ನೀಡಿ ಗ್ರಾಮೀಣ ಸಹಕಾರ ಮತ್ತು ಸಾಮಾಜಿಕ ಶಾಂತಿಯ ನೆಲೆಗಳನ್ನು ಬಲಪಡಿಸುವುದು.

## ೯. ನವ ವಸಾಹತುಶಾಹಿ ಮತ್ತು ಗ್ರಾಮಸಮಾಜ

ಎರಡನೇ ಪ್ರಪಂಚ ಯುದ್ಧಾನಂತರದ ದಿನಗಳಲ್ಲಿ ನವವಸಾಹತುಶಾಹಿಯ ಹೆಜ್ಜೆಗಳನ್ನು ಗುರುತಿಸಲಾಗುತ್ತದೆ. ನವವಸಾಹತುಶಾಹಿ ಧೋರಣೆಯು ಅತಿಹೆಚ್ಚು ಸೂಕ್ಷ್ಮವಾಗಿ ದೇಶದ ಆಡಳಿತದೊಂದಿಗೆ ರಾಜಿಮಾಡಿಕೊಂಡು, ತನ್ನ ಕಬಂಧ ಬಾಹುಗಳನ್ನು ವಿಸ್ತರಿಸುತ್ತದೆ. ಈ ನವವಸಾಹತುಶಾಹಿ ಶೋಷಣೆಯಲ್ಲಿ ಬಂಡವಾಳದ ಆಮದು ಪ್ರಮುಖವು ಹಾಗೂ ನಿರ್ಣಾಯಕ ಪಾತ್ರವೂ ಆಗಿ ಕಾರ್ಯನಿರ್ವಹಿಸುತ್ತದೆ. ಬಹುವಾಗಿ ತೃತೀಯಜಗತ್ತಿನ ರಾಷ್ಟ್ರಗಳೊಳಗೆ ನವವಸಾಹತುಶಾಹಿ ಬಂಡಾವಳ ಪ್ರವೇಶಿಸುತ್ತದೆ. ಅಲ್ಲಿ ತನ್ನ ಅಸ್ತಿತ್ವವನ್ನು ಸ್ಥಿರವಾಗಿ ಸ್ಥಾಪಿಸುವುದರ ಜೊತೆಗೆ ತನ್ನ ರಕ್ಷಣೆಗೆ ಅಗತ್ಯವಾದ ಸಂಬಂಧಗಳನ್ನು ಆಳುವ ಸರಕಾರಗಳೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತದೆ. ಜಗತ್ತಿನ ಸಾಮ್ರಾಜ್ಯಶಾಹೀ ರಾಷ್ಟ್ರಗಳು (ಅಮೇರಿಕ, ಬ್ರಿಟನ್ ಇತ್ಯಾದಿ) ಮೂರನೇ ಜಗತ್ತಿನ ದೇಶಗಳೊಂದಿಗೆ ನಡೆಸುವ ವ್ಯಾಪಾರದ ನೆಪದಲ್ಲಿ ದುರಾಸೆಯನ್ನು ಬಿತ್ತುವ ಹಾಗೂ ಪ್ರೇರೇಪಿಸುವ ಸ್ವರೂಪದ್ದಾಗಿರುತ್ತವೆ. ತೃತೀಯ ಜಗತ್ತಿನ ರಾಷ್ಟ್ರಗಳ ಅಭಿವೃದ್ಧಿಗೆ ಅಭಿವೃದ್ಧಿಶೀಲ ರಾಷ್ಟ್ರಗಳು ಕೈಜೋಡಿಸುವ ನೆಪದಲ್ಲಿ ತಮ್ಮ ಸ್ವಕಾರ್ಯವನ್ನು ಪೂರೈಸಿಕೊಳ್ಳುತ್ತಿವೆ. ಆರ್ಥಿಕ ಸಹಾಯದ ಜೊತೆಗೆ ಕೆಲವು ಷರತ್ತುಗಳನ್ನು ವಿಧಿಸುತ್ತವೆ.

ನವವಸಾಹತು ನೀತಿಯ ಬೆಳವಣಿಗೆಯಿಂದಾಗಿ ಬಹುರಾಷ್ಟ್ರೀಯ ಕಂಪನಿ (Multi- National Companies) ಗಳು ಜನ್ಮ ತಳೆದಿವೆ. ಇಂದು ಭಾರತದ ನೆಲ, ಜಲ, ಖನಿಜ, ಸಸ್ಯ, ಪ್ರಾಣಿ ಜನಶಕ್ತಿಗಳನ್ನು ಮುಕ್ತವಾಗಿಯೇ ತೆರೆದಿಡಲಾಗಿದೆ. ಸರಕಾರಗಳೂ ಕೂಡ ಮುಕ್ತವಾಗಿ ಸಾರ್ವಜನಿಕ ವಲಯಗಳನ್ನು ಖಾಸಗೀಕರಣಗೊಳಿಸಿ ತಮ್ಮ ಜವಾಬ್ದಾರಿಯಿಂದ ಕೈತೊಳೆದುಕೊಳ್ಳುತ್ತಿರುವುದರ ಪರಿಣಾಮ ಭೀಕರವಾಗಿದೆ. ಈ ಧೋರಣೆಯು ರೈತರ ಪಾಲಿಗೆ ನಿರಾಶದಾಯಕವಾಗಿದೆ. ಗ್ರಾಮದ ರೈತರು ಹಿಂದಿನಿಂದಲೂ ನೆಚ್ಚಿಕೊಂಡು ಬಂದಿದ್ದ ಉತ್ಪಾದನಾ ವಿಧಾನಗಳನ್ನು, ಬೀಜ, ಗೊಬ್ಬರ, ಮಾರುಕಟ್ಟೆಯ ವಿವಿಧ ಸಂಬಂಧಗಳ ಕಳ್ಳುಬಳ್ಳಿಯನ್ನು ನವವಸಾಹತುಶಾಹಿ ನೀತಿಯು ಕತ್ತರಿಸಿದೆ. ಜಾಹಿರಾತುಗಳ ಮೂಲಕ ಬಂದ ಬಹುರಾಷ್ಟ್ರೀಯ ಕಂಪನಿಗಳ ವಸ್ತುಗಳ ಮುಂದೆ ದೇಶೀಯ ಉದ್ಯಮಿಗಳು ಸ್ಪರ್ಧಿಸಲಾರದೇ ಸೋಲನ್ನೊಪ್ಪುತ್ತಿವೆ.

## ೧೦. ಜಾಗತೀಕರಣ ಮತ್ತು ಗ್ರಾಮಸಮಾಜ

ಜಾಗತೀಕರಣವನ್ನು ವಿವಿಧ ವಲಯಗಳಲ್ಲಿ ಬೇರೆ ಬೇರೆಯಾಗಿಯೇ ಅರ್ಥೈಸಿಕೊಳ್ಳಲಾಗುತ್ತದೆ. ಜಾಗತೀಕರಣವನ್ನು ಸ್ವಾಗತಿಸುವಂತೆ ವಿರೋಧವೂ ಇದೆ. ದೇಶದ ಅಭಿವೃದ್ಧಿಗೆ ಅನಿವಾರ್ಯವೆಂದು ಸಂಸತ್ತು ರಾಜಕಾರಣ ಭಾವಿಸುತ್ತದೆ. ಆದರೆ ಇದನ್ನು ಎಡಪಂಥೀಯ ಸಂಘಟನೆಗಳು ವಿರೋಧಿಸುತ್ತವೆ. ಜಾಗತೀಕರಣ ಅನೇಕ ಕ್ಷೇತ್ರಗಳಲ್ಲಿ ಉಂಟುಮಾಡುವ ಭೀಕರತೆಗಳನ್ನು ಚರ್ಚಿಸಲಾಗುತ್ತದೆ. ಇದರಿಂದ ಪ್ರಾದೇಶಿಕ ವೈವಿಧ್ಯತೆಗಳು, ಬಹುರೂಪಿ ಸಂಸ್ಕೃತಿಗಳು ನಾಶವಾಗುತ್ತವೆಂಬುದು ಇವುಗಳ ವಾದವಾಗಿದೆ.

ಜಾಗತೀಕರಣದ ಫಲವಾಗಿ 'ವಿಶ್ವ ಗ್ರಾಮ' (Global Village) ಎಂಬುದೊಂದು ಹೊಸ ಪರಿಕಲ್ಪನೆ ಹುಟ್ಟಿಕೊಂಡಿದೆ. ಅಮೇರಿಕದ ಸಮಾಜ ವಿಜ್ಞಾನಿ ಮಾರ್ಸಲ್ ಮ್ಯೋಹೂನ್ ೧೯೬೦ರಲ್ಲಿ ಎಕ್ಸ್‌ಪ್ಲೋರೇಷನ್ ಇನ್ ಕಮ್ಯೂನಿಕೇಷನ್ ಎಂಬ ತನ್ನ ಗ್ರಂಥದಲ್ಲಿ ಮೊದಲಬಾರಿಗೆ Global Village ಎಂಬ ಪದವನ್ನು ಬಳಸಿ ವಿವರಿಸಿದ. ಮಾಹಿತಿ ತಂತ್ರಜ್ಞಾನದ ವೇಗ ಮತ್ತು ಅದರ ಸಂಪರ್ಕಶಕ್ತಿಯಿಂದ ಇಡೀ ಜಗತ್ತಿನ ಯಾವುದೇ ಮೂಲೆಯಿಂದ ಇನ್ನೊಂದು ಮೂಲೆಗೆ ಸಂಪರ್ಕಿಸಬಹುದು. ತತ್ಫಲವಾಗಿ ಗ್ರಾಮದ ವೈವಿಧ್ಯತೆ ನಿರೂಪಗೊಳಿಸಿ, ಬಹುರೂಪತೆ ಬದಲು ಏಕರೂಪತೆ ತರುವ, ಆ ಮೂಲಕ ಸಂಸ್ಕೃತೀಕರಣ ನಡೆಸುವ ವ್ಯವಸ್ಥಿತ ಹುನ್ನಾರ ಭಿನ್ನ ಬಗೆಯದ್ದಾಗಿರುತ್ತದೆ. ಭಾರತದಂತಹ ಬಹುರೂಪಿ ಸಂಸ್ಕೃತಿ ದೇಶಗಳಿಗೆ ಜಾಗತೀಕರಣ ಸಾಧುವೂ ಅಲ್ಲ ಕಷ್ಟವೂ ಅಲ್ಲವೆಂಬ ಸ್ಥಿತಿ ನಿರ್ಮಾಣವಾಗಿದೆ. ಈ ನಾಶ ದೇಶದ ಚಿಂತಕರಿಗೆ ಭಯ, ಆತಂಕಗಳನ್ನು ಉಂಟುಮಾಡಿದೆ. International World Bank, I.M.F. Hudco ದಂತಹ ಸಂಸ್ಥೆಗಳಿಂದ ಹಣಕಾಸಿನ ನೆರವು ಪಡೆದು ವಿಶ್ವಗ್ರಾಮ ಹಾಗೂ ಸ್ವಚ್ಛಗ್ರಾಮದ ಹೆಸರಿನಲ್ಲಿ ಗ್ರಾಮಗಳ ವೈವಿಧ್ಯತೆಯನ್ನು ನೃತ್ಯಗ್ರಾಮದ ಹೆಸರಿನಲ್ಲಿ ಗ್ರಾಮದ ಸಾಂಸ್ಕೃತಿಕತೆಯ ನಡುವನ್ನು ಮುರಿದು ನಗ್ನಾವಸ್ಥೆಯಲ್ಲಿ ನಯವಾಗಿ ಕೊಲ್ಲುವುದು ಎಂಬುದು ಚಿಂತಕರ ಅಭಿಪ್ರಾಯವಾಗಿದೆ. ಜನಸಾಮಾನ್ಯರು ಈ ಬಗ್ಗೆ ಏನೂ ಹೇಳದ ಸ್ಥಿತಿಯಲ್ಲಿದ್ದು ಮೂಕ ಬಲಿ ಪ್ರಾಣಿಗಳಾಗಿದ್ದಾರೆ.

## ನಗರ ಸಮಾಜ

ಭಾರತದಲ್ಲಿ ನಗರ ಸಮಾಜದ ಆರಂಭ ಮಾನವ ಇತಿಹಾಸದ ಶುರುವಿನಿಂದಲೇ ಹುಟ್ಟಿಕೊಂಡಿದೆ. ಸುಮಾರು ೫೦೦೦ ವರ್ಷಗಳ ಹಿಂದೆಯೇ ನಗರಗಳು ಸಿಂಧೂನದಿಯ ಬಯಲಿನಲ್ಲಿ ಹರಪ್ಪಾ ಮತ್ತು ಮೊಹೆಂಜೋದಾರೋ ಎಂಬ ಎರಡು ಬೃಹತ್ ನಗರಗಳ ರೂಪದಲ್ಲಿ ಇದ್ದವೆಂದು ೧೯೨೨ - ೨೪ರಲ್ಲಿ ಕೈಗೊಂಡ ಭೂ ಸಂಶೋಧನೆಯಿಂದ ತಿಳಿದುಬಂದಿದೆ. ನಗರಗಳು, ನಗರಜೀವನ ಇಂದು ನಿನ್ನೆಯದಲ್ಲ ಅವುಗಳಿಗೆ ಶತಮಾನದ ಇತಿಹಾಸವೇ ಇದೆ. ನಗರೀಕರಣವೂ ಹೊಸದೇನಲ್ಲ ಹಿಂದಿನಿಂದಲೂ ಸತತವಾಗಿ ನಡೆದು ಬಂದಿರುವುದನ್ನು ಗುರುತಿಸಬಹುದು. ವಿಶ್ವದ ಪ್ರಾಚೀನ ನಾಗರೀಕತೆ ದೇಶಗಳಾದ ಭಾರತ, ಮೆಸಪಟೋಮಿಯಾ,

ಈಜಿಪ್ಟ್, ಗ್ರೀಕ್, ರೋಮ್ ನಗರಗಳೆಲ್ಲವೂ ನಾಗರೀಕತೆಯ ತೊಟ್ಟಿಲೆಂದು ಪ್ರಸಿದ್ಧಿ ಪಡೆದಿವೆ. ಸಾಮಾನ್ಯವಾಗಿ ಪ್ರಾಚೀನ ನಗರಗಳನ್ನು ನದಿದಂಡೆಗಳ ಮೇಲೆ ನಿರ್ಮಿಸುತ್ತಿದ್ದು ಆಸಕ್ತಿಯ ಅಂಶವಾಗಿದೆ. ಹೀಗೆ ನಿರ್ಮಾಣಗೊಂಡ ನಗರಗಳು ರಾಜಕೀಯ ಕೇಂದ್ರವಾಗಿ, ಧಾರ್ಮಿಕ ಯಾತ್ರ ಸ್ಥಳಗಳು, ಶೈಕ್ಷಣಿಕ ಕೇಂದ್ರಗಳು, ಶತ್ರುವಿನಿಂದ ರಕ್ಷಿಸಿಕೊಳ್ಳುವ ರಕ್ಷಣಾ ಕೇಂದ್ರಗಳಾಗಿ, ವ್ಯಾಪಾರಕೇಂದ್ರವಾಗಿ ಬೆಳೆಯುತ್ತಿದ್ದವು. ಕೆಲವು ನಗರಗಳು ಸಾಂಸ್ಕೃತಿಕ ಕೇಂದ್ರಗಳಾಗಿ ಜಗತ್ತಿನ ಅನೇಕ ವಿದ್ವಾಂಸರನ್ನು ಕಲೆಗಾರರನ್ನು ಆಕರ್ಷಿಸಿಕೊಂಡಿವೆ. ಪ್ರಾಚೀನ ನಲಂದ, ತಕ್ಷಶಿಲಾಗಳು ಉತ್ತಮ ನಿದರ್ಶನಗಳಾಗಿ ಇಂದಿಗೂ ನಮ್ಮ ಕಣ್ಣುಮುಂದೆ ನಿಂತಂತೆ ಇತಿಹಾಸದಲ್ಲಿ ದಾಖಲಾಗಿದೆ.

ನಗರಯೋಜನೆ (Town Planning) ಕಲೆ ಭಾರತದಲ್ಲಿ ಅನಾದಿ ಕಾಲದಿಂದಲೂ ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ. ಹಿಂದಿನ ನಗರಗಳು ಆಯಾ ಜನಾಂಗದ ಕುಲದೇವತೆಯ ಕೇಂದ್ರಗಳಾಗಿದ್ದುದರ ಜೊತೆಗೆ ವ್ಯಾಪಾರ, ವಾಣಿಜ್ಯ, ಕೈಗಾರಿಕೆಗಳ ಕೇಂದ್ರಗಳಾಗಿದ್ದವು. ರೋಮ್, ಸೈರಾಕ್ಯೂಸ್, ಅರಬ್ಬೀ ವರ್ತಕರು ವ್ಯಾಪಾರಕ್ಕಾಗಿ ಭಾರತಕ್ಕೆ ಬಂದು ಹೋಗುತ್ತಿದ್ದರೆಂಬ ಪುರಾವೆಗಳು ಮತ್ತು ನಗರಳಿದ್ದವು ಎನ್ನುವುದಕ್ಕೆ ಆಧಾರಗಳಾಗಿವೆ. ಈ ನಗರಗಳು ಎಲ್ಲಿ ಮತ್ತು ಯಾವಾಗ ಹುಟ್ಟಿದವು ಎನ್ನುವ ಬಗ್ಗೆ ಸ್ಪಷ್ಟ ಮತ್ತು ಪೂರ್ಣ ಅಭಿಪ್ರಾಯಗಳನ್ನು ಮೂಡಿಸುವುದು ಕಷ್ಟ ಎನ್ನುತ್ತಾರೆ ಕೆಲವು ವಿದ್ವಾಂಸರು. ಗಿಸ್ಟ್ ಮತ್ತು ಹಾಲ್ ಬರ್ಟ್‌ರವರು "ನಾಗರೀಕತೆಯ ಉಗಮದಂತೆಯೇ ನಗರದ ಉಗಮವೂ ಸಹ ಭೂತಕಾಲದ ಅಂಧಕಾರದಲ್ಲಿ ಹುದುಗಿ ಹೋಗಿದೆ" ಎಂದು ಅಭಿಪ್ರಾಯಪಡುತ್ತಾರೆ. ಈ ಹಿನ್ನೆಲೆಯಲ್ಲಿ ಮಾನವನ ನಾಗರೀಕತೆ ಬೆಳೆದಂತೆಲ್ಲಾ ನಗರಗಳೂ ಬೆಳೆದು ಬಂದಿರಲು ಸಾಕು. ಅವೇ ಪ್ರಾಚೀನ ನಾಗರೀಕತೆಯ ದೇಶಗಳಾದ ಭಾರತ, ಈಜಿಪ್ಟ್, ಚೀನಾ, ಗ್ರೀಸ್, ರೋಮ್‌ಗಳಲ್ಲಿನ ನಗರಗಳು ಪುರಾತನ ಕಾಲದ ನಗರಗಳ ಹುಟ್ಟು ಮತ್ತು ಬೆಳವಣಿಗೆಗೆ ಹಲವಾರು ಕಾರಣಗಳನ್ನು ಗುರುತಿಸಬಹುದು. ಉತ್ತಮವಾದ ಹವಾಗುಣ, ವಾಸಕ್ಕೆ ಯೋಗ್ಯ, ಅನುಕೂಲಕರವಾದ ಭೂಮಿ, ಯುದ್ಧ ಸಂದರ್ಭಗಳು ಒದಗಿ ಬಂದಾಗ ಶತ್ರುಗಳೊಡನೆ ಹೋರಾಡಲು ಅನುಕೂಲಕರವಾದ ಸ್ಥಳ, ಸಾಗಾಣಿಕೆಗೆ ಭೂ ಮತ್ತು ಜಲಮಾರ್ಗಗಳ ಅನುಕೂಲತೆಗಳು, ಬೆಳೆದ ಕಚ್ಚಾ ಹಾಗೂ ಸಿದ್ಧ ಪದಾರ್ಥಗಳನ್ನು ಮಾರಲು ಯೋಗ್ಯವಾದ ಮಾರುಕಟ್ಟೆಗಳು, ಧಾರ್ಮಿಕ ಯಾತ್ರಾಸ್ಥಳಗಳು, ಶೈಕ್ಷಣಿಕ ನೆಲೆಗಳು, ರಾಜಕಾರಣ ಮೊದಲಾದ ಅಂಶಗಳು ನಗರಗಳ ಉಗಮಕ್ಕೆ ಕಾರಣೀಭೂತವಾದವುಗಳು.

ಸಾಮಾನ್ಯವಾಗಿ ನಗರಗಳು ನಿರ್ಮಾಣವಾಗುವುದು, ಜನ ನಗರಗಳಲ್ಲಿ ವಾಸಿಸುವುದು, ನಗರ ಜೀವನ ಕ್ರಮವನ್ನು ಅನುಭವಿಸುತ್ತ ಸಾಗುವುದು ನಗರೀಕರಣ ಅಥವಾ ಅರ್ಬನೇಶನ್ ಎನಿಸುವುದು. ಜನಸಮೂಹ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿ ನೆಲೆಗೊಳ್ಳುವುದನ್ನು, ನಗರವಾಸಿ ಲಕ್ಷಣಗಳನ್ನು ವ್ಯಕ್ತಪಡಿಸುವುದನ್ನು ನಗರೀಕರಣ ಎನ್ನುತ್ತೇವೆ. ನಗರವಾಸಿಯಾಗುವ, ನಗರಗಳ ಕಡೆಗೆ ಚಲಿಸುವ, ಕೃಷಿಯಿಂದ

ನಗರಕ್ಕೆ ಹೊಂದಿಕೊಳ್ಳುವ ಇತರ ವೃತ್ತಿಗಳಿಗೆ ಬದಲಾಗುವ, ತನ್ಮೂಲಕ ಸೂಕ್ತವಾದ ವರ್ತನೆಗಳಲ್ಲಿ ಪರಿವರ್ತನೆಗೊಳ್ಳುವ ಪ್ರಕ್ರಿಯೆಯನ್ನು ನಗರೀಕರಣ ಎನ್ನುತ್ತಾರೆ ಮಿಟ್‌ಚೆಲ್ (ನಗರ ಸಮಾಜ, ಕೆ.ಭೈರಪ್ಪ, ಕೇಂಬ್ರಿಡ್ಜ್ ಪಬ್ಲಿಕೇಶನ್ ಕಂಪನಿ, ಬೆಂಗಳೂರು, ೧೯೯೮, ಪು. ೩೩).

ನಗರ ಸಮುದಾಯಗಳೆಂದರೆ, ವ್ಯಾಪಾರ, ಉದ್ಯಮ, ವಸ್ತುಗಳ ತಯಾರಿಕೆ, ಪ್ರಯಾಣಿಕರಿಗೆ ಮೂಲಭೂತ ಸೌಕರ್ಯಗಳ ಅನುಕೂಲ, ಸಂಚಾರ ಹಾಗೂ ಸಮಾಚಾರ ಮಾಧ್ಯಮ ಸೌಲಭ್ಯಗಳನ್ನೊಳಗೊಂಡ, ಬಹುಸಂಸ್ಕೃತಿಯ, ಜನನಿಬಿಡ ಸಮುದಾಯಗಳು. ನಗರವೆಂದರೆ, ಬಹಳ ಒತ್ತುಕಟ್ಟಾದ ಜನ ಬಾಹುಳ್ಯದಿಂದ ಕೂಡಿದ, ಭಿನ್ನ ಭಿನ್ನ ಅಭಿರುಚಿಗಳುಳ್ಳ, ಅಶಾಶ್ವತವಾದ, ಏಕೀಭಾವವಿಲ್ಲದ, ಔಪಚಾರಿಕವಾದ, ವೈಯಕ್ತಿಕ ಮನೋಭಾವವುಳ್ಳ ಜನಸಮೂಹ. ನಗರದ ಖಚಿತ ವ್ಯಾಖ್ಯೆನೀಡುವುದು ತುಂಬಾ ಕಷ್ಟಸಾಧ್ಯವಾದುದು ಎನ್ನುತ್ತಾರೆ ಗಿಸ್ಟ್ ಮತ್ತು ಹಾಲ್‌ಬರ್ಟ್. ಇವರ ಪ್ರಕಾರ "ಗ್ರಾಮೀಣ ಮತ್ತು ನಗರಗಳ ನಡುವಿನ ದ್ವಿಶಾಖಾ ಪರಿಚಯವು ಸಾಮುದಾಯಿಕ ಜೀವನದ ವಿಭಾಗಿಸುವಿಕೆಯನ್ನು ಆಧರಿಸುವುದಕ್ಕಿಂತಲೂ ಬಹಳಮಟ್ಟಿಗೆ ತಾತ್ವಿಕ ಕಲ್ಪನೆಯೇ ಆಗಿದೆ."

ಒಟ್ಟಾರೆಯಾಗಿ ನಗರ ಸಮುದಾಯದ ಸಾಮಾಜಿಕ ಅಂಶಗಳನ್ನು ಗಮನಿಸಿದಾಗ ನಗರವು ಜೀವನ ವಿಧಾನವೇ ಆಗಿದೆ. ಅರಬೇನ್ (Urbane) ಅಥವಾ ಸುಸಂಸ್ಕೃತ, ವಿನಯಶೀಲ ಎಂಬ ಪದವು ಜೀವನ ವಿಧಾನವನ್ನು, ಶೈಲಿಯನ್ನು ಸೂಚಿಸುತ್ತದೆ. ಅದು ನಾಗರೀಕ ಜೀವನವನ್ನು, ವಸ್ತುಗಳ, ಜನರ ಮತ್ತು ರಾಜಕೀಯ ಭಾಷಣಗಳ ಕುರಿತ ವ್ಯಾಪಕವಾದ ಪರಿಚಯವಿರುವುದನ್ನು ಸೂಚಿಸುತ್ತದೆ. ಈ ಬಗೆಯ ಜೀವನ ಕ್ರಮವು ಇಂದು ನಗರವಾಸಿಗಳಿಗೆ ಸೀಮಿತವಾಗಿಲ್ಲ. ಅದು ಗ್ರಾಮೀಣ ಜನರಿಗೂ ವ್ಯಾಪಿಸಿ ಇಂದು ಜನರು ನಾಗರೀಕರಾಗುತ್ತಿದ್ದಾರೆ. ಅಂದರೆ ಇದರರ್ಥ ಗ್ರಾಮೀಣ ಜನರು ಅನಾಗರೀಕರು, ನಗರವಾಸಿಗಳು ನಾಗರೀಕರು ಎಂದಲ್ಲ. ನಗರಗಳ ಹೊರವಲಯಗಳಲ್ಲಿ ಇನ್ನೂ ಕೆಲವರು ಗ್ರಾಮೀಣ ಲಕ್ಷಣಗಳು ಕಂಡುಬರುತ್ತಿದ್ದರೂ, ಅವು ನಗರ ಜೀವನವನ್ನು ಅನುಸರಿಸಲು ಮುಂದಾಗುತ್ತಿರುವ ನಿದರ್ಶನಗಳು ಸಾಕಷ್ಟಿವೆ. ಗ್ರಾಮ ಮತ್ತು ನಗರಗಳ ವ್ಯವಸ್ಥೆಯ ಕುರಿತು ವ್ಯತ್ಯಾಸಗಳನ್ನು ನಿರ್ಧರಿಸುವುದು ತುಸು ಕಷ್ಟದ ಕೆಲಸವೇ ಸರಿ. ಆದರೂ ಪ್ರತಿಯೊಂದು ರಾಷ್ಟ್ರವೂ ಸಮುದಾಯಗಳನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಗ್ರಾಮ ಅಥವಾ ನಗರಗಳಾಗಿ ನಿರ್ಧರಿಸಲು ಕೆಲವು ಅಂಶಗಳನ್ನು ಮಾನದಂಡವಾಗಿರಿಸಿಕೊಂಡಿದೆ. ಉದಾ: ಭಾರತ (೧೯೯೧ರ ಜನಗಣತಿಯಂತೆ) ದಲ್ಲಿ ೫೦೦೦ಕ್ಕಿಂತಲೂ ಹೆಚ್ಚಿನ ಜನಸಂಖ್ಯೆಯಿರುವ ಸಮುದಾಯಗಳನ್ನು ನಗರ ಸಮುದಾಯಗಳೆಂದು ಪರಿಗಣಿಸಲಾಗುತ್ತದೆ. ಇದು ವಿವಿಧ ದೇಶಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಪರಿಗಣಿಸಲಾಗಿದೆ. ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಸಮುದಾಯದ ಜನಸಂಖ್ಯೆ ೨೫೦೦ಕ್ಕಿಂತ ಹೆಚ್ಚಿದ್ದರೆ ಅದಕ್ಕೆ ನಗರವೆಂದು ಪರಿಗಣಿಸಲಾಗುತ್ತದೆ. ಆದರೆ ಜನಸಂಖ್ಯಾ ಸೂಚ್ಯಾಂಕದ ಮಾನದಂಡವೊಂದೇ ಗ್ರಾಮ ಮತ್ತು ನಗರಗಳೆಂದು ಪರಿಗಣಿಸಲ್ಪಡುವ ನಿಲುವಿಗೆ ಶಾಶ್ವತ ಹಾಗೂ ಸೂಕ್ತ ನಿರ್ಧಾರಕ ಅಂಶವಲ್ಲ. ಏಕೆಂದರೆ

ಗ್ರಾಮ ಮತ್ತು ನಗರಗಳು ಇಂದಿನ ದಿನಗಳಲ್ಲಿ ವೇಗವಾಗಿ ಬೆಳೆಯುತ್ತಿವೆ. ಅವುಗಳ ನಡುವಿನ ಸಂಪರ್ಕಗಳು ಹೆಚ್ಚುತ್ತಿದೆ. ಹಾಗಾಗಿ ಗ್ರಾಮ ಅಥವಾ ನಗರ ಇಲ್ಲಿಗೆ ಮುಗಿಯಿತು ಎಂದಾಗಲೇ ಅಥವಾ ಆರಂಭವಾಯಿತೆ ಎಂದು ನಿಖರವಾಗಿ ಹೇಳಲಾಗದು. ನಗರ ಹಾಗೂ ಗ್ರಾಮ ಎಂಬುದನ್ನು ಜನಸಂಖ್ಯೆ, ಅವರು ಅನುಸರಿಸುವ ವೃತ್ತಿ, ಶ್ರಮ ವಿಭಜನೆ, ಕಾರ್ಯನೈಪುಣ್ಯತೆ, ಜೀವನ ಸೌಕರ್ಯಗಳು, ಸಾಮಾಜಿಕ ಸಂರಚನೆ ಇತ್ಯಾದಿ ಅಂಶಗಳ ಆಧಾರದ ಮೇಲೆ ಗುರುತಿಸಬಹುದು.

ಪ್ರಸ್ತುತ ಸಂದರ್ಭದಲ್ಲಿ ನಗರ ಸಮುದಾಯಗಳ ಪ್ರಾಮುಖ್ಯತೆ ಅಪಾರವಾದದ್ದು. ಯಾವುದೇ ರಾಷ್ಟ್ರವನ್ನು ನಾವು ನೆನೆದರೆ ನಮ್ಮ ಕಣ್ಣಮುಂದೆ ನಿತಂತೆ ಭಾಸವಾಗುವುದು ಅದರ ಪ್ರಮುಖ ನಗರಗಳು. ಈ ನಗರಗಳೇ ರಾಷ್ಟ್ರದ ನರನಾಡಿಗಳು. ಹೆಮ್ಮೆಯ, ಪ್ರತಿಷ್ಠೆಯ ಪ್ರತೀಕಗಳು. ರಾಷ್ಟ್ರದ ವಿವಿಧ ಜೀವನ ಕ್ಷೇತ್ರಗಳಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ರಾಷ್ಟ್ರದಲ್ಲಿ ಘಟಿಸುವ ಯಾವುದೇ ಪ್ರಮುಖ ಬದಲಾವಣೆಗಳು ಬಹುಮಟ್ಟಿಗೆ ನಗರಗಳಿಂದಲೇ ಆರಂಭಗೊಳ್ಳುತ್ತವೆ. ಆಧುನಿಕತೆಯ ಅಂದ, ಪ್ರಕೃತಿಯ ಮೇಲೆ ಮಾನವನ ಸ್ವಾಮಿತ್ವದ ಪ್ರಮಾಣ, ಕೈಚಳಕ, ನಾಗರೀಕತೆಯ ನಯ, ನಾಜೂಕು, ಲೌಕಿಕ ಸಾಧನೆಗಳ ಲಾವಣ್ಯ ಹಾಗೂ ಇಂಪು ಎಲ್ಲರನ್ನು ಆಕರ್ಷಿಸುವಂತಹದು. ಅಲ್ಲಿನ ಉದ್ಯೋಗ ಅವಕಾಶಗಳು, ಸಂಪಾದನೆ ಕಾಲಕ್ರಮೇಣ ಗ್ರಾಮೀಣ ಜನರನ್ನು ವಲಸೆ ಹೋಗುವಂತೆ ಪ್ರೇರೇಪಿಸುತ್ತವೆ. ನಗರಗಳಿಗೆ ಹೊಂದಿಕೊಂಡಿರುವ ಅನೇಕ ಗ್ರಾಮಸಮುದಾಯಗಳು ಈ ಬಗೆಯ ಆಕರ್ಷಣೆಗೊಳಗಾಗಿ ಕಾಲಾಂತರದಲ್ಲಿ ನಗರೀಕರಣಗೊಳ್ಳುವ ನಿದರ್ಶನಗಳು ಬಹಳಷ್ಟಿವೆ. "ಉದಾಹರಣೆಗೆ ದೆಹಲಿಗೆ ಹತ್ತಿರವಿದ್ದ ಗ್ರಾಮಗಳು ೧೯೨೦ರಲ್ಲಿ ತಮ್ಮ ಸರಕುಗಳನ್ನು ಅಲ್ಲಿಗೆ ಕೊಂಡೊಯ್ದು ಮಾರಾಟ ಮಾಡುತ್ತಿದ್ದರು. ಈ ಮಾರುಕಟ್ಟೆಗಳಲ್ಲಿ ಗ್ರಾಮದ ಅನೇಕರು ನೌಕರಿಗಳನ್ನು ಪಡೆದು, ಅಲ್ಲಿಯೇ ಜೀವನಾವಶ್ಯಕ ವಸ್ತುಗಳನ್ನು ಖರೀದಿಸತೊಡಗಿದರು. ದೆಹಲಿ ಆಡಳಿತವು ಗ್ರಾಮೀಣಪ್ರದೇಶದ ಸುತ್ತಮುತ್ತಲಿನ ನಿವಾಸಿಗಳ ಜಾಗವನ್ನು ಕೈಗಾರಿಕಾ ಘಟಕಗಳ ಸ್ಥಾಪನೆಗೆ ವಶಪಡಿಸಿಕೊಂಡಿತು. ೧೯೫೦ರ ಹೊತ್ತಿಗೆ ಆ ಹಳ್ಳಿ ದೆಹಲಿ ಆಡಳಿತದ ನಗರ ಪಾಲಿಕೆಯ ಭಾಗವಾಯಿತು. ಇದರಿಂದ ಗ್ರಾಮೀಣ ಜನರು ರಾಜಕೀಯವಾಗಿ ದೆಹಲಿ ಆಡಳಿತದಲ್ಲಿ ನೇರ ಪಾಲ್ಗೊಳ್ಳುವಿಕೆಯನ್ನು ಹೊಂದಿದ್ದರು. ಹೀಗೆ ಕಾಲ ಕ್ರಮೇಣ ಹಳ್ಳಿಗಳು ನಗರೀಕರಣ ಪ್ರಕ್ರಿಯೆಗೆ ಒಳಗಾಗಿರುವುದನ್ನು ಗುರುತಿಸಬಹುದು. ಗ್ರಾಮಸಮುದಾಯಗಳಲ್ಲಿನ ಸಾಂಪ್ರದಾಯಿಕ ಸಾಮಾಜಿಕ ಸಂರಚನೆಗಳು ನಗರೀಕರಣದ ಪ್ರಭಾವದಿಂದಗಿ ಬದಲಾವಣೆಗೊಳಪಟ್ಟಿವೆ" (Urban Sociology in India, M.S.A.Rao, Orient Longman Limitted, New Delhi, 1992, Page 487)

ನಗರಗಳಲ್ಲಿನ ವೈಭವ, ಆಧುನಿಕತೆ, ವಿಲಾಸಮಯ ಜೀವನ, ಸಂಗೀತ ಸಾಧನಗಳು, ಲಾವಣ್ಯಗಳು ಇಹಲೋಕದ ಇಂಪು ಎದ್ದು ಕಾಣುವಂತಿರುತ್ತದೆ. ಅದಕ್ಕಾಗಿಯೇ "ದೇವರು ಹಳ್ಳಿಗಳನ್ನು ಸೃಷ್ಟಿಸಿದ ಮಾನವ ನಗರಗಳನ್ನು ನಿರ್ಮಿಸಿದ" ಎಂಬ ನಾಣ್ಣುಡಿ ಹುಟ್ಟಿದ್ದು. (ಭಾರತೀಯ ಸಮಾಜ, ಕೆ.ಭೈರಪ್ಪ, ಕೇಂಬ್ರಿಡ್ಜ್

ಪಬ್ಲಿಶಿಂಗ್ ಕಂಪನಿ, ಬೆಂಗಳೂರು, ೧೯೯೭, ಪು. ೬೫೭) ಎನ್ನುವುದಾದರೆ, ಹಳ್ಳಿಗಳು ಅಥವಾ ಗ್ರಾಮಗಳು ಜನಜೀವನದ ಕ್ರಮದಲ್ಲಿ ಜನಸಮುದಾಯವು ಸ್ಥಿರವಾಗಿ ಒಂದು ನೆಲೆಯಲ್ಲಿ ನೆಲೆಸಲು ಆರಂಭಿಸಿದ ದಿನಗಳಿಂದಲೇ ಸಹಜವಾಗಿ, ಎಲ್ಲೆಲ್ಲೂ ಅಸ್ತಿತ್ವಕ್ಕೆ ಬಂದವು. ಗ್ರಾಮಗಳು ಸಹಜ ಸೃಷ್ಟಿಯೆಂದಾಯಿತು. ಆದರೆ ನಗರಗಳು ಮಾನವನ ಅನುಕೂಲ ಹಾಗೂ ಅನಾನುಕೂಲ ಆಲೋಚನೆಯ ಆಧಾರದ ಮೇಲೆ ನಿರ್ಮಾಣಗೊಂಡವು. ಅವು ಕೃತಕವಾಗಿ ರಚಿಸಲ್ಪಟ್ಟ ಮಾನವೀಯ ನೆಲೆಗಳಾಗಿವೆ ಎನ್ನುವ ತರ್ಕಕ್ಕೆ ನಿಲ್ಲುತ್ತೇವೆ.

ಜಗತ್ತಿನ ಸುಮಾರು ೨೦೦ ರಾಷ್ಟ್ರಗಳಲ್ಲಿ ೭೦೦೦ಕ್ಕೂ ಹೆಚ್ಚು ಪ್ರಮುಖ ನಗರಗಳನ್ನು ಹೆಸರಿಸಬಹುದು. ಪ್ರತಿಯೊಂದು ರಾಷ್ಟ್ರಗಳಲ್ಲಿನ ನಗರಗಳು, ಅಲ್ಲಿನ ತನ್ನದೇ ಆದ ಇತಿಹಾಸ, ವೈಶಿಷ್ಟ್ಯತೆ ಮತ್ತು ಪ್ರಾಮುಖ್ಯತೆಯನ್ನು ಪಡೆದಿರುತ್ತವೆ. ಒಂದೊಂದು ನಗರದಲ್ಲಿ ಸಹ ಅದರದೇ ಮಹತ್ವವನ್ನು ಹೊಂದಿರುತ್ತದೆ. ಒಂದು ನಗರ ಪುರಾಣೇತಿಹಾಸಗಳಿಂದ, ಪ್ರೇಕ್ಷಣೀಯ ಸ್ಥಳವೆಂದು ಪ್ರಖ್ಯಾತಿ ಪಡೆದಿದ್ದಾರೆ. ಮತ್ತೊಂದು ನಗರವು ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಕಲೆ, ಸಾಹಿತ್ಯ, ಸಂಸ್ಕೃತಿ ಮೊದಲಾದ ಯಾವುದೋ ಒಂದು ಇಲ್ಲವೇ ಕೆಲವು ಅಂಶಗಳಿಂದ ಪ್ರಸಿದ್ಧಿಯನ್ನು ಪಡೆದಿರುತ್ತದೆ. ಉದಾ: ಗ್ರೀಕ್ ನಗರದ ಅಥೆನ್ಸ್, ಸುಪ್ರಸಿದ್ಧ ದಾರ್ಶನಿಕರು, ತತ್ವಜ್ಞಾನಿಗಳಾದ ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್ ಮುಂತಾದವರು ನೆಲೆಸಿದ್ದ ನಗರವಾಗಿತ್ತು. ಅಮೇರಿಕಾದ ನ್ಯೂಯಾರ್ಕ್, ಜರ್ಮನಿಯ ಬರ್ಲಿನ್, ಇರಾಕ್‌ನ ಬಾಗ್‌ದಾಗ್, ಚೀನಾದ ಬೀಜಿಂಗ್, ಇಂಗ್ಲೆಂಡಿನ ಲಂಡನ್, ಫ್ರಾನ್ಸ್‌ನ ಪ್ಯಾರೀಸ್, ರಷ್ಯಾದ ಮಾಸ್ಕೊ, ಸಿಂಗಾಪೂರ್‌ನ ಸಿಂಗಾಪುರ್, ಕ್ಯೂಬಾದ ಹವಾನ ನಗರಗಳು ವಿಶ್ವದಲ್ಲಿ ಅನೇಕ ಕಾರಣಗಳಿಗಾಗಿ ಪ್ರಖ್ಯಾತಿಯನ್ನು ಪಡೆದಿವೆ. ಹಾಗೆಯೇ ಭಾರತದ ದೆಹಲಿ, ಕೋಲ್ಕೊತಾ, ಮುಂಬಯಿ, ಚೆನ್ನೈ ನಗರಗಳು ಹಾಗೂ ಕರ್ನಾಟಕದ ಬೆಂಗಳೂರು, ಹುಬ್ಬಳ್ಳಿ, ಮಂಗಳೂರು, ಮೈಸೂರು ಇತ್ಯಾದಿಗಳು ಪ್ರಾಮುಖ್ಯತೆಯನ್ನು ಹೊಂದಿವೆ.

ಸಾಮಾನ್ಯವಾಗಿ ನಾಗರೀಕ ಮೌಲ್ಯಗಳು ಹರಡುವುದು, ನಡವಳಿಕೆಯ - ವರ್ತನೆಯ ನಮೂನೆಗಳು ಬದಲಾಗುವುದು ಮತ್ತು ನಗರದೆಡೆಗೆ ವಲಸೆ ಏರ್ಪಡುವುದು ಈ ಪ್ರಕ್ರಿಯೆಗೆ ನಗರೀಕರಣ ಎನ್ನುತ್ತೇವೆ. ಜನರು ಗ್ರಾಮಗಳಿಂದ ನಗರಗಳಿಗೆ ವಲಸೆ ಹೋಗುವ ಪ್ರಕ್ರಿಯೆಯೇ ನಗರೀಕರಣ. ವಕ್ರಿನ್ ಎಸ್.ಥಾಮ್ಸ್‌ನ್‌ರ ಪ್ರಕಾರ "ಜನರು ಪ್ರಧಾನವಾಗಿ ವ್ಯವಸಾಯವನ್ನವಲಂಬಿಸಿರುವ ಸಮುದಾಯಗಳಿಂದ ಸರ್ಕಾರ, ವಾಣಿಜ್ಯ, ಉತ್ಪಾದನೆ ಇಲ್ಲವೆ ಇತರ ಆಸಕ್ತಿಗಳಿಂದ ಕೂಡಿದ ಬೃಹತ್ ಸಮುದಾಯಗಳ ಕಡೆ ಚಲಿಸುವುದನ್ನು ನಗರೀಕರಣ ಎನ್ನುತ್ತೇವೆ. ವಿಶ್ವಸಂಸ್ಥೆಯ Economic Commission for Assia and the for East ಪ್ರಕಾರ "ಅತ್ಯಂತ ಸರಳ ಹಾಗೂ ಜನಸಂಖ್ಯಾ ಶಾಸ್ತ್ರೀಯವಾಗಿ ವ್ಯಾಖ್ಯಾನಿಸುವುದಾದರೆ ಜನರು ಕೆಲವು ನಿಗದಿತ ಗಾತ್ರಕ್ಕಿಂತಲೂ ಅಧಿಕ ಪ್ರಮಾಣದ ರಾಶಿಗಳಲ್ಲಿ ಸಮೂಹಗೊಳ್ಳುವುದನ್ನು ನಗರೀಕರಣ ಎನ್ನುತ್ತೇವೆ."

ಒಟ್ಟಾರೆಯಾಗಿ ನಗರೀಕರಣವು ಜನರು ಗ್ರಾಮಗಳ ಕಡೆಯಿಂದ ನಗರಗಳಿಗೆ ವಲಸೆ ಹೋಗುವ ಪ್ರಕ್ರಿಯೆಯಾಗಿದೆ. ಅದು ನಗರವು ರೂಪಗೊಳ್ಳುವುದನ್ನು ಸೂಚಿಸುತ್ತದೆ. ಅದು ನಗರ ಸ್ಥಾಪನೆಯ ಸಂಕೇತ.

ನಗರೀಕರಣ ಇದ್ದಕ್ಕಿದ್ದಂತೆಯೇ ತಕ್ಷಣ ನಡೆಯುವುದಾಗಿರದೇ ನಿಧಾನವಾಗಿ ಮತ್ತು ನಿರಂತರವಾಗಿ ನಡೆಯುವ ಪ್ರಕ್ರಿಯೆಯಾಗಿದೆ. ಅದೊಂದು ಸತತವಾಗಿ ಸಂಭವಿಸುವ ಪ್ರಕ್ರಿಯೆಯಾಗಿದೆ ಎಂಬುದನ್ನು ಗುರುತಿಸಬಹುದು.

**೧. ಪ್ರಾಚೀನ ಕಾಲದ ನಗರೀಕರಣ**

ಸಿಂಧೂ ಬಯಲಿನ ನಾಗರೀಕತೆಯ ಕಾಲದಿಂದಲೂ ಭಾರತವೂ ನಗರಗಳನ್ನು ಹೊಂದಿತ್ತು ಎನ್ನುವುದು ಪ್ರಾಚ್ಯ ಸಂಶೋಧನೆಯ ದಾಖಲೆಗಳಿಂದ ದೃಢಪಟ್ಟಿದೆ. ಕ್ರಿ.ಪೂ. ೩ನೇ ಶತಮಾನದಲ್ಲಿಯೇ ಹರಪ್ಪ ಮತ್ತು ಮೆಹಂಜೋದಾರದಂತಹ ನಗರಗಳು ಪ್ರಪಂಚದ ಅತ್ಯಂತ ಪ್ರಾಚೀನ ಯೋಜನಾಬದ್ಧ ನಗರಗಳಾಗಿದ್ದವು ಎನ್ನುವುದು ಐತಿಹಾಸಿಕ ಪುರಾವೆಗಳಿಂದ ದಾಖಲಿಸಲಾಗಿದೆ. ಹಾಗೆಯೇ ಸರಿಸುಮಾರಾಗಿ ಈ ಅವಧಿಯಲ್ಲಿ ಅಂದರೆ "ಕ್ರಿ.ಪೂ. ೨೪೫೦ ರಿಂದ ಕ್ರಿ.ಪೂ. ೧೬೦೦ರ ಅವಧಿಗೆ ಸಣ್ಣದೊಂದು ಗ್ರಾಮವಾಗಿದ್ದ ಲೋಥಲ್ ಸಿಂಧೂ ಸಾಮ್ರಾಜ್ಯದ ದೊಡ್ಡದೊಂದು ರೇವುಪಟ್ಟಣವಾಗಿ ಬೆಳೆದು, ರಾಜಕೀಯ ಮತ್ತು ಸಾಮಾಜಿಕ ಜೀವನಗಳಲ್ಲಿ ಮಹತ್ತರ ಬದಲಾವಣೆಗಳನ್ನು ಕಂಡಿತ್ತು" (ಲೋಥಲ್ ಮತ್ತು ಸಿಂಧೂ ನಾಗರೀಕತೆ, ಡಾ. ಎಸ್.ಆರ್.ರಾವ್, ಮೂಲ; ಡಾ. ಎಸ್.ಗುರುರಾಜಾಚಾರ್, ಅನುವಾದ ಶ್ರೀ ಹರಿಪ್ರಕಾಶನ, ಧಾರವಾಡ, ೧೯೮೪, ಪು. ೫೩-೫೪) ಈ ಅಂಶಗಳ ಆಧಾರದ ಮೇಲೆ ನಗರೀಕರಣವು ಭಾರತಕ್ಕೆ ಹೊಸದೇನೂ ಅಲ್ಲ ಎಂದು ತಿಳಿದು ಬರುವುದು ನಗರಯೋಜನೆ ಕಲೆ ಭಾರತದಲ್ಲಿ ಅನಾದಿಕಾಲದಿಂದಲೂ ರೂಢಿಗತವಾಗಿರುವುದನ್ನು ವಿಶ್ವದ ಅನೇಕ ನಾಗರೀಕತೆ ದೇಶಗಳು ಮಾದರಿಯಾಗಿ ಸ್ವೀಕರಿಸಿದ್ದವು. ನಮ್ಮ ಪ್ರಾಚೀನ ಗ್ರಂಥಗಳಾದ ವಾಸ್ತುಶಾಸ್ತ್ರ, ಮಾನಸಾರ ಶಿಲ್ಪಶಾಸ್ತ್ರ ಕೌಟಿಲ್ಯನ ಸುಪ್ರಸಿದ್ಧ ಅರ್ಥಶಾಸ್ತ್ರ ಮುಂತಾದವುಗಳಲ್ಲಿ ನಗರೀಕರಣದ ಬಗ್ಗೆ ವಿಶೇಷವಾಗಿ ಉಲ್ಲೇಖಿತವಾಗಿರುವುದನ್ನು ಗಮನಿಸಿದರೆ ನಗರ ಯೋಜನೆಯು ಎಷ್ಟರಮಟ್ಟಿಗೆ ಮುಂದುವರೆದಿತ್ತು ಎಂಬುದು ತಿಳಿಯುತ್ತದೆ. ನಗರಗಳನ್ನು ನಿರ್ಮಿಸುವಾಗ ಕೆಲವು ಸ್ಥೂಲ ನಕ್ಷೆಗಳನ್ನು ಆ ಕಾಲದಲ್ಲಿಯೇ ದಂಡಕ, ಸರ್ವತೋಭದ್ರ, ನಂದ್ಯಾವರ್ತ, ಪದ್ಮಕ, ಸ್ವಸ್ತಿಕ, ಪ್ರಸ್ತಾರ, ಕಾರ್ಮುಕ, ಚತುರ್ಮುಖ ಆಕಾರದಲ್ಲಿಯೇ ತಯಾರಿಸುತ್ತಿದ್ದರು.

ಪ್ರಾಚೀನ ನಗರ ರಚನೆಯಲ್ಲಿ ಹಲವಾರು ಅಂಶಗಳು ಎದ್ದು ಕಾಣುತ್ತವೆ. ಉದಾಹರಣೆಗೆ : ಅಯೋಧ್ಯೆ ನಗರವು ೫೫೦೦ ಮೀಟರ್ ಉದ್ದ ಮತ್ತು ೧೪೦೦ ಮೀಟರ್ ಅಗಲವಿದ್ದು, ವಿಶಾಲವಾದ, ಅಂದವಾದ ರಸ್ತೆಗಳನ್ನು ಸ್ಥಳಕ್ಕೆ ಹೊಂದಿರುವಂತೆಯೂ, ವಾಹನ ಸಂಚಾರಕ್ಕೆ ಯೋಗ್ಯವಾಗಿರುವಂತೆಯೂ ನಿರ್ಮಿಸಲಾಗಿತ್ತು. ರಸ್ತೆಯ ಎರಡು ಕಡೆಗಳಲ್ಲಿಯೂ ಅಂದವಾದ ಕಟ್ಟಡಗಳಿದ್ದವು. ಸಭಾಂಗಣಗಳು, ಚೌಕಗಳು ಮತ್ತು ಮಹಿಳೆಯರಿಗೇ ಪ್ರತ್ಯೇಕ ಉದ್ಯಾನವನಗಳು ಮೊದಲಾದವು ಏರ್ಪಾಟಾಗಿದ್ದವು. ಮೆಗಸ್ತಾನೀಸನು ವರ್ಣಿಸಿರುವ ಪಾಟಲೀಪುತ್ರ ನಗರವು ೧೬ ಕಿ.ಮೀ. ಉದ್ದ ಮತ್ತು ೩ ಕಿ.ಮೀ. ಅಗಲವಿತ್ತು. ೬೦ ದ್ವಾರಗಳಿಂದ ಕೂಡಿದ ಕೋಟೆಯನ್ನು ಅದಕ್ಕಾಗಿ ಕಟ್ಟಲಾಗಿತ್ತು. ಪಾಂಡ್ಯರ ರಾಜಧಾನಿಯಾಗಿದ್ದ ಮಧುರೈ ಸಹ ಕೋಟೆಯಿಂದ ಸುತ್ತುವರೆದ ನಗರವಾಗಿತ್ತು. ದೇವಾಲಯಗಳ ಊರು ಎಂದೇ ಖ್ಯಾತವಾಗಿದ್ದ ಮಧುರೈ ನಗರ ದೇವಸ್ಥಾನವನ್ನು

ಕೇಂದ್ರವಾಗಿಟ್ಟುಕೊಂಡು ನಿರ್ಮಿಸಲಾದ ನಗರವಾಗಿತ್ತು. ಮಗಧವನ್ನಾಳಿದ ಅರಸರು ತಮ್ಮ ಕೋಟೆ ನಗರಗಳನ್ನು ಯೋಜನಾಬದ್ಧವಾಗಿಯೇ ನಿರ್ಮಿಸಿಕೊಂಡಿದ್ದರು. ಬುದ್ಧನ ಕಾಲದಲ್ಲಿ ನಿರ್ಮಾಣಗೊಂಡ ನಳಂದ ಮತ್ತು ತಕ್ಷಶಿಲಾ ನಗರಗಳು ಶೈಕ್ಷಣಿಕ ಕೇಂದ್ರಗಳಾಗಿ ಬೌದ್ಧವಿಹಾರಗಳ ಸುತ್ತಲೂ ಕಂಗೋಳಿಸುತ್ತಿದ್ದವು. ಹಾಗೆಯೇ ಗುಪ್ತರ ಕಾಲದಲ್ಲಿ ಆಡಳಿತ ನಗರವಾಗಿ ವಲ್ಲಭಿ, ಪ್ರಖ್ಯಾತಿ ಹೊಂದಿತ್ತು. ಪಾಟಲೀಪುತ್ರ, ಕನೌಜ್, ಬನಾರಸ್, ಮಧುರಾ, ಉಜ್ಜಯಿನಿ, ಪ್ರಯಾಗ್, ನಾಸಿಕ್ ಮೊದಲಾದ ನಗರಗಳು ನಿರ್ಮಾಣಗೊಂಡು ಅಂದಿನ ಧಾರ್ಮಿಕ ನಗರಗಳಾಗಿ ಇಂದಿಗೂ ಪ್ರಖ್ಯಾತಿಯನ್ನು ಪಡೆದಿವೆ.

೨. ಮಧ್ಯಯುಗದಲ್ಲಿ ನಗರೀಕರಣ

ಉತ್ತರಭಾರತದ ಬಹುತೇಕ ಪ್ರದೇಶಗಳು ಮುಸ್ಲಿಂರ ಸ್ವಾಮ್ಯಕ್ಕೆ ಒಳಪಟ್ಟಿದ್ದರಿಂದ ನವ ನಗರಗಳು ನಿರ್ಮಾಣ ಆರಂಭವಾಗಲು ಕಾರಣವಾಯಿತು. ಅನೇಕ ನಗರಗಳು ವ್ಯಾಪಾರ, ವಾಣಿಜ್ಯ ಮತ್ತು ಕುಶಲಕಲೆಗಳು ಅಭಿವೃದ್ಧಿಯಿಂದಾಗಿ ಪ್ರಸಿದ್ಧ ಪಟ್ಟಣಗಳಾಗಿ ವಿಶ್ವದ ಅನೇಕರನ್ನು ಆಕರ್ಷಿಸಿದ್ದವು. ಢಾಕಾ ನಗರವು ತನ್ನ ಮಸ್ಲಿನ್ ಬಟ್ಟೆಗೆ, ಮರ್ಶಿದಾಬಾದ್ ರೇಷ್ಮೆ ಬಟ್ಟೆಗೆ, ಗೋಲ್ಕಂಡ ನಗರವು ಮುತ್ತು, ರತ್ನ, ವಜ್ರ, ವೈಢೂರ್ಯ ಒಡವೆಗಳಿಗೆ ಹೆಸರುವಾಸಿಯಾಗಿದ್ದವು. ಆಗ್ರಾ ನಗವರು ಸುಗಂಧ ದ್ರವ್ಯ ಹಾಗೂ ಅಮೃತಶಿಲಾ ಕೆಲಸಗಳಿಗೆ ಪ್ರಸಿದ್ಧಿಯಾಗಿದ್ದವು.

ಮೊಗಲವಂಶದ ರಾಜರು ತಮ್ಮ ಆಡಳಿತದ ಅವಧಿಯಲ್ಲಿ ನಗರಗಳ ನಿರ್ಮಾಣಕ್ಕೆ ಹೆಚ್ಚು ಆಸಕ್ತಿ ತೋರುತ್ತಿದ್ದುದನ್ನು ಇತಿಹಾಸದಿಂದ ತಿಳಿದುಬರುವ ಅಂಶವಾಗಿದೆ. ಭೋಗವಿಲಾಸಿಗಳು, ಐಶಾರಾಮಿ, ಸೌಂದರ್ಯ ಉಪಾಸಕರು ಆಗಿದ್ದ ಈ ದೊರೆಗಳು ಹೊಸ ನಗರ-ಪಟ್ಟಣಗಳ ನಿರ್ಮಾಣಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ತೋರಿಸುತ್ತಿದ್ದರು. ಈ ನಗರಗಳಲ್ಲಿ ಅಧಿಕಾರವನ್ನು ಅಪಾರವಾಗಿ ಪ್ರತಿಬಿಂಬಿಸುವ ಕಲೆಯನ್ನು ಎತ್ತಿತೋರಿಸುವ ಮತ್ತು ಚಿತ್ತಾಕರ್ಷಕವಾದ ಅರಮನೆಗಳು, ಕೋಟೆಗಳು, ಮಸೀದಿ, ಗೋರಿಗಳು, ಚಂದದ ಉದ್ಯಾನವನಗಳನ್ನು, ವಿಶ್ರಾಂತ ತಾಣಗಳನ್ನು ವಿಶೇಷವಾಗಿ ನಿರ್ಮಿಸುತ್ತಿದ್ದರು. ದೆಹಲಿ, ಆಗ್ರಾ, ಫತೇಪುರ ಸಿಕ್ರಿ, ಲಕ್ನೋ, ಲಾಹೋರ್ (ಈಗ ಪಾಕಿಸ್ತಾನದಲ್ಲಿದೆ) ಗೋಲ್ಕಂಡ, ಹೈದರಾಬಾದ್, ಬಿಜಾಪುರ ಮುಂತಾದ ನಗರಗಳು ಇಂದಿಗೂ ನಗರೀಕರಣಗೊಂಡ ಐತಿಹ್ಯಗಳು ಕುರುಹುಗಳಾಗಿ ಉಳಿದಿವೆ.

ಕ್ರಿ.ಪೂ. ೧೨ನೇ ಶತಮಾನದಿಂದಲೂ ದಕ್ಷಿಣ ಭಾರತದಲ್ಲಿ ನಗರೀಕರಣ ಪ್ರಕ್ರಿಯೆ ಹೆಚ್ಚಿನ ಪ್ರಗತಿಯನ್ನು ಹೊಂದುತ್ತಿರುವ ಬಗ್ಗೆ ಸ್ಪಷ್ಟ ಮಾಹಿತಿಗಳು ದೊರಕಿವೆ. "ಈ ನಗರೀಕರಣ ಪ್ರಕ್ರಿಯೆ ಹೊಸ ನಗರಗಳ ಹುಟ್ಟು ಹಾಗೂ ನಗರಗಳ ಬೆಳವಣಿಗೆಯಲ್ಲಿ ಕಾಣಬಹುದು. ಇದನ್ನು ಎರಡು ಬಗೆಯಲ್ಲಿ ಗುರುತಿಸಬಹುದು. ಒಂದು ನಗರ ಕೇಂದ್ರಗಳ ಹೆಚ್ಚಳ ಮತ್ತೊಂದು ನಗರಗಳ ವಿಸ್ತಾರಗೊಳಿಸುವಿಕೆ ಈ ನಗರೀಕರಣಕ್ಕೆ ಭೌಗೋಳಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಅಂಶಗಳು ಪೂರಕವಾಗಿದ್ದವು. ಇದೇ ಸಂದರ್ಭದಲ್ಲಿ

ಅನೇಕ ಹಳೆಯ ಕೇಂದ್ರಗಳು ಶತಮಾನಗಳಿಂದಲೂ ಅವನತಿ ಹೊಂದದೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದವು. ಹೀಗಾಗಿ ನಗರ ಬೆಳವಣಿಗೆಯನ್ನು ಗುರುತಿಸುವಂತಹ ಈ ಮೂರು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.'' (ವಿಜಯನಗರ ಸಾಮ್ರಾಜ್ಯದಲ್ಲಿ ನಗರ ಬೆಳವಣಿಗೆ, ಬಿ.ಎಸ್.ನಾಗರಾಜ್, ಹಂಪೆ ಉತ್ಸವ, ೧೯೯೬, ಪು. ೯೪, ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೭) ದಖನ್ ಪರ್ಯಾಯ ದ್ವೀಪ ಅಂತರರಾಷ್ಟ್ರೀಯ ವಾಣಿಜ್ಯ ಸಮುದ್ರ ಮಾರ್ಗದಲ್ಲಿದ್ದು ನಗರ ಕೇಂದ್ರಗಳ ಹುಟ್ಟು ಮತ್ತು ಬೆಳವಣಿಗೆಗೆ ಸಹಾಯಕವಾಯಿತು. ಪೂರ್ವ ಹಾಗೂ ಪಶ್ಚಿಮ ತೀರ ಹೊರಜಗತ್ತಿನೊಡನೆ ವ್ಯಾಪಾರ ಸಂಬಂಧವನ್ನು ಹೊಂದಿದ್ದು, ನಗರ ಕೇಂದ್ರಗಳು ಹುಟ್ಟಿಕೊಳ್ಳಲು, ಬೆಳೆಯಲು ಸಹಾಯಕವಾಯಿತು. ಇದಕ್ಕೆ ಪೂರಕವಾಗಿ ಒಳನಾಡಿನಲ್ಲಿಯೂ ಪಟ್ಟಣಗಳು ಹುಟ್ಟಿ ಬೆಳೆದು, ಇದರೊಟ್ಟಿಗೆ ರಾಜ್ಯಗಳು ಉದಯಿಸಿ ಬೆಳೆದಂತೆ ಅನೇಕ ರಾಜಧಾನಿಗಳಲ್ಲೂ ಆಡಳಿತ ಕೇಂದ್ರಗಳು ಬೆಳೆದವು. ಹೊಸ ಸಾಮ್ರಾಜ್ಯಗಳು ಉದಯಿಸಿದಂತೆ ನಗರೀಕರಣ ಪ್ರಕ್ರಿಯೆ ಹೆಚ್ಚು ಪುಷ್ಟಿಯನ್ನು ಪಡೆಯಿತು. ಇದೇ ಶತಮಾನದ ಚೋಳ, ಹೊಯ್ಸಳ ಸಾಮ್ರಾಜ್ಯಗಳ ಕಾಲದಲ್ಲಿ ದೇವಾಲಯಗಳ, ಮಠಗಳ ಪಾತ್ರವು ನಗರ ಕೇಂದ್ರಗಳ ವೃದ್ಧಿಗೆ ಪ್ರಮುಖಪಾತ್ರವನ್ನು ವಹಿಸಿದವು. ಈ ಮುಂದುವರಿಕೆಯ ಭಾಗವಾಗಿ ೧೪ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ನಗರೀಕರಣ ಪ್ರಕ್ರಿಯೆ ಹೆಚ್ಚು ಪ್ರಬಲವಾಯಿತು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿ, ಆಡಳಿತ ಸ್ಥಾನಗಳಾಗಿ, ಸೈನ್ಯದ ಬೀಡು ಅಥವಾ ಕೋಟೆಗಳಾಗಿ ಕೆಲವು ನಗರ ಕೇಂದ್ರಗಳು ಬೆಳೆದವು. ತಗಡೂರು, ಮುಳುಬಾಗಿಲು, ಗೇರುಸೊಪ್ಪೆ, ಸಂಗೀತಪುರ (ಹಾಡುಹಳ್ಳಿ) ಮೊದಲಾದವು ಈ ಕಾಲದ ಪ್ರಮುಖ ನಗರ ಕೇಂದ್ರಗಳಾಗಿದ್ದವು. ರಾಜಕೀಯ ಕೇಂದ್ರವಾದ ರಾಜಧಾನಿ ವಿಜಯನಗರವು (ಹಂಪೆ) ಧಾರ್ಮಿಕ, ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ಚರಿತ್ರೆಗಳಿಂದ ಚಾರಿತ್ರಿಕ ಖ್ಯಾತಿಯನ್ನು ಪಡೆದಿತ್ತು. ತಲಕಾಡು, ಮೇಲುಕೋಟೆ ನಗರಗಳು ಯಾತ್ರಿಕರ ಆಕರ್ಷಣಾ ಕೇಂದ್ರಗಳಾಗಿದ್ದವು.

ವಿಜಯನಗರದ ಅರಸು ಶ್ರೀಕೃಷ್ಣದೇವರಾಯನ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದ ಅಬ್ದುಲ್ ರಜಾಕ್ ಮತ್ತು ನಿಕೊಲೋ ಕಂಟಿ ವಿದೇಶಿ ಯಾತ್ರಿಕರು ಆ ಕಾಲದ ನಗರಗಳ ನಿರ್ಮಾಣ ಹಾಗೂ ವೈಭವವನ್ನು ಕುರಿತು ವಿಪರೀತ ಕೊಂಡಾಡಿದ್ದಾರೆ. ವಿಜಯನಗರ ಪಟ್ಟಣವು ರಾಜಕೀಯ ಕೇಂದ್ರವಷ್ಟೇ ಆಗಿರದೇ ಮುಖ್ಯವಾಗಿ ದೊಡ್ಡ ವಾಣಿಜ್ಯ ಕೇಂದ್ರವಾಗಿಯೂ ಸಹ ಇತ್ತು. ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ನಗರ ಮತ್ತು ಜನವಸತಿಯ ನೆಲೆಗಳನ್ನು ಅರಸರು ಮತ್ತು ವಾಸ್ತುಶಾಸ್ತ್ರಜ್ಞರು ನಿಸರ್ಗವನ್ನು ಪರಿಶೀಲಿಸಿ ಪ್ರದೇಶಗಳನ್ನು ಆಯ್ಕೆ ಮಾಡಿರುವುದು ಅವರ ಭೌಗೋಳಿಕ ಪ್ರಜ್ಞೆಯನ್ನು ನಮಗೆ ಪರಿಚಯಿಸುತ್ತಾದೆ.'' (ವಿಜಯನಗರ ಪಟ್ಟಣ ಮತ್ತು ಅದರ ಉಪನಗರಗಳು, ಡಾ.ಸಿ.ಎಸ್.ವಾಸುದೇವನ್, ಹಂಪೆ ಉತ್ಸವ, ಪು. ೧೦೩, ವಿಜಯನಗರ ಅಧ್ಯಯನ ಸಂಪುಟ ೨, ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ,

ಮೈಸೂರು, ೧೯೯೭) ವಿಜಯನಗರದ ಅರಸರ ಕಾಲದಲ್ಲಿ ಅನೇಕ ಅಗ್ರಹಾರಗಳು ಸ್ಥಾಪಿತಗೊಂಡವು. ಅಗ್ರಹಾರಗಳು ಪುರಗಳಾಗಿ ಪರಿವರ್ತಿತವಾದವು. ಇದಕ್ಕಾಗಿ ದಾನ - ದತ್ತಿಯನ್ನು ಬಿಟ್ಟುಕೊಡಲಾಯಿತು. ಕೆಲವು ಪುರ - ಪೇಟೆಗಳು ಪುನರುಜ್ಜೀವನಗೊಂಡವು. ಇದರಿಂದಾಗಿ ಕೆಲವು ಕೇಂದ್ರಗಳು ಸುತ್ತಮುತ್ತಲಿನ ಗ್ರಾಮ ಸನ್ನಿವೇಶದಲ್ಲಿ ವಿಶೇಷ ಪ್ರಾಮುಖ್ಯತೆಯನ್ನು ಪಡೆದು ಆರ್ಥಿಕ, ಧಾರ್ಮಿಕ ಚಟುವಟಿಕೆಗಳ ರಾಜಕೀಯ ಕೇಂದ್ರಗಳಾದವು. ಅನೇಕ ಆರ್ಥಿಕ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಯಿತು. ಕಾಲಕ್ರಮೇಣ ಆ ಕೇಂದ್ರಗಳು ಪಟ್ಟಣಗಳಾಗಿ ಬೆಳೆದು ಗ್ರಾಮ್ಯಜೀವನಕ್ಕಿಂತ ಭಿನ್ನವಾದ ಬಹು ಕಾರ್ಯಚಟುವಟಿಕೆಗಳ ಕೇಂದ್ರಗಳಾದವು. ಈ ಸಾಮ್ರಾಜ್ಯದ ಕಾಲದಲ್ಲಿ ಪೂರ್ವತೀರವು ಪಶ್ಚಿಮ ತೀರದಂತೆ ಅನೇಕ ನಗರಗಳಿಂದ ಆವೃತವಾಗಿತ್ತು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಪಶ್ಚಿಮ ಕರಾವಳಿಯ ನಗರಕೇಂದ್ರಗಳು ಆರ್ಥಿಕ ಚಟುವಟಿಕೆಗಳಿಂದ ವಾಣಿಜ್ಯ ವ್ಯಾಪಾರಗಳಿಂದ ಪ್ರಭಾವಿತವಾಗಿದ್ದವು. ಅವೆಂದರೆ ಉತ್ತರಕನ್ನಡ ಜಿಲ್ಲೆಯ ಅಂಕೋಲ, ಮಿರ್ಜಾನ್, ಹೊನ್ನಾವರಗಳು ಉಲ್ಲೇಖಗೊಂಡಿರುವುದು ಪೋರ್ಚ್‌ಗೀಸರ ಆಧಾರಗಳಲ್ಲಿವೆ. ಭಟ್ಕಳ ಆ ಕಾಲದ ಮತ್ತೊಂದು ಪ್ರಸಿದ್ಧ ನಗರವಾಗಿತ್ತು. ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿ, ಆಡಳಿತ ಸ್ಥಾನಗಳಾಗಿ ಸೈನ್ಯದ ಬೀಡು ಅಥವಾ ಕೋಟೆಗಳಾಗಿ ಕೆಲವು ನಗರ ಕೇಂದ್ರಗಳು ಬೆಳೆದದ್ದು ವಿಜಯನಗರದ ಕಾಲದಲ್ಲಿಯೇ. ಉತ್ತಮ ಕೋಟೆಗೆ ವಿಜಯನಗರ ಸಾಮ್ರಾಜ್ಯವು ಒಂದು ನಿದರ್ಶನವಾಗಿತ್ತು. ಸಾಮ್ರಾಜ್ಯದ ಉತ್ತರಾರ್ಧ ಕಾಲದಲ್ಲಿ ಪೆನುಕೊಂಡ, ಚಂದ್ರಗಿರಿ ಕೋಟೆಗಳು ರಾಜ್ಯದ ರಾಜಧಾನಿಗಳಾಗಿದ್ದವು.

೩. ಬ್ರಿಟಿಷರ ಕಾಲದ ನಗರೀಕರಣ

ಭಾರತದಲ್ಲಿ ನಗರೀಕರಣ ಪ್ರಕ್ರಿಯೆ ಹೆಚ್ಚು ವ್ಯಾಪಕವಾಗಿಯೂ ಪರಿಣಾಮಕಾರಿಯಾಗಿಯೂ ಬ್ರಿಟಿಷರ ಆಗಮನದಿಂದಲೇ ಶುರುವಾಯಿತೆಂದು ಹೇಳಬಹುದು. ವ್ಯಾಪಾರಕ್ಕಾಗಿ ಬಂದ ಬ್ರಿಟೀಷರು ಕ್ರಮೇಣ ಇಲ್ಲಿನ ಆಳರಸರ ವ್ಯವಹಾರಗಳಲ್ಲಿ ಮೂಗು ತೂರಿಸಿ ತಮ್ಮ ಹಿತಾಸಕ್ತಿಯನ್ನು ರಕ್ಷಿಸಿಕೊಂಡ ಬಗ್ಗೆ ಹಾಗೂ ಇಲ್ಲಿನ ಇಡೀ ಭಾರತದ ರಾಜಕೀಯ ಅಧಿಕಾರವನ್ನು ತಮ್ಮ ಹತೋಟಿಗೆ ಪಡೆದು, ಬ್ರಿಟಿಷ್ ಚಕ್ರಾಧಿಪತ್ಯದ ಏಕಸ್ವಾಮ್ಯತೆಯನ್ನು ಹೇಗೆ ಸಾಧಿಸಿದರು ಎಂಬುದು ಇತಿಹಾಸದಿಂದ ತಿಳಿದುಬರುವ ಸತ್ಯವಾಗಿದೆ. ತಮ್ಮೊಂದಿಗೆ ಭಾರತಕ್ಕೆ ವ್ಯಾಪಾರಕ್ಕಾಗಿ ಬಂದು ಸ್ಪರ್ಧೆಯೊಡ್ಡಿದ ಡೆನ್ಮಾರ್ಕ್‌ನ ಡೇನರು, ಹಾಲಂಡ್‌ನ ಡಚ್ಚರು, ಫ್ರಾನ್ಸ್‌ನ ಫ್ರೆಂಚರು ಮತ್ತು ಪೋರ್ಚುಗೀಸರು ಇವರುಗಳನ್ನೆಲ್ಲಾ ಹಿಂದಕ್ಕೆ ಅಟ್ಟಿದ್ದಲ್ಲದೆ, ಈ ನೆಲದಲ್ಲಿ ಎಲ್ಲೂ ನೆಲೆಯಿಲ್ಲದಂತೆ ಮಾಡುವಲ್ಲಿ ಯಶಸ್ಸು ಸಾಧಿಸಿದರು. ಕ್ರಿ.ಶ. ೧೬೦೦ ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಹೆಸರಿನಲ್ಲಿ ಒಂದು ಖಾಸಗಿ ಸಂಸ್ಥೆ ವ್ಯಾಪಾರದ ಉದ್ದೇಶಗಳಿಗೆ ಬ್ರಿಟೀಷ್ ರಾಣಿಯ ಅನುಮತಿಯೊಂದಿಗೆ ಸ್ಥಾಪಿಸಲಾಯಿತು. ಆದರೆ ಕಾಲಕ್ರಮೇಣ ಈ ಕಂಪನಿಯು ಸ್ಥಳೀಯ - ದೇಶೀಯ ರಾಜ ಸಂಸ್ಥಾನಗಳ ರಾಜಕೀಯ ವಿಷಯಗಳಲ್ಲಿ ಹಸ್ತಕ್ಷೇಪ ನಡೆಸಿ ತನ್ನ ಪ್ರಭಾವವನ್ನು ಬೆಳೆಸಿಕೊಂಡು ತನ್ನ ಕುಟಿಲ ನೀತಿಯಿಂದ ಸ್ಥಳೀಯ ರಾಜರುಗಳ ದೌರ್ಬಲ್ಯಗಳನ್ನು ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳತೊಡಗಿತು. ಹೀಗೆ ಸ್ಥಳೀಯ

ರಾಜಮಹಾರಾಜರುಗಳ ದೌರ್ಬಲ್ಯ, ಅವರ ನಡುವಿನ ಕಿತ್ತಾಟಗಳು ಬ್ರಿಟೀಷರ ಪಾಲಿಗೆ ಅನುಕೂಲಕರ ಪರಿಸ್ಥಿತಿಯನ್ನು ಒದಗಿಸಿತು. ಅದರಲ್ಲಿ ಕ್ರಿ.ಶ. ೧೭೫೭ರಲ್ಲಿ ನಡೆದ ಪ್ಲಾಸಿ ಕದನವು ಬ್ರಿಟೀಷರ ಅದೃಷ್ಟದ ಬಾಗಿಲನ್ನೇ ತೆರೆದಿಟ್ಟಿತು. ಈಸ್ಟ್ ಇಂಡಿಯಾ ಕಂಪನಿಯ ಗವರ್ನರ್ ರಾಬರ್ಟ್ ಕ್ಲೈವ್‌ನ ಚಾಣಕ್ಯ ನೀತಿಯು ಬಂಗಾಳದ ನವಾಬ ಸಿರಾಜ್ ಉದ್ ದೌಲನ ಸೋಲಿಗೆ ಕಾರಣವಾಯಿತು. ಈ ನಿರ್ಣಾಯಕ ಯುದ್ಧದಲ್ಲಿ ಫ್ರೆಂಚರ ಡೂಪ್ಲೆಯು ಭಾರತದಲ್ಲಿ ತನ್ನ ಆಧಿಪತ್ಯವನ್ನು ಸ್ಥಾಪಿಸಬೇಕೆಂಬ ಕನಸು ಭಗ್ನಗೊಂಡಿತು. ಅಲ್ಲಿಗೆ ಫ್ರೆಂಚರ ಕಾಲ ಭಾರತದ ಮಟ್ಟಿಗೆ ಅಂತ್ಯವಾಯಿತು.

ಆರಂಭದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ತನ್ನ ವ್ಯಾಪಾರದ ಅಭಿವೃದ್ಧಿಯ ದೃಷ್ಟಿಯಿಂದ ಹಾಗೂ ಲಾಭಗಳಿಸಬೇಕೆಂಬ ಉದ್ದೇಶದೊಂದಿಗೆ ಉಳಿದ ಪಾಶ್ಚಿಮಾತ್ಯ ದೇಶಗಳ ಪೈಪೋಟಿಯ ನಡುವೆಯೂ ಭಾರತದ ಪ್ರಮುಖ ಕರಾವಳಿ ಪ್ರದೇಶಗಳ ನಗರಗಳಲ್ಲಿ ವ್ಯಾಪಾರಕೇಂದ್ರಗಳನ್ನು ಅಥವಾ ಕೈಗಾರಿಕ ಕೇಂದ್ರಗಳನ್ನು ಸ್ಥಾಪಿಸಿತು. ಹಾಗಾಗಿ ಇಂಗ್ಲೆಂಡಿಗೆ ಏಷ್ಯಾ ದೇಶಗಳ ಸಂಪರ್ಕ ಸಾಧಿಸುವಲ್ಲಿ ಹಾಗೂ ಸರಕುಗಳ ಸಾಗಾಣಿಕೆಗೆ ಬಹಳ ಅನುಕೂಲವಾಯಿತು. ಅಲ್ಲದೆ ತನಗೆ ಅನುಕೂಲವಾಗುವಂತೆ ಸೂಕ್ತ ಜಲಮಾರ್ಗಗಳನ್ನು ಅಭಿವೃದ್ಧಿಪಡಿಸಲು ಸಾಧ್ಯವಾಯಿತು. ಕ್ರಿ.ಶ. ೧೬೧೨ರಲ್ಲಿ ಮೊಘಲ್ ದೊರೆಯ ಅನುಮತಿ ಪಡೆದು ಮೊದಲು ಸೂರತ್‌ನಲ್ಲಿ ತನ್ನ ಮಳಿಗೆಯನ್ನು ಸ್ಥಾಪಿಸಿತು. ಇಲ್ಲಿ ಜವಳಿ ಮತ್ತು ಮಸಾಲೆ, ಸಾಂಬಾರ ತಿನಿಸುಗಳ ವ್ಯಾಪಾರವನ್ನು ಆರಂಭಿಸಿತು.

ಎರಡನೆಯ ಹಂತದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ವರ್ಚಸ್ಸಿನೊಂದಿಗೆ ಸ್ಥಳೀಯ ರಾಜರುಗಳ ರಾಜಕೀಯ ಚಟುವಟಿಕೆಯಲ್ಲಿ ಪರೋಕ್ಷವಾಗಿ ಬೆಂಬಲಿಸುತ್ತ ಇಲ್ಲವೇ ಮತ್ತೊಬ್ಬ ಅರಸನನ್ನು ಎತ್ತಿಕಟ್ಟುತ್ತಾ ಹಣಕಾಸಿನ, ಸೈನ್ಯದ, ಯುದ್ಧ ಸಾಧನಗಳ ಸಹಾಯ ಹಸ್ತವನ್ನು ನೀಡುತ್ತಲೇ ಚಿಕ್ಕಪುಟ್ಟ ಸಂಸ್ಥಾನಗಳನ್ನು ತಮ್ಮ ಸುಪರ್ದಿಗೆ ಪಡೆದುಕೊಂಡರು. ಸ್ಥಳೀಯ ರಾಜರುಗಳಿಗೆ ಸಲ್ಲಿಸಬೇಕಾದ ಸುಂಕವನ್ನು ಸಲ್ಲಿಸಿ ಇಡೀ ಕರಾವಳಿ ಕೇಂದ್ರಗಳ ಮತ್ತು ಆಯಕಟ್ಟಿನ ಪ್ರದೇಶಗಳೆಲ್ಲವನ್ನು ಹತೋಟಿಗೆ ಪಡೆದುಕೊಂಡು ವಾಣಿಜ್ಯ ಕೇಂದ್ರ ನಗರಗಳಾಗಿ ಪರಿವರ್ತಿಸಿ ಅಭಿವೃದ್ಧಿಪಡಿಸಿದರು. "The company obtained small, Independant, and largely undeveloped coastal sites and equiped them with fortified factories, later elevated to the status of Presidency Towns" (India's Colonial Encounter, Mushirul Hassan, Narayani Gupta, Manohar Publishers and Distributers, New Delhi, 1993, p. 208) ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಮೂರು ಕರಾವಳಿ ತೀರದ ಕೇಂದ್ರಗಳಾದ ಬಾಂಬೆ, ಮದರಾಸು ಹಾಗೂ ಕೋಲ್ಕೊತಾಗಳಲ್ಲಿ ತನ್ನ ಕಂಪನಿ ವಾಣಿಜ್ಯಕೇಂದ್ರ ಮಳಿಗೆಗಳನ್ನು ಸ್ಥಾಪಿಸಿತ್ತು. ಈ ಮೂರು ನಗರಗಳು ಭಾರತದ ಜಲಮಾರ್ಗದ ಮುಖ್ಯ ದ್ವಾರಗಳಾಗಿದ್ದವು. ಇವು ಪೂರ್ವ ಹಾಗೂ ಪಶ್ಚಿಮ ದೇಶಗಳ ವ್ಯಾಪಾರ ವಹಿವಾಟಿಗೆ ಆಯಕಟ್ಟಿನ ಭಾಗಗಳಾಗಿದ್ದವು. ಇಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಮುಖ್ಯ ಅಧಿಕಾರಿ ಅಥವಾ ಗವರ್ನರ್‌ನ ಕೇಂದ್ರ ಕಛೇರಿ ಇರುತ್ತಿದ್ದವು. ಬ್ರಿಟೀಷರು ಈ ಪ್ರದೇಶಗಳನ್ನು ಹೆಚ್ಚು ಅಭಿವೃದ್ಧಿಪಡಿಸಲು

ಮುಖ್ಯವಾದ ಕಾರಣವಿತ್ತು. ಅದು ಇತರ ಪಾಶ್ಚಿಮಾತ್ಯ ದೇಶಗಳಾದ ಡಚ್ ಮತ್ತು ಫ್ರೆಂಚ್ ಕಂಪನಿಗಳೊಂದಿಗೆ ತನ್ನ ವ್ಯಾಪಾರ ಕೇಂದ್ರಗಳನ್ನು ಬೆಳೆಸುವಲ್ಲಿ ಸ್ಪರ್ಧಿಸಲಾರದೆ ಹಿಂಜರಿಯಿತು. ಮೇಲಾಗಿ ಆಗಿನ ಮೊಘಲ್ ದೊರೆಗಳು ವಿಧಿಸುತ್ತಿದ್ದ ತೆರಿಗೆ ಕಂಪನಿಗೆ ಲಾಭಕ್ಕಿಂತ ನಷ್ಟವನ್ನು ಉಂಟುಮಾಡುತ್ತಿತ್ತು. ಜೊತೆಗೆ ವಿದೇಶಿ ಕಂಪನಿಗಳ ಆಸ್ತಿ-ಪಾಸ್ತಿಗೆ, ಹಡಗುಗಳಿಗೆ, ವ್ಯಾಪಾರಸ್ಥರಿಗೆ ಸೂಕ್ತ ರಕ್ಷಣಾ ಏರ್ಪಾಡು ಇರಲಿಲ್ಲ. ಹೀಗಾಗಿ ಬ್ರಿಟಿಷ್‌ರು ತಮ್ಮದೇ ಆದ ಒಂದು ಸುರಕ್ಷಿತ, ಸುಸಜ್ಜಿತ ರೇವು ಪಟ್ಟಣಕ್ಕಾಗಿ ಹುಡುಕಾಟ ನಡೆಸಿದರು. ಫಲವಾಗಿ ಮೇಲಿನ ಮೂರು ರೇವು ಪಟ್ಟಣಗಳು ಅಭಿವೃದ್ಧಿಗೊಳಪಟ್ಟವು. ಕ್ರಮೇಣ ಗುಜರಾತಿನ ಸೂರತ್ ರೇವು ಪಟ್ಟಣ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಬಾಂಬೆ ನಗರವಾಗಿ ಹೆಚ್ಚು ಪ್ರಸಿದ್ಧವಾಯಿತು.

ಮೂರನೆಯದಾಗಿ ಬ್ರಿಟೀಷ್‌ರು ತಮ್ಮ ಪ್ರಬಲವಾದ ನೌಕಾಪಡೆ ಹಾಗೂ ವ್ಯಾಪಾರದಲ್ಲಿ ಬಂಡವಾಳ ಹೂಡಿಕೆ ಬಲದಿಂದಾಗಿ ಕೆಲವು ಸಾರಿ ಸ್ಥಳೀಯ ಅರಸರಿಂದ ಪಡೆದುಕೊಂಡ ರಾಜಕೀಯ ಶಕ್ತಿಯಿಂದ ಇಂತಹ ರೇವು ಪಟ್ಟಣಗಳನ್ನು ನಗರ ಕೇಂದ್ರಗಳಾಗಿ ಅಭಿವೃದ್ಧಿಪಡಿಸಿ, ನಗರೀಕರಣ ಪ್ರಕ್ರಿಯೆಗೆ ಹೆಚ್ಚಿನ ಚಾಲನೆ ನೀಡಿದರು. ಈಸ್ಟ್ ಇಂಡಿಯಾ ಕಂಪನಿಯ ನೇರ ಪ್ರೆಸಿಡೆನ್ಸಿ ಆಳ್ವಿಕೆಗೆ ಒಳಪಟ್ಟ ಎಲ್ಲಾ ನಗರಗಳು ವ್ಯಾಪಾರ ಹಾಗೂ ಕೈಗಾರಿಕ ಕೇಂದ್ರಗಳಾಗಿ ಪರಿವರ್ತಿತವಾದವು. ಹಳೆಯ ಕೆಲವು ರೇವು ಪಟ್ಟಣಗಳು, ವ್ಯಾಪಾರೀ ನಗರಗಳು ಪುನರುಜ್ಜೀವನಗೊಂಡರೆ ಇನ್ನು ಕೆಲವು ಇಲ್ಲವಾದವು ಅಥವಾ ಹೊಸದಾಗಿ ನಿರ್ಮಿತಗೊಂಡವು.

ಅಂತಿಮವಾಗಿ ಕಂಪನಿಯಿಂದ ಅಧಿಕಾರ ಬ್ರಿಟೀಷ್ ಸರಕಾರಕ್ಕೆ ಹಸ್ತಾಂತರಗೊಂಡು, ಬಲಿಷ್ಠ ನೌಕಪಡೆ ಹಾಗೂ ವ್ಯಾಪಾರ ವಲಯದಲ್ಲಿನ ಸಾರ್ವಭೌಮತ್ವದಿಂದಾಗಿ ಕ್ರಮೇಣ ಇಡೀ ಭಾರತದ ರಾಜಕೀಯ ಅಧಿಕಾರದ ಸಾರ್ವಭೌಮರಾದರು. ನವನಗರಗಳ ನಿರ್ಮಾಣದಿಂದ ನಗರೀಕರಣ ಅವ್ಯಾಹತವಾಗಿ ನಡೆಯಲು ಕಾರಣೀಭೂತ ವಾದರು. ಈ ಮೂರು ಪ್ರೆಸಿಡೆನ್ಸಿ ನಗರಗಳು ಭಾರತದ ಆಯಕಟ್ಟಿನ ವ್ಯಾಪಾರಿ ಹಾಗೂ ರಕ್ಷಣಾತ್ಮಕವಾಗಿ ಬಹುಮುಖ್ಯ ಕೇಂದ್ರಗಳಾಗಿದ್ದವು. ಇದರೊಂದಿಗೆ ಹೊಂದಿಕೊಂಡಂತಹ ಗುಡ್ಡಗಾಡು, ಮರಳುಗಾಡು ಪ್ರದೇಶಗಳಲ್ಲಿ ಬ್ರಿಟೀಷರು ಸೈನ್ಯದ ತುಕಡಿಗಳನ್ನು ಇರಿಸತೊಡಗಿದರು. ಇದರ ಆಡಳಿತ ವೆಚ್ಚವನ್ನೆಲ್ಲಾ ಕಂಪನಿಯೇ ಭರಿಸುತ್ತಿತ್ತು. ಕ್ರಮೇಣ ರಾಜಕೀಯ ಹಿಡಿತವನ್ನು ಈ ನಗರಗಳ ಮೇಲೆ ಸಾಧಿಸಿಕೊಂಡರು. ಕ್ರಿ.ಶ. ೧೭೫೭ರಲ್ಲಿ ಇಂತಹ ಪ್ರೆಸಿಡೆನ್ಸಿ ನಗರಗಳು ಆಡಳಿತಯಂತ್ರವನ್ನು ಹಿಡಿಯುವುದರ ಮೂಲಕ ದೇಶೀಯ ಸಂಸ್ಥಾನಗಳ ರಾಜರು ದುರ್ಬಲರಾಗುವಂತೆ ಮಾಡಿದರು ಅಥವಾ ಅವರನ್ನೇ ಆಶ್ರಯಿಸುವಂತೆ ಮಾಡಿಬಿಟ್ಟರು. ತಮ್ಮ ವ್ಯವಹಾರಗಳ ಸುಗಮಕ್ಕಾಗಿ ಅನೇಕ ಒಳನಾಡಿನ ಪ್ರದೇಶಗಳಿಗೆ ಪ್ರೆಸಿಡೆನ್ಸಿ ನಗರಗಳಿಂದ ಮಾರ್ಗಗಳನ್ನು ನಿರ್ಮಿಸಿದರು.

ದಕ್ಷಿಣ ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ತನ್ನ ಮೊದಲಿನ ವ್ಯಾಪಾರದ ಕೇಂದ್ರ ರೇವುಪಟ್ಟಣ ವನ್ನು ಕೋರಮಂಡಲ ಕರಾವಳಿ ತೀರದಲ್ಲಿ ತೆರೆಯಿತಾದರೂ ಡಚ್ ಮತ್ತು ಪೋರ್ಚುಗೀಸರ ಪೈಪೋಟಿಯಿಂದ ವಿಚಲಿತವಾದಂತಿತ್ತು. ಕೊನೆಗೆ ಪ್ರತ್ಯೇಕ ರೇವುಪಟ್ಟಣದ ತಲಾಶೆಯಲ್ಲಿ ದೊರಕಿದ್ದ ಮಚಲಿಪಟ್ಟಣ ಅಲ್ಲಿನ ಸ್ಥಳೀಯ ನಾಯಕರು ಉದಾರವಾಗಿ ಮಳಿಗೆ ತೆರೆಯಲು ಪರವಾನಿಗೆ ನೀಡಿದ್ದಲ್ಲದೇ, ೧೬೪೦ರಲ್ಲಿ ಕಟ್ಟಡ ನಿರ್ಮಿಸಲು ಭೂಮಿಯನ್ನು ಕೊಟ್ಟರು. ಕ್ರಿ.ಶ. ೧೬೪೧ರಲ್ಲಿ ಕಂಪನಿಯ ಕೇಂದ್ರ ಕಛೇರಿಯನ್ನು ಕೋರಮಂಡಲದ ಕರಾವಳಿ ತೀರದ ಮಚಲೀಪಟ್ಟಣದಿಂದ ಮದ್ರಾಸ್‌ಗೆ ಸ್ಥಳಾಂತರಿಸಲಾಯಿತು. ಈ ಮದ್ರಾಸ್ ಪ್ರಾಂತ್ಯವನ್ನು ಕ್ರಿ.ಶ. ೧೬೫೩ರಲ್ಲಿ ಪ್ರೆಸಿಡೆನ್ಸಿಯಾಗಿ ಮೇಲ್ದರ್ಜೆಗೆ ಏರಿಸಲಾಯಿತು. ಹಾಗೆಯೇ ೧೬೫೮ರಲ್ಲಿ ಬಂಗಾಳದ ಎಲ್ಲಾ ಕೈಗಾರಿಕಾ ಕೇಂದ್ರಗಳು ಮದ್ರಾಸ್ ಪ್ರೆಸಿಡೆನ್ಸಿಯ ಅಧೀನಕ್ಕೊಳಪಟ್ಟವು. ೧೭ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಕೈಗಾರಿಕಾ ಕೇಂದ್ರಗಳು ಪೋರ್ಟ್ ಸೇಂಟ್ ಡೇವಿಡ್ (ಕಡಲೂರು ಹತ್ತಿರ) ಪೋರ್ಟೋ ನೋವೋ, ಮಡಪೊಲ್ಲಂ ಮತ್ತು ವಿಶಾಖಪಟ್ಟಣಂ. ಮದ್ರಾಸ್ ಪ್ರೆಸಿಡೆನ್ಸಿ ವ್ಯಾಪಾರದ ಬೃಹತ್ ನಗರವಾಗಿ ಬೆಳೆದಂತೆ ಐರೋಪ್ಯ ಹಾಗೂ ಭಾರತದ ಕೆಲ ರಾಷ್ಟ್ರಶಕ್ತಿಗಳು ಇದನ್ನು ಬಗ್ಗುಬಡಿಯಲು ಹವಣಿಸುತ್ತಿದ್ದವು. ಒಂದು ಕಡೆ ಫ್ರೆಂಚರು, ಮತ್ತೊಂದು ಕಡೆ ದೇಶೀಯ ರಾಜರುಗಳಾದ ನಿಜಾಮ, ಕರ್ನಾಟಿಕ ನವಾಬ ಹಾಗೂ ಮೈಸೂರಿನ ಹೈದರಾಲಿ, ಅವನ ಮಗ ಟಿಪ್ಪುಸುಲ್ತಾನರು ಬ್ರಿಟಿಷರಿಗೆ ತಲೆನೋವಾಗಿ ಪರಿಣಮಿಸಿದ್ದರು. ಅಂತಿಮವಾಗಿ ಬ್ರಿಟಿಷರು ಫ್ರೆಂಚರ ವಶದಲ್ಲಿದ್ದ ಪಾಂಡಿಚೇರಿಯನ್ನು ಕ್ರಿ.ಶ. ೧೭೬೧ರಲ್ಲಿ ಗೆದ್ದುಕೊಂಡರು. ಹಾಗೆಯೇ ೧೮೯೯ರಲ್ಲಿ ಉಳಿದ ದಕ್ಷಿಣದ ಮುಖ್ಯ ರಾಜಸಂಸ್ಥಾನಗಳ ಅರಸರಾದ ನಿಜಾಮ, ನವಾಬ, ಮೈಸೂರು ಸೋಲಿಸಿದರು ಮತ್ತು ಒಪ್ಪಂದಗಳ ಮೂಲಕ ಸಂಸ್ಥಾನಗಳನ್ನು ವಶಪಡಿಸಿಕೊಂಡರು.

ಮದ್ರಾಸ್ ನಗರವು ರೇವುಪಟ್ಟಣವಾಗಿ, ವ್ಯಾಪಾರದ ಕೇಂದ್ರವಾಗಿ, ಬ್ರಿಟೀಷ್ ಆಡಳಿತದ ಮುಖ್ಯ ಕಛೇರಿಯಾಗಿ, ಕೇಂದ್ರ ರಾಜಕೀಯ ಶಕ್ತಿಯ ನಗರವಾಗಿ, ನಾಗರೀಕ ಕೇಂದ್ರವಾಗಿ ಮತ್ತು ದಂಡು ಪ್ರದೇಶವಾಗಿ ಹೀಗೆ ಹಂತಹಂತವಾಗಿ ಪ್ರಾಮುಖ್ಯತೆಯನ್ನು ಹೊಂದಿತ್ತು. ಮದ್ರಾಸ್ ನಗರದ ದಂಡು ಪ್ರದೇಶ ಅಥವಾ ಕಂಟೋನ್ ಮೆಂಟ್ ಏರಿಯಾ ಸೇಂಟ್ ಜಾರ್ಜ್ ಮತ್ತು ಸೇಂಟ್ ಥಾಮಸ್‌ಮೌಂಟ್‌ಗಳಲ್ಲಿ ಇರಿಸಲಾಗಿತ್ತು. ಉಳಿದ ಎರಡು ಪ್ರೆಸಿಡೆನ್ಸ್‌ಗಳಾದ ಬಾಂಬೆ ಹಾಗೂ ಕಲ್ಕತ್ತಾಗಳಲ್ಲಿಯೂ Contonment ಗಳನ್ನು ನಿರ್ಮಿಸಲಾಗಿತ್ತು. ಬಾಂಬೆಯ ಕೊಲಾಬದಲ್ಲಿ, ಕಲ್ಕಾತ್ತಾದ ಫೋರ್ಟ್ ವಿಲಿಯಂ ಮತ್ತು ಅಲಿಪೋರ್‌ಗಳಲ್ಲಿ ದಂಡು ಪ್ರದೇಶಗಳಾದವು. ಬ್ರಿಟಿಷರು ತಮ್ಮ ಹಿತಾಸಕ್ತಿ ಹಾಗೂ ಅನುಕೂಲಕ್ಕಾಗಿ ನಿರ್ಮಿಸಲ್ಪಟ್ಟ ಪ್ರದೇಶಗಳು ನಗರಗಳೇ ಆದವು. ಅವುಗಳಿಗೆ ಕಲ್ಪಿಸಲಾದ ಅನುಕೂಲಗಳು ಜನವಸತಿ, ವ್ಯಾಪಾರ ಚಟುವಟಿಕೆಗಳು, ಸೇನಾ ತುಕಡಿಗಳು, ಪೋಲೀಸ್ ಠಾಣೆಗಳ ನಿರ್ಮಾಣ, ಸಾರಿಗೆ ಸಂಪರ್ಕದ ಸೌಲಭ್ಯಗಳು, ಹಡಗು, ರೈಲು ನಿರ್ಮಾಣದಂತಹ ಉದ್ದಿಮೆಗಳ ಸ್ಥಾಪನೆ, ಅಂಚೆಕಛೇರಿ, ಸರಕಾರಿ ಕೇಂದ್ರ ವಲಯಗಳಾಗಿ ಕಛೇರಿಗಳನ್ನು ಸ್ಥಾಪಿಸುವುದರ ಮೂಲಕ ನಗರೀಕರಣ ಪ್ರಕ್ರಿಯೆ ನಿರಂತರವಾಗಿ ನಡೆದಿರುವುದನ್ನು ಗುರುತಿಸಬಹುದು. ಕೆಲವು

ಗುಡ್ಡಗಾಡು ಪ್ರದೇಶಗಳಲ್ಲಿ ನಿರ್ಮಿಸಲಾದ ಅತಿಥಿಗೃಹಗಳು, ದೊಡ್ಡದೊಡ್ಡ ಬಂಗಲೆಗಳು, ಸರಕಾರಿ ಅಧಿಕಾರಿಗಳ ವಿಶ್ರಾಂತಿಗೃಹಗಳು, ವಿಲಾಸಿ ಗಿರಿಧಾಮಗಳು (ಉದಾ : ಊಟಿ, ಉದಕಮಂಡಲ), ಜಿಲ್ಲಾಧಿಕಾರಿಗಳ ಹಾಗೂ ಅವರ ಸಹಾಯಕರಿಗಾಗಿ ನಿರ್ಮಿಸಲಾದ ವಸತಿ ಸಮುಚ್ಚಯಗಳು ಯೋಜನಾಬದ್ಧವಾಗಿ ವ್ಯವಸ್ಥೆಗೊಳಿಸಿರುವುದನ್ನು ಇಂದಿಗೂ ಕಾಣಬಹುದು. ಬ್ರಿಟೀಷರ ಕಾಲದ ಬಹುತೇಕ ನಗರಗಳು ಎಲ್ಲಾ ಸೌಲಭ್ಯಗಳನ್ನು ಹೊಂದಿರುತ್ತಿದ್ದವು. ಶಾಲೆ, ಕಾಲೇಜು, ಚರ್ಚು, ಉದ್ಯಾನವನ, ಕ್ರೀಡಾಂಗಣ, ರಂಗಮಂದಿರ, ಮಾರುಕಟ್ಟೆ, ಶೌಚಾಲಯ ಇತ್ಯಾದಿ ಸೌಕರ್ಯಗಳನ್ನು ಹೊಂದಿರುತ್ತಿದ್ದುದು ಸಾಮಾನ್ಯವಾಗಿತ್ತು.

ಮದ್ರಾಸ್ ಪ್ರೆಸಿಡೆನ್ಸಿಯ ಭಾಗವಾಗಿ ಬಳ್ಳಾರಿ ಜಿಲ್ಲೆಯು ಅಂದರೆ ಮದ್ರಾಸ್ ಅಧಿಪತ್ಯಕ್ಕೆ ಒಳಗಾದ ಜಿಲ್ಲೆಯಲ್ಲಿ ಬಳ್ಳಾರಿಯು ಒಂದಾಗಿತ್ತು. ಕ್ರಿ.ಶ. ೧೮೦೦ರಲ್ಲಿ ಬ್ರಿಟಿಷರು ಹೈದರಾಬಾದಿನ ನಿಜಾಮನಿಂದ (ಸಹಾಯಕಸೈನ್ಯ ಪದ್ಧತಿ ಒಪ್ಪಿಕೊಂಡ ಶಿರಸ್ತಿನಂತೆ) ನಾಲ್ಕು ಜಿಲ್ಲೆಗಳನ್ನು ಕಾಣಿಕೆಯಾಗಿ ಪಡೆದರು. ಅವೆಂದರೆ ಬಳ್ಳಾರಿ, ಅನಂತಪುರ, ಕರ್ನೂಲು ಮತ್ತು ಕಡಪ. ಇವುಗಳನ್ನು Ceded District ಅಂದರೆ ದತ್ತಿ ಮಂಡಲಗಳೆಂದು ಕರೆಯಲಾಗಿತ್ತು. ಹೀಗೆ ಬಳ್ಳಾರಿ ಜಿಲ್ಲೆಯು ಬ್ರಿಟಿಷರ ನೇರ ಆಳ್ವಿಕೆಯಡಿ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿತು. ಸ್ವಾತಂತ್ರ ಹೋರಾಟದ ಬಿಸಿ ಇಲ್ಲಿಯೂ ಅದಾಗಲೇ ಶುರುವಾಗಿತ್ತು. ಜನರು ಬಿಳಿಯರ ವಿರುದ್ಧ ಹಳ್ಳಿಹಳ್ಳಿಗಳಲ್ಲಿ ಸಂಘಟಿತರಾಗಿ ಘೋಷಣೆಗಳನ್ನು ಕೂಗಿದರು. ಮುಷ್ಕರ ನಡೆಸಿದರು. ಬಂದ್‌ಗೆ ಕರೆಕೊಟ್ಟದ್ದಲ್ಲದೆ ಸರಕಾರದ ಆಸ್ತಿಪಾಸ್ತಿಗೆ ನಷ್ಟವುಂಟುಮಾಡಿದರು. ಜನರನ್ನು ನಿಯಂತ್ರಿಸುವುದು ಆಂಗ್ಲರಿಗೆ ಕಷ್ಟದ ಕೆಲಸವಾಗಿತ್ತು. ಅದಕ್ಕಾಗಿ ಇದನ್ನು ದಂಡುಪ್ರದೇಶ ವಲಯವಾಗಿ ರೂಪಿಸಿದರು. ಸೇನಾನೆಲೆ ಸ್ಥಾಪಿಸಿ ತುಕಡಿಗಳನ್ನು ಇರಿಸಿದರು. ಪೋಲೀಸ್ ಠಾಣೆಗಳನ್ನು ತೆರೆದರು. ಕ್ರಿ.ಶ. ೧೮೮೪ರಲ್ಲಿ ಬಳ್ಳಾರಿ ನಗರದಲ್ಲಿ ಒಂದು ಜೈಲನ್ನು ಸ್ಥಾಪಿಸಲಾಯಿತು. ಸಿ.ಡಿ. ಮ್ಯಾಕ್‌ಲಿನ್‌ನ ಕೈಪಿಡಿ ಪ್ರಕಾರ ೧೮೮೪ರಲ್ಲಿ ಬಳ್ಳಾರಿ ಜೈಲಿನಲ್ಲಿ ಶಿಕ್ಷೆ ಅನುಭವಿಸುತ್ತಿರುವ ಖೈದಿಗಳ ಸಂಖ್ಯೆ ೩೫೦ (ಮ್ಯಾಕಲೀನ್. ಸಿ.ಡಿ. ೧೮೮೫). ಕ್ರಿ.ಶ. ೧೯೦೫ರಲ್ಲಿ ಬಳ್ಳಾರಿಯಲ್ಲಿದ್ದ ಜೈಲನ್ನು ಕೇಂದ್ರ ಕಾರಾಗೃಹವೆಂದು ಘೋಷಿಸಲಾಯಿತು. ಅದು ಇಂದಿಗೂ Central Jail ಎಂದು ಪ್ರಸಿದ್ಧಿ ಪಡೆದಿದೆ. ಇದರೊಂದಿಗೆ ಅಲ್ಲಿಪುರದಲ್ಲಿ (ಬಳ್ಳಾರಿ ನಗರದ ಹೊರವಲಯದಲ್ಲಿ) ವಿಶಿಷ್ಟವಾದ ಜೈಲೊಂದನ್ನು ನಿರ್ಮಿಸಿತ್ತು. ಆದರೆ ಈಗ ಅಲ್ಲಿ ಇಲ್ಲವಾಗಿದೆ.

ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಸೇನಾ ನೆಲೆಗಳು ಬಳ್ಳಾರಿಯೊಂದಿಗೆ; ದಂಡು ಪ್ರದೇಶಗಳಾಗಿ ಪೂನಾದ ಮಲ್ಲೇ ಮತ್ತು ಮದ್ರಾಸ್ ನಗರದ ಹತ್ತಿರವಿರುವ ಪಲ್ಲವರಮನಲ್ಲಿ; ತಿರುಚಿನಾಪಲ್ಲಿ, ವೆಲ್ಲಿಂಗ್ಟನ್, ವಿಶಾಖಪಟ್ಟಣಂ ಮತ್ತು ತ್ರಿವೇಂದ್ರಮ್‌ಗಳಲ್ಲಿ ಸೇನೆಯನ್ನು ನಿಯೋಜಿಸಿ ಘೋಷಿಸಲಾಗಿತ್ತು. ಈ ಪ್ರೆಸಿಡೆನ್ಸಿಯ ಅತ್ಯಂತ ದೊಡ್ಡದಾದ ದಂಡುಪ್ರದೇಶ ಬೆಂಗಳೂರಿನಲ್ಲಿ ೧೮೦೯ರಲ್ಲಿ ಸ್ಥಾಪಿಸಲ್ಪಟ್ಟಿತು. ಇದನ್ನು ಟಿಪ್ಪುವಿನ ಶ್ರೀರಂಗಪಟ್ಟಣದಿಂದ ಸ್ಥಳಾಂತರಿಸಿದ ಪರಿಣಾಮವಾಗಿ ಅದು Civil and Military Station ಆಗಿ ಬೆಂಗಳೂರಿಗೆ ಸೇರ್ಪಡೆಯಾಯಿತು.

## ಬಾಂಬೆ ಮತ್ತು ಪಶ್ಚಿಮ ಭಾರತ

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಆರಂಭಿಕ ವ್ಯಾಪಾರ ಸಂಬಂಧವು ಭಾರತ ಉಪಖಂಡದಲ್ಲಿ ಗುಜರಾತ್‌ನ ಕರಾವಳಿ ಪಟ್ಟಣವಾದ ಸೂರತ್‌ನೊಂದಿಗೆ ಇತ್ತು. ಸೂರತ್ ಪಟ್ಟಣವು ಅಂದಿನ ವಿದೇಶೀ ವ್ಯಾಪಾರಸ್ಥರ ಅತ್ಯಾಕರ್ಷಣೆಯ ಕೇಂದ್ರವಾಗಿತ್ತು. ಏಕೆಂದರೆ ಸೂರತ್ ನಗರವು ಜವಳಿ ವ್ಯಾಪಾರಕ್ಕೆ ಉತ್ತಮ ಸೌಕರ್ಯವುಳ್ಳ, ಸುಸಜ್ಜಿತ ಆಯಾಕಟ್ಟಿನ ಬಂದರು ಆಗಿತ್ತು. ಅಲ್ಲಿ ಹತ್ತಿ ಬೆಳೆಗಾರರು ಮತ್ತು ಬಟ್ಟೆ ನೇಯುವವರು, ತಯಾರಿಸುವವರು ಏಕಕಾಲಕ್ಕೆ ಸುಲಭವಾಗಿ ಲಭ್ಯವಾಗುತ್ತಿದ್ದರು. ಎಲ್ಲಾ ಹಣಕಾಸಿಗೆ ಸಂಬಂಧಿಸಿದ ವ್ಯವಹಾರ ಹಾಗೂ ಲೇವಾದೇವಿಗಳಿಗೆ ವರ್ತಕರು, ಬಂಡವಾಳ ಹೂಡಿಕೆದಾರರು, ಗ್ರಾಹಕರು ನಗರದಲ್ಲಿಯೇ ಇರುತ್ತಿದ್ದರು. ವಿವಿಧ ಭಾಗಗಳಿಂದ ಬರುವವರಿಗೆ ಅಗತ್ಯ ಸೌಕರ್ಯ, ಸೇವ ಸೌಲಭ್ಯಗಳು ಕೈಗೆಟುಕುವಂತೆ ಇದ್ದ ಕಾರಣ ಸೂರತ್ ಬಂದರು ಸುಸಜ್ಜಿತವಾದ ವಾಣಿಜ್ಯ ಸಂಕೀರ್ಣವಾಗಿ ಖ್ಯಾತಿ ಹೊಂದಿತ್ತು. ಆದರೆ ಈ ಬಂದರು ಪಟ್ಟಣ ಬ್ರಿಟೀಷರಿಗೆ ಯಾವುದೇ ಬಗೆಯ ಆಶಾಭಾವನೆಯನ್ನಾಗಲೀ, ಲಾಭತರುವ ವ್ಯಾಪಾರವಾಗಿಯಾಗಲೀ ಕಂಡುಬಂದಂತಿಲ್ಲ. ಅವರೊಂದಿಗೆ ಪೈಪೋಟಿ ನೀಡಿದ ಡಚ್ ಮತ್ತು ಪೋರ್ಚ್‌ಗೀಸರ ಇರುವಿಕೆಯಿಂದ ವಿಚಲಿತರಾದಂತೆ ಕಾಣುತ್ತದೆ. ಅನಿವಾರ್ಯವಾಗಿ ಪರ್ಯಾಯ ಕೇಂದ್ರವನ್ನು ಶೋಧಿಸತೊಡಗಿದರು. ಆಗ ಅವರ ಕಣ್ಣಿಗೆ ಬಿದ್ದಿದ್ದು ಬೊಂಬಾಯಿ ಪಟ್ಟಣವೇ.

ಕೊಂಕಣದ ಕರಾವಳಿ ತೀರದಲ್ಲಿರುವ ಬಾಂಬೆ ದ್ವೀಪವು ಈಸ್ಟ್ ಇಂಡಿಯಾ ಕಂಪನಿಗೆ ಅದೃಷ್ಟದ ಬಾಗಿಲು ತೆರೆದಿದ್ದು ಕೂಡ ಆಕಸ್ಮಿಕವೇ. ಹಿಂದೆ ಪೋರ್ಚುಗೀಸರು ಇದನ್ನು ಕ್ರಿ.ಶ. ೧೬೬೧ರಲ್ಲಿ ಬ್ರಿಟನ್ ರಾಜ ಎರಡನೇ ಚಾರ್ಲ್ಸ್‌ಗೆ ಸೌಹಾರ್ದಯುತವಾಗಿ ವೈವಾಹಿಕ ಸಂಬಂಧ ಮತ್ತು ಸೇನಾ ಮೈತ್ರಿಕೂಟದ ಕುರುಹಾಗಿ ನೀಡಿತ್ತು. ಕ್ರಿ.ಶ. ೧೬೬೫ರಲ್ಲಿ ಬ್ರಿಟಿಷ್ ಚಕ್ರಾಧಿಪತ್ಯವು ತನ್ನ ವಶಕ್ಕೆ ಪಡೆದು ಸುಮಾರು ೨ ವರ್ಷಗಳ ನಂತರ ಈಸ್ಟ್ ಇಂಡಿಯಾ ಕಂಪನಿಗೆ ವರ್ಗಾಹಿಸಿತು. ನಂತರ ಕ್ರಿ.ಶ. ೧೬೮೭ರಲ್ಲಿ ಬಾಂಬೆಯನ್ನು ಪಶ್ಚಿಮ ಭಾರತದ ಕೇಂದ್ರ ಕಛೇರಿಯಾಗಿ ಪರಿವರ್ತಿಸಲಾಯಿತು. ಆದರೂ ಈ ನಗರವು ತನ್ನ ವಾಣಿಜ್ಯ ಅಭಿವೃದ್ಧಿಗಾಗಿ ೧೮ನೇ ಶತಮಾನದ ಮಧ್ಯಭಾಗದವರೆಗೂ ಸೂರತ್ ಪಟ್ಟಣವನ್ನೇ ಅವಲಂಬಿಸಿತ್ತು.

ಕ್ರಿ.ಶ. ೧೭೫೯ರಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಸೂರತ್‌ನ ನವಾಬನೊಂದಿಗೆ ರಾಜಕೀಯ ಅಧಿಕಾರದ ಹಂಚಿಕೆಯಾಗಿ ಹೆಚ್ಚಿನ ವ್ಯಾಪಾರ ವಹಿವಾಟು ಬಾಂಬೆಯಲ್ಲಿಯೇ ನಡೆಯುವಂತೆ ಪರಿಸ್ಥಿತಿಯನ್ನು ಸೃಷ್ಟಿಸಲಾಯಿತು. ಉದಾ: ಸೂರತ್‌ನಲ್ಲಿನ ಹಡಗು ನಿರ್ಮಾಣದ ಕೈಗಾರಿಕೆಗಳೆಲ್ಲವನ್ನು ಸ್ಥಳಾಂತರಿಸಲಾಯಿತು. ಇದರಿಂದ ವರ್ತಕರು, ಬಂಡವಾಳ ಹೂಡಿಕೆದಾರರು, ಕಾರ್ಮಿಕರು, ಕುಶಲಕರ್ಮಿಗಳು ಬಾಂಬೆಗೆ ವಲಸೆಯಾಗತೊಡಗಿದರು. ಅಧಿಕ ಜನನಿಬಿಡತೆಯಿಂದ ಇದ್ದ ಸೂರತ್ ನಗರವು ದಿನೇದಿನೆ ಜನವಸತಿ ಇಲ್ಲದೇ ಕ್ಷೀಣಿಸಿತು. According to one (though by no means the only available) set of estimates, the city's inhabitants numbered over half a million at the close of the 18th century,

were reduced to about 250,000 in 1811, and to 80,000 in 1847 (The Imperial Gazetteer xxiii : 164) [India's colonial Encounter, Mushirul Hassan, Narayani Gupta, Manohar 1993, p. 214] ಹೀಗೆ ಸೂರತ್ ನಗರವು ಜನವಸತಿ ಕ್ಷೀಣಿಸಿದ್ದರಿಂದ ತನ್ನ ವರ್ಚಸ್ಸನ್ನು ಕಳೆದುಕೊಳ್ಳ ತೊಡಗಿತು. ಇತ್ತ ಬಾಂಬೆ ಪಟ್ಟಣ ಹೆಚ್ಚು ಜನನಿಬಡತೆಯಿಂದ ವ್ಯಾಪಾರ, ರಾಜಕೀಯ, ಆರ್ಥಿಕ ಕೇಂದ್ರವಾಗಿ ಬೆಳೆಯತೊಡಗಿತು. ಸೂರತ್‌ನ ಅವನತಿಯೆ ಬಾಂಬೆ ಅಭಿವೃದ್ಧಿಗೆ ಕಾರಣವೆಂದು ಕೆಲ ಚರಿತ್ರೆಕಾರರು ವಿಶ್ಲೇಷಿಸು ತ್ತಾರೆ. ವಿಶ್ವದ ಬೃಹತ್ ನಗರವಾಗಿ ಬೆಳೆಯಲು ಸಾಧ್ಯವಾಯಿತು. ಕ್ರಿ.ಶ. ೧೮೧೮ರಲ್ಲಿ ಮರಾಠರ ಪೇಶ್ವೆಗಳ ಕೈಯಿಂದ ಈ ನಗರವನ್ನು ಸಂಪೂರ್ಣವಾಗಿ ಕಿತ್ತುಕೊಂಡ ಬ್ರಿಟೀಷರು ರಾಜಕೀಯ ಸಾರ್ವಭೌಮತ್ವವನ್ನು ಸ್ಥಾಪಿಸಿದರು. ಇಡೀ ಪಶ್ಚಿಮ ಭಾರತದ ಪ್ರದೇಶಗಳೆಲ್ಲದರ ಮೇಲೆ ಬಾಂಬೆ ನಗರವು ರಾಜಕೀಯ ಕೇಂದ್ರವಾಗಿ ನಿಯಂತ್ರಣವನ್ನು ಹೊಂದಿತ್ತು.

ಬ್ರಿಟಿಷರು ತಮ್ಮ ಹಿತಾಸಕ್ತಿಗನುಗುಣವಾಗಿ ಬಾಂಬೆ ನಗರವನ್ನು ಕೇಂದ್ರವಾಗಿರಿಸಿಕೊಂಡು ಆರ್ಥಿಕ, ವ್ಯಾಪಾರ ಹಾಗೂ ರಾಜಕೀಯ ಲಾಭಗಳನ್ನು ಗಳಿಸಿದರು. ಆ ಮೂಲಕ ತಮ್ಮ ಆಡಳಿತದ ಪ್ರಭಾವವನ್ನು ದೇಶ ಸ್ವತಂತ್ರವಾಗುವವರೆಗೂ ಮುಂದುವರಿಸಿದ್ದರು ಎಂಬ ಅಂಶವನ್ನು ಚಾರಿತ್ರಿಕ ದಾಖಲೆಗಳು ಹೇಳುತ್ತಿವೆ. ಇಂದು ಬಾಂಬೆ ನಗರವು ವಿಶ್ವದ ಕೆಲವೇ ಬೃಹತ್ ನಗರಗಳಲ್ಲಿ ಒಂದು ಎಂದು ಪ್ರಸಿದ್ಧಿಹೊಂದಿದೆ. ಆಂಗ್ಲರ ಕಾಲದಲ್ಲಿ ಮೊಟ್ಟಮೊದಲಬಾರಿಗೆ ನಿರ್ಮಾಣಗೊಂಡ ರೈಲುಮಾರ್ಗ (ಬಾಂಬೆಯಿಂದ ಥಾನದವರೆಗೆ) ದೇಶದ ಒಳಮಾರ್ಗಗಳ ಸಂಪರ್ಕ ಹಾಗೂ ಅಭಿವೃದ್ಧಿಗೆ ಕಾರಣವಾಯಿತು. ಸರಕು ಸಾಗಾಣಿಕೆ, ಜನರ ಓಡಾಟಕ್ಕೆ ನಿರ್ಮಾಣಗೊಂಡ ಇಂತಹ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳು ನಗರೀಕರಣ ಪ್ರಕ್ರಿಯೆಯ ಭಾಗಗಳಾಗೇ ಗುರುತಿಸಬಹುದು. ಹಡಗು ನಿರ್ಮಾಣ, ಬೃಹತ್ ಕೈಗಾರಿಕಾ ಕೇಂದ್ರಗಳು, ಸರಕಾರಿ ಕಛೇರಿಗಳು ಇಂದಿಗೂ ಪ್ರಖ್ಯಾತಿಯನ್ನು ಹೊಂದಿವೆ.

**ಕಲ್ಕತ್ತಾ ಮತ್ತು ಪೂರ್ವಭಾರತ**

ಭಾರತ ಉಪಖಂಡದ ಪಶ್ಚಿಮ ತೀರದ ಕೊನೆಯ ಬಂದರು ಪಟ್ಟಣವೇ ಕಲ್ಕತ್ತಾ. ಈ ನಗರ ಗಂಗಾನದಿಯ ಮುಖಜ ಭೂಮಿಯಲ್ಲಿದೆ. ಹೆಚ್ಚು ಸಂಪದ್ಭರಿತ ಮತ್ತು ಪ್ರಮುಖ ವ್ಯಾಪಾರೀ ಕೇಂದ್ರವಾಗಿತ್ತು. ಅಂದು ಕಲ್ಕತ್ತ ಬಂದರು ಪಟ್ಟಣವು ದೇಶ ವಿದೇಶಗಳಲ್ಲಿಯೂ ರೇಷ್ಮೆ ಮತ್ತು ಮಸ್ಲಿನ್ ಬಟ್ಟೆಯ ವ್ಯಾಪಾರದ ಸ್ವರ್ಗವಾಗಿತ್ತು. ಮುರ್ಷಿದಾಬಾದ್ ಮತ್ತು ಢಾಕಾ (ಈಗಿನ ಬಾಂಗ್ಲಾದೇಶದ ರಾಜಧಾನಿ) ನಗರಗಳು ವ್ಯಾಪಾರದ ಕೇಂದ್ರ ತಾಣಗಳಾಗಿದ್ದವು. ಆರಂಭದ ಹಾಗೂ ೧೮ನೇ ಶತಮಾನದ ಮಧ್ಯದ ಅವಧಿಯಲ್ಲಿ ಮುರ್ಷಿದಾಬಾದ್ ನಗರವು ಬಂಗಾಳದ ನವಾಬನ ಆಡಳಿತದ ಕೇಂದ್ರವಾಗಿ, ಸಿಲ್ಕ್-ರೇಷ್ಮೆ ಬಟ್ಟೆ ತಯಾರಿಸುವ ಕೈಗಾರಿಕಾ ಕೇಂದ್ರ ವಾಗಿ ಮತ್ತು ಮುಖ್ಯ ನದಿ ಬಂದರಾಗಿ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಈ ವೇಳೆಗಾಗಲೇ ಅನೇಕ ಐರೋಪ್ಯ ರಾಷ್ಟ್ರಗಳು ತಮ್ಮ ವ್ಯಾಪಾರ ಸಂಬಂಧವನ್ನು ಇಲ್ಲಿ ಬೆಳೆಸಿದ್ದರು. ಅವರಲ್ಲಿ ಫ್ರೆಂಚರು, ಡಚ್ಚರೊಂದಿಗೆ

ಬ್ರಿಟಿಷರು ವ್ಯಾಪಾರವನ್ನು ಆರಂಭಿಸಿದ್ದರು. ಬಂಗಾಳದ ನವಾಬನು ಇವರುಗಳಿಗೆಲ್ಲಾ ತಮ್ಮ ಕೈಗಾರಿಕಾ ಕೇಂದ್ರಗಳನ್ನು ಸ್ಥಾಪಿಸಲು ಅನುಮತಿ ನೀಡಿದ್ದನು. ಬ್ರಿಟೀಷರು ಖಾಸೀಂ ಬಜಾರ್‌ನಲ್ಲಿ, ಫ್ರೆಂಚರು ಸೈದಾಬಾದ್‌ನಲ್ಲಿ ಮತ್ತು ಡಚ್ಚರು ಕಲ್ಯಾಪುರದಲ್ಲಿ ಆಡಳಿತ ಕಛೇರಿಗಳನ್ನು ತೆರೆದರು.

ಕ್ರಿ.ಶ. ೧೬೫೨ರಲ್ಲಿ ಬಂಗಾಲದ ನವಾಬನ ಅನುಮತಿ ಪಡೆದು ವ್ಯಾಪಾರ ಆರಂಭಿಸುವುದಕ್ಕಿಂತ ಮುಂಚೆ. ಅಂದರೆ, ಕ್ರಿ.ಶ. ೧೬೩೩ರಲ್ಲಿಯೇ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಒರಿಸ್ಸಾದಲ್ಲಿ ತನ್ನ ವಾಣಿಜ್ಯ ನೆಲೆಯನ್ನು ಸ್ಥಾಪಿಸಿತ್ತು. ಮೊದಲಿಗೆ ಕ್ರಿ.ಶ. ೧೬೫೧ರಲ್ಲಿ ಹೂಗ್ಲಿಯಲ್ಲಿ ಕಂಪನಿಯ ಮಳಿಗೆ ತೆರೆಯಲು ಅನುಮತಿ ಪಡೆದು, ತನ್ನ ಅಧೀನದಡಿ ಕೆಲವು ಶಾಖೆಗಳನ್ನು ಪಾಟ್ನಾ, ಬಲಸ್ಸೂರ್ ಮತ್ತು ಕಾಸಿಂ ಬಜಾರ್‌ಗಳಲ್ಲಿ ಆರಂಭಿಸಿತು. ಹೂಗ್ಲಿ ನಗರವು ಬಂಗಾಳಕೊಲ್ಲಿಯಿಂದ ಸುಮಾರು ಒಂದು ನೂರು ಮೈಲುಗಳ ಅಂತರದಲ್ಲಿದ್ದು, ಇದು ಕಲ್ಕತ್ತಾ ನಗರದ ಕಡೆ ಕೇಂದ್ರೀಕರಿಸಲು ಬ್ರಿಟೀಷರಿಗೆ ಬಹಳ ಅನುಕೂಲಕರವಾಗಿತ್ತು. ಕಲ್ಕತ್ತಾ ನಗರದ ಪ್ರದೇಶ ಆಯಕಟ್ಟಿನ ಜಾಗವಾಗಲು ಅದರ ಭೌಗೋಳಿಕ ಲಕ್ಷಣವೇ ಪ್ರಮುಖವಾಗಿತ್ತು. ಮದ್ರಾಸ್ ಹಾಗೂ ಬಾಂಬೆ ಬಂದರು ಪಟ್ಟಣದಂತೆಯೇ ಕಲ್ಕತ್ತಾ ಕೂಡ ಬ್ರಿಟೀಷರ ಪಾಲಿಗೆ ಸುರಕ್ಷಿತ ಸ್ಥಳವಾಗಿತ್ತು. ಹೂಗ್ಲಿ ನದಿಯು ಹೂಗ್ಲಿ ಮತ್ತು ಕಲ್ಕತ್ತಾ ಪಟ್ಟಣಗಳನ್ನು ಬೇರ್ಪಡಿಸುವ ಗಡಿರೇಖೆಯಾಗಿದ್ದು, ಇದು ಆಂಗ್ಲರಿಗೆ ಲಾಭದಾಯಕವಾಗಿತ್ತು. ಏಕೆಂದರೆ ಹೂಗ್ಲಿ ಬಂದರು ಗಂಗಾನದಿ ಬಯಲಿನ ಪ್ರದೇಶ ಮತ್ತು ಪೂರ್ವಭಾರತದ ಪ್ರದೇಶಗಳಿಗೆ ಮಾತ್ರ ವಾಣಿಜ್ಯ ಚಟುವಟಿಕೆ ಸೀಮಿತವಾಗಿತ್ತು. ಮೇಲಾಗಿ ಹೂಗ್ಲಿ ನದಿಯು ಹೂಗ್ಲಿ ಪಟ್ಟಣ ಮತ್ತು ಯುರೋಪಿಯನ್ನರ ಕೈಗಾರಿಕಾ ಕೇಂದ್ರಗಳನ್ನು ಬೇರ್ಪಡಿಸುವ ಸೀಮಾರೇಖೆಯಂತಿತ್ತು. ಬ್ರಿಟೀಷರು ಪುನ: ಕ್ರಿ.ಶ. ೧೬೯೦ರಲ್ಲಿ ಸುತನೂತಿ ಗ್ರಾಮವನ್ನು, ಜೊತೆಗೆ ಕಾಲೀಕತ್ ಮತ್ತು ಗೋವಿಂದಪುರಗಳನ್ನು ತಮ್ಮ ವಶಕ್ಕೆ ಪಡೆದು ಅಭಿವೃದ್ಧಿಗೊಳಿಸಿದರು. ಹೀಗೆ ಮೂರು ಗ್ರಾಮಗಳನ್ನು ಬ್ರಿಟೀಷರು ತಮ್ಮ ವ್ಯಾಪಾರಕ್ಕೋಸ್ಕರ ಅಭಿವೃದ್ಧಿಪಡಿಸಿದ ಪ್ರದೇಶಗಳೇ ಇಂದಿನ ಆಧುನಿಕ ಕಲ್ಕತ್ತಾ ನಗರವಾಗಿ ಬೆಳೆದು ಇಡೀ ವಿಶ್ವವನ್ನೇ ತನ್ನತ್ತ ಸೆಳೆದಿದೆ. ಕ್ರಿ.ಶ. ೧೭೭೭ರಲ್ಲಿ ಕಲ್ಕತ್ತಾ ನಗರವನ್ನು ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿ ಗವರ್ನರ್ ಜನರಲ್‌ನ ಕೇಂದ್ರ ಕಚೇರಿಯಾಗಿ ಮಾಡಲಾಯಿತು. ಇಲ್ಲಿಂದಲೇ ಭಾರತದಲ್ಲಿರುವ ಎಲ್ಲ ಕಂಪನಿಯ ಕೈಗಾರಿಕಾ ಕೇಂದ್ರಗಳನ್ನು ನಿಯಂತ್ರಿಸಲಾಗುತ್ತಿತ್ತು. ಇದರಿಂದ ಮುರ್ಷಿದಾಬಾದು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳಲಾರಂಭಿಸಿತು. ಬರೀ ವ್ಯಾಪಾರವಷ್ಟೇ ಅಲ್ಲ ದೇಶದ ಬಿಡುಗಡೆಗಾಗಿ ಪ್ರಾಣತ್ಯಾಗಮಾಡಿದ ಹೆಸರಾಂತ ರಾಜಕೀಯ ಧುರೀಣರು, ಸಾಹಿತಿಗಳು, ವಿದ್ವಾಂಸರು, ಯೋಧರು, ಹೋರಾಟಗಾರರು, ಚಿಂತಕರು, ಯೋಗಪುರುಷರು, ಬುದ್ಧಿಜೀವಿಗಳಿಗೆ ಜನ್ಮನೀಡಿದ ಕಲ್ಕತ್ತಾನಗರ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ನಿಲ್ಲುತ್ತದೆ. ಸ್ವಾತಂತ್ರ್ಯ, ಸಮಾನತೆ, ಮಾನವೀಯತೆ ಬದುಕಿಗಾಗಿ ಹೋರಾಟದ ಕಿಚ್ಚುಹಚ್ಚಿದ ಬೆಳಕಿನ ನಗರ ಈ ಕಲ್ಕತ್ತಾ. ಭಾರತೀಯ ಸಂಸ್ಕೃತಿಯಲ್ಲಿ ತನ್ನದೇ ಆದ ವಿಭಿನ್ನ ಆಚಾರ-ವಿಚಾರ, ವೇಷ-ಭೂಷಣ, ಭಾಷೆ, ಜನಸಮುದಾಯ, ಧಾರ್ಮಿಕ, ರಾಜಕೀಯ ನಿಲುವುಗಳು ಇಡೀ ರಾಷ್ಟ್ರದಲ್ಲಿಯೇ ಪ್ರತ್ಯೇಕವಾಗಿ ನಿಲ್ಲುತ್ತದೆ. ಈ ಬಂಗಾಳಿ ಬಾಬುಗಳ ನಗರವಾದ ಕಲ್ಕತ್ತ ಇಂದು ಕೋಲ್ಕತ್ತಾ ಆಗಿದೆ.

ಮೇಲೆ ಹೇಳಲಾದ ಎಲ್ಲಾ ಮೂರು ನಗರಗಳು ಬ್ರಿಟಿಷರ ಆರಂಭದ ಈಸ್ಟ್ ಇಂಡಿಯಾ ಕಂಪನಿಯ ಅವಧಿಯಲ್ಲಿ ಹೆಚ್ಚು ಪ್ರಚಲಿತಗೊಂಡತಹವು. ಆದರೆ ಈ ನಗರಗಳು ಹೆಚ್ಚು ಹೆಚ್ಚು ನಗರೀಕರಣ ಪ್ರಕ್ರಿಯೆಯನ್ನು ವ್ಯಾಪಕಗೊಳಿಸಿದ್ದು ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯಿಂದ ಎಂಬುದನ್ನು ಮುಖ್ಯವಾಗಿ ಗುರುತಿಸಬೇಕಾಗುತ್ತದೆ. ಹೊಸ ಯಂತ್ರಗಳ ಅವಿಷ್ಕಾರ, ತಂತ್ರಜ್ಞಾನದ ಬಳಕೆ, ವಿಜ್ಞಾನದ ಕೌಶಲ್ಯ ಮಾನವನ ಬದುಕಿಗೆ ಹೊಸ ತಿರುವನ್ನು, ಅಲೋಚನೆಯನ್ನು ಸೃಷ್ಟಿಸಿತು. ಕ್ರಮೇಣವಾಗಿ ರಾಜಕೀಯ ಹಿಡಿತವನ್ನು ಸಾಧಿಸಿದ ಬ್ರಿಟೀಷರು ತಮ್ಮ ತಿಳುವಳಿಕೆಯ ಮಾದರಿಗಳನ್ನು ಭಾರತದ ಬುದ್ಧಿಜೀವಿಗಳಿಗೆ, ಸಮಾಜ ಸುಧಾರಕರಿಗೆ, ಶಿಕ್ಷಣತಜ್ಞರಿಗೆ ಉಪದೇಶ ನೀಡಲಾರಂಭಿಸಿದರು. ಇದು ಒಂದುರೀತಿಯಲ್ಲಿ ಇಲ್ಲಿನ ಬುದ್ಧಿಜೀವಿಗಳಿಗೆ ಹೊಸ ಅರಿವನ್ನು ಮೂಡಿಸಲು ಹಳೆಯ ಸಿದ್ಧಾಂತಗಳು, ಆಲೋಚನೆಗಳು ಈ ಕೈಗಾರೀಕಾ ಕ್ರಾಂತಿ ಅಥವಾ ಆಧುನಿಕತೆ ಭರದಲ್ಲಿ ಮಂಕಾಗಿ ಕಾಣತೊಡಗಿದವು. ಜನರು ಬಹುಬೇಗ ಈ ವಾತಾವರಣಕ್ಕೆ ಹೊಂದಿಕೊಂಡರು ಅಥವಾ ಹೊಂದಿಕೊಳ್ಳುವಂತೆ ಆಗಿಬಿಟ್ಟರು.

ಬ್ರಿಟನ್ನಿನ ಕೈಗಾರಿಕಾ ಕ್ರಾಂತಿಯ ಪರಿಣಾಮ ಕ್ರಮೇಣ ಭಾರತೀಯ ನೆಲದ ಮೇಲೆ ದುಷ್ಪರಿಣಾಮಗಳನ್ನು ಬೀರಲಾರಂಭಿಸಿತು. ಆರಂಭದಲ್ಲಿ ಈ ನೆಲದಿಂದಲೇ ರಫ್ತುಗೊಳ್ಳುತ್ತಿದ್ದ ಹತ್ತಿ ಉಡುಪುಗಳು, ಬಟ್ಟೆಗಳು ತಿರುವು ಮುರುವಾಗಿ ಇಂಗ್ಲೆಂಡಿನಿಂದ ಆಮದು ಮಾಡಿಕೊಳ್ಳುವಂತಹ ಸ್ಥಿತಿಗೆ ಬಂದಿತು. ಅಂದರೆ ಇಲ್ಲಿಂದ ಕಚ್ಚಾ ಹತ್ತಿ, ರೇಷ್ಮೆಗಳು ರಫ್ತಾಗಿ, ಇಂಗ್ಲೆಂಡಿನಿಂದ ಸಿದ್ಧ ಉಡುಪುಗಳು ಹಾಗೂ ಇತರೇ ಕೈಗಾರಿಕಾ ವಸ್ತುಗಳು ಆಮದುಗೊಳ್ಳಲಾರಂಭಿಸಿದವು. ಈ ಆಧುನಿಕ ಕೈಗಾರಿಕೀಕರಣದ ಪ್ರಕ್ರಿಯೆಯಲ್ಲಿ ತೊಡಗಿದ ಸಂದರ್ಭದಲ್ಲಿ ಪಾರಂಪರಿಕ ಕೈಗಾರಿಕಾ ಪದ್ಧತಿಗಳು, ವಿಧಾನಗಳು ಸ್ಪರ್ಧಿಸಲಾಗದೇ ಸೋತವು. ಅನೇಕ ವರ್ಷಗಳಿಂದ ಪೋಷಿಸಲ್ಪಟ್ಟ ಜವಳಿ ಕೈಗಾರಿಕೆಗಳು ಉತ್ಪಾದಿಸಿದ ವಸ್ತುಗಳು ಮಾರಾಟವಾಗದೇ, ಕೊಳ್ಳಲಾಗದ ಜನರಿಲ್ಲದೆ ನಿಷ್ಕ್ರಿಯೆಗೊಂಡವು. ರೋಗಗ್ರಸ್ತ ಉದ್ದಿಮೆಗಳಾದವು.

ಮೊದಲು ಈ ಕೈಗಾರಿಕೀಕರಣ ನೀತಿಯನ್ನು ಬ್ರಿಟಿಷರು Presidency ನಗರಗಳಲ್ಲಿ ಅಂದರೆ ಮದ್ರಾಸ್, ಬಾಂಬೆ ಹಾಗೂ ಕಲ್ಕತ್ತಗಳಲ್ಲಿ ಜಾರಿಗೊಳಿಸಿದರು. ಏಕೆಂದರೆ ಅಂದು ಮೂರುನಗರಗಳು ಕಂಪನಿಯ ಆಡಳಿತ ಹಾಗೂ ವ್ಯಾಪಾರದ ಕೇಂದ್ರಗಳಾಗಿದ್ದು, ನೇರವಾಗಿ ಈ ಪ್ರಭಾವಕ್ಕೆ ಒಳಗಾದವು. ಅಲ್ಲಿ ಸ್ಥಾಪಿತಗೊಂಡಿದ್ದ ಕೈಗಾರಿಕೆಗಳೆಲ್ಲವೂ ಆಧುನೀಕರಣಗೊಳಿಸಲ್ಪಟ್ಟವು. ಇಂತಹ ಕೈಗಾರಿಕೆ ಪ್ರದೇಶಗಳಿಂದ ಸರಕುಗಳನ್ನು ಸಾಗಿಸಲು ಅನುಕೂಲವಾಗುವಂತೆ ರೈಲು ನಿರ್ಮಾಣದ ಕೈಗಾರಿಕೆಗಳು ಹುಟ್ಟಿಕೊಂಡವು.. ಹೊಸ ರೈಲುಮಾರ್ಗಗಳನ್ನು ಹಾಕಲಾಯಿತು. ಇದರಿಂದ ಹಾದುಹೋಗುವ ಅಕ್ಕಪಕ್ಕದ ಊರು ಹಳ್ಳಿಗಳೆಲ್ಲಾ ವ್ಯಾಪಾರಿ ಕೇಂದ್ರಗಳಾಗಿದ್ದುದಲ್ಲದೇ ನವ ನಗರಗಳಾಗಿ ರೂಪುಗೊಂಡವು. ಕೆಲವೊಂದು ಹಳೇ ನಗರಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಲಾರಂಭಿಸಿದವು. ಹೀಗೆ ಬ್ರಿಟಿಷರು ಜಾರಿಗೊಳಿಸಿದ ಹೊಸಬಗೆಯ ಕೈಗಾರಿಕಾ ನೀತಿ ದೇಶೀ ಕೈಗಾರಿಕೆಗಳ ಅವನತಿಗೆ ದಾರಿಮಾಡಿಕೊಟ್ಟಿತು. ಒಂದು ಕಡೆ ಐರೋಪ್ಯರಾಷ್ಟ್ರಗಳು ಕೈಗಾರಿಕೀಕರಣದಿಂದ

ಅಭಿವೃದ್ಧಿ ಹೊಂದುತ್ತಿವೆ. ಇಲ್ಲಿ ಕೈಗಾರಿಕೀಕರಣದಿಂದ ಅವಸಾನ ಸ್ಥಿತಿ ತಲುಪಿತ್ತು. ಆದ್ದರಿಂದ ಆ ಕಾಲವನ್ನು ಭಾರತದ ಸಂದರ್ಭದಲ್ಲಿ Industrial Decline ಎಂದು ಕರೆಯುತ್ತಾರೆ. "While Western countries were experiencing Industrialisation, India suffered a period of Industrial Decline. This process has been described as De Industrialisation. (A New Look on Modern Indian History, B.L. Grover, S. Grover, S. Chand & Co. Ltd. 1990, p. 592)

ಬ್ರಿಟಿಷರ ರಾಜಕೀಯ ಮತ್ತು ಆರ್ಥಿಕ ನೀತಿಗಳು ತಾರತಮ್ಯದಿಂದ ಕೂಡಿರುವುದಾಗಿದ್ದು, ಕೈಗಾರಿಕೆಗಳ ಅಭಿವೃದ್ಧಿಗಾಗಿ ದೇಶದ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳನ್ನು ಅವ್ಯಾಹತವಾಗಿ ಲೂಟಿ ಮಾಡತೊಡಗಿದರು. ತಮ್ಮ ಅನುಕೂಲಕ್ಕೊಸ್ಕರ ನಿರ್ಮಿಸಿಕೊಂಡ ಬಂದರುಗಳು, ರೈಲುಗಳು, ನೀರಾವರಿ ಕಾಮಗಾರಿಗಳು ಯಾವತ್ತೂ ಭಾರತೀಯರ ಅದರಲ್ಲಿ ಬಹು ಜನವಾಸಿಗಳ ಗ್ರಾಮೀಣ ಪ್ರದೇಶಗಳ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡಿರಲಿಲ್ಲ. ಬದಲಿಗೆ ಅವರ ಆಡಳಿತ, ವ್ಯಾಪಾರ ಮತ್ತು ವಿದೇಶಿ ವಿನಿಮಯದ ಲಾಭವನ್ನು ರಕ್ಷಿಸಿಕೊಂಡು ವೃದ್ಧಿಸುವುದಾಗಿತ್ತು. ಈ ಎಲ್ಲಾ ಪ್ರಕ್ರಿಯೆಗಳು ನಗರೀಕರಣದ ದಿಕ್ಕಿನಲ್ಲಿ ಒಂದು ರೀತಿಯ ಆಧುನಿಕತೆಯನ್ನು ಕೊಟ್ಟಿದ್ದರೂ ಕೂಡಾ ದೇಶೀ ಕೈಗಾರಿಕೆಗಳನ್ನೆಲ್ಲಾ ನಿರ್ನಾಮಗೊಳಿಸಿದವು. ಎಷ್ಟೋ ಸಾಂಪ್ರದಾಯಿಕ ಕುಟುಂಬಗಳ ಕಸುಬುದಾರರು ಹಳ್ಳಿಗಳಲ್ಲಿ ಕೆಲಸವಿಲ್ಲದೇ ಉದ್ಯೋಗ ಅರಸಿ ಕೈಗಾರಿಕಾ ನಗರಗಳಿಗೆ ವಲಸೆ ಹೋಗುವ ಸ್ಥಿತಿ ಬಂದಿತು.

ಕೈಗಾರೀಕರಣದ ಫಲವಾಗಿ ಭೂಮಿಗೆ, ಕೃಷಿಗೆ ಸಂಬಂಧಿಸಿದ ಅನೇಕ ಆಡಳಿತ ಸುಧಾರಣೆ ಕಾನೂನುಗಳು ಜಾರಿಗೊಳಿಸಲ್ಪಟ್ಟವು. ಶ್ರೇಣಿಪದ್ಧತಿ, ಭೂಹಿಡುವಳಿದಾರ ಪದ್ಧತಿ ಜಾರಿಗೆ ಬಂದವು. ಪ್ರಮುಖವಾಗಿ ಜಮೀನ್ದಾರಿ ಪದ್ಧತಿ, ಮಹತ್‌ವಾರಿ ಪದ್ಧತಿ ಮತ್ತು ರಾಯ್‌ಬಾರಿ ಪದ್ಧತಿ. "ಇಂತಹ ಪದ್ಧತಿಗಳು ಭಾರತೀಯ ಸಮಾಜದಲ್ಲಿ ಹೊಸ ಭೂ ಒಡೆಯರ ವರ್ಗಗಳು, ಕುಟುಂಬಗಳು, ಮನೆತನಗಳು ನಿರ್ಮಾಣಗೊಳ್ಳಲು ಕಾರಣವಾದವು." (ದಕ್ಷಿಣಭಾರತದ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಡಾ.ಎಸ್.ಚಂದ್ರಶೇಖರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೦) ಭೂಮಾಲೀಕರು, ಬಂಡವಾಳಶಾಹಿಗಳು, ಜಮೀನ್ದಾರರು, ಜಾಗೀರದಾರರು, ಲೇವಾದೇವಿ ವರ್ಗಗಳು ತಲೆ ಎತ್ತಿದವು. ಅನೇಕರು ಭೂಹೀನರಾಗಿ ಕೃಷಿ ಹಾಗೂ ಕೃಷಿಯಾಧಾರಿತ ಕಸುಬುಗಳಿಂದ ಬದುಕುತ್ತಿದ್ದ ಅವಕಾಶ ತಪ್ಪಿ ನಿರುದ್ಯೋಗಿಗಳಾಗಿ ನಿರ್ಗತಿಕರಾದರು. ಉದ್ಯೋಗ ಅರಸಿ ಕೈಗಾರಿಕಾ ಪ್ರದೇಶಗಳಿಗೆ, ನಗರ ಕೇಂದ್ರಗಳಿಗೆ ವಲಸೆ ಹೋದರು.

ಹೀಗೆ ಬ್ರಿಟೀಷರ ಆಗಮನದಿಂದ ಅನುಕೂಲಗಳೊಂದಿಗೆ ಪ್ರತಿಕೂಲಗಳೂ ಉಂಟಾಗಿರುವುದನ್ನು ಕಾಣಬಹುದಾಗಿತ್ತು. ಭಾರತೀಯ ಕಲೆ, ಸಂಗೀತ, ಸಾಹಿತ್ಯ, ಗುಡಿ ಕೈಗಾರಿಕೆಗಳು, ಪರಂಪರಾಗತ ವೃತ್ತಿಗಳು ಹಾಗೂ ಕಸುಬುದಾರರು ಹಿಂದಕ್ಕೆ ನೂಕಲ್ಪಟ್ಟರು. ಇದನ್ನೇ ನಂಬಿ ಬದುಕು ನಡೆಸುತ್ತಿದ್ದ ವರ್ಗಗಳು ನಗರಗಳ ಕಡೆಗೆ ಧಾವಿಸಿದ್ದರಿಂದ ಹೆಚ್ಚು ಹೆಚ್ಚು ಜನ ಸಾಂದ್ರತೆಯನ್ನು ಹೊಂದಿದ ಬೃಹತ್ ನಗರಗಳು ಸಮಸ್ಯೆಗಳ

ಆಗರವಾದವು. ಕೊಳಗೇರಿಗಳು ಇಂತಹ ನಗರಗಳಲ್ಲೆಲ್ಲ ನಾಯಿಕೊಡೆಗಳಂತೆ ಹು ... ಂತೆ ವಾತಾವರಣ ಬಾಲಕಾರ್ಮಿಕರು, ವೇಶ್ಯೆಯರು, ಪುಡಾರಿಗಳು, ಭೂಗತ ಚಟುವ... ಕಾರಣವಾಯಿತು. ಹಳ್ಳಿಗಳ ಸಮಸ್ಯೆಗಳಿಗೆ ಪೈಪೋಟಿಯಾಗಿ ಬೇರೆ ಬಗೆಯ ಸಮಸ್ಯೆಗ... ಕಾಣಿಸಿಕೊಳ್ಳತೊಡಗಿದವು.

## ೪. ಗ್ರಾಮ ಹಾಗೂ ನಗರ ಪರಿಕಲ್ಪನೆಗಳ ನೆಲೆಯಲ್ಲಿ ಮಹಿಳೆ

ಭಾರತದ ಸಂದರ್ಭದಲ್ಲಿ ಎದುರಾದ ಊಳಿಗಮಾನ್ಯ ಪದ್ಧತಿ, ಸಾಮ್ರಾಜ್ಯಶಾಹಿ, ವಸಾಹತುಶಾಹಿ, ಜಾಗತೀಕರಣ, ನವವಸಾಹತು ತಡೆಗೆ ಪ್ರಜಾಪ್ರಭುತ್ವವಾದರೂ ತನ್ನದೇ ಆದ ಭಿನ್ನತೆಗಳನ್ನು ಹೊಂದಿರುವುದು ಸಮಸ್ಯೆಯ ಸ್ವರೂಪವೇ ಆಗಿದೆ. ಪ್ರಸ್ತುತ ಅಧ್ಯಯದಲ್ಲಿ ಭಾರತವನ್ನೊಂದು ಲಿಂಗಭೇದ ವ್ಯವಸ್ಥೆ ಆಧರಿತ ಸಮಾಜವಾಗಿ ಮೂಲಭೂತವಾಗಿ ಗುರುತಿಸಿಕೊಳ್ಳುತ್ತಲೇ ಅದಕ್ಕೆ ಪೂರಕವಾಗಿ ಭಾರತವು ಹಳ್ಳಿಗಳ ಹಾಗೂ ನಗರಗಳೆಂಬ ಭೇದವನ್ನು ಸಮಸ್ಯೆಯ ಸ್ವರೂಪದಲ್ಲಿಯೇ ಹೊಂದಿದ್ದಾಗಿದೆ ಎಂಬುದನ್ನು ಗುರುತಿಸಿಕೊಳ್ಳುತ್ತದೆ. ಭಾರತೀಯ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ತಮ್ಮ ರಾಜಕೀಯ ಹಕ್ಕುಗಳಿಂದ ಅವಕಾಶವಂಚಿತ ರಾಗಿದ್ದಾರೆ ಎಂಬ ತಾತ್ವಿಕತೆಗೆ ಸಂವಾದಿಯಾಗಿ ಭಾರತದಲ್ಲಿನ ಶೇಕಡಾ ೭೦ರಷ್ಟು ಜನ ಗ್ರಾಮೀಣ ಪ್ರದೇಶದವ ರಾಗಿದ್ದಾರೆ. ಈ ಪ್ರದೇಶಗಳಲ್ಲಿ ಉತ್ಪಾದನೆಯ ಶೇಕಡಾ ೭೦ರಷ್ಟು ಸಂಪನ್ಮೂಲಗಳಾಗಿ ನಿರ್ವಹಿಸಿದ್ದಾರೆ. ಆದರೆ ಅವಕಾಶ ಹಾಗೂ ಅಧಿಕಾರದ ಹಂಚಿಕೆ ಪ್ರಶ್ನೆ ಬಂದಾಗ ಶೇಕಡಾ ೧೦ರಷ್ಟನ್ನು ದಾಟುವುದಿಲ್ಲ ಎಂಬ ಅಂಶವನ್ನು ಪ್ರಮುಖವಾಗಿ ಗಮನಿಸುವಂತಹದ್ದು.

ಇದಕ್ಕೆ ಪರ್ಯಾಯವಾಗಿ ಅವಕಾಶ, ಸೌಲಭ್ಯ, ಅಧಿಕಾರ, ಎಲ್ಲವೂ ನಗರಗಳಲ್ಲಿ ಕೇಂದ್ರಿಕೃತವಾಗಿದ್ದು ಅದು ನಿರಂತರವಾಗಿ ಗ್ರಾಮೀಣ ಜನರ ವಲಸೆಯನ್ನು ಸೃಷ್ಟಿಸುತ್ತದೆ. ಪರಿಣಾಮವಾಗಿ ಗ್ರಾಮೀಣ ನೆಲೆಯ ಗುಡಿ ಕೈಗಾರಿಕೆಗಳು, ಕುಶಲಕರ್ಮಿಗಳು, ಸಾಂಪ್ರಾದಾಯಿಕ ಉದ್ಯೋಗಗಳು ಇನ್ನಿಲ್ಲವಾಗಿ ಇವು ನಗರಗಳಲ್ಲಿ ಬೇರೆ ಬಗೆಯಲ್ಲಿ ಉದ್ಯೋಗ ಸೃಷ್ಟಿಗೆ ಕಾರಣವಾಗುತ್ತವೆ. ಗ್ರಾಮೀಣ ಸಮಸ್ಯೆಗಳು ನಗರಗಳಿಗೆ ವರ್ಗಾವಣೆಯಾಗಿ ಒಂದು ಬಗೆಯ ಸಮಸ್ಯೆಗಳನ್ನು ಹುಟ್ಟುಹಾಕಿದ್ದಾರೆ. ಹಳ್ಳಿಗಳು ಮತ್ತೊಂದು ಬಗೆಯ ಸಮಸ್ಯೆಗಳಿಗೆ ಸಿಲುಕಿವೆ. ಆದಾಯದ ಮೂಲಗಳಿಲ್ಲದೆ ಹಳ್ಳಿಗಳು ಬಡವಾಗುತ್ತವೆ. ಉದ್ಯೋಗ ಅರಸಿ ಹೊರಟ ಅನೇಕ ಗ್ರಾಮೀಣ ಜನರು, ಯುವಕರು, ಮಹಿಳೆಯರು ಬೇರೆ ಬಗೆಯ ಸಂಕಷ್ಟಗಳಿಗೆ ಬಲಿಯಾಗುತ್ತಿದ್ದಾರೆ. ಅಲ್ಲಿನ ಅಧಿಕಾರ ಅವಕಾಶಗಳ ಸುಳಿ ಅವರನ್ನು ಪ್ರಪಾತಕ್ಕೆ ನೂಕುತ್ತಿವೆ. ಅತಿಯಾದ ಜನಸಂಖ್ಯೆಯಿಂದ ನಗರಗಳು ಅಲ್ಲಿನ ಆಡಳಿತ ಸಂಸ್ಥೆಗಳಿಗೆ ತಲೆನೋವಾದರೆ, ಹಳ್ಳಿಗಳು ಅಬ್ಬರದ ಪ್ರಗತಿಯ ಯೋಜನೆಗಳ ಪ್ರಚಾರದ ನಡುವೆ ಮೂಲಭೂತ ಸೌಕರ್ಯಗಳಿಲ್ಲದೆ ಸರ್ಕಾರಗಳಿಗೆ ಸಮಸ್ಯೆಯಾಗಿ ಪರಿಣಮಿಸಿವೆ. ಈ ಎರಡೂ ಪರಸ್ಪರ ಪೈಪೋಟಿ ಮೇಲೆ ತಮ್ಮ ಸಮಸ್ಯೆಗಳನ್ನು ಇನ್ನಷ್ಟು ಬಲಪಡಿಸಿಕೊಳ್ಳುತ್ತಿವೆ.

ನಗರ ಹಳ್ಳಿಗಳೆರಡರ ಸಂದರ್ಭ ಒಂದು ರೀತಿಯಲ್ಲಿ ಬಡತನವು ಮಹಿಳೀಕರಣಗೊಳ್ಳುವಂತೆ ತೋರುತ್ತದೆ. ಏಕೆಂದರೆ ಮಹಿಳೆ ಇನ್ನೊಂದು ಹೆಸರೇ ಸಮಸ್ಯೆಯೆಂಬರ್ಥದಲ್ಲಿ ಬೆಸೆಯಲಾಗುತ್ತಿದೆ. ಇದು ಅವಳು ಹೆಚ್ಚು ಹೆಚ್ಚು ಒತ್ತಡಕ್ಕೆ ಒಳಾಗುಗುವಂತೆ ಮಾಡುವುದರ ಮೂಲಕ ಅಸಹಾಯಕಳನ್ನಾಗಿಸುತ್ತಿದೆ. ಸಾರ್ವಜನಿಕ ಜೀವನದಲ್ಲಿ ಪ್ರವೇಶವಿಲ್ಲದೆ ಇದ್ದರೂ ನಗಣ್ಯಳಾಗಿ ಅವಳ ಬೆಳವಣಿಗೆ ಕುಂಠಿತವಾಗಿ ದಾರಿದ್ರ್ಯ ತಾನಾಗಿಯೆ ಆವರಿಸಿಕೊಂಡು ಮಹಿಳೆ-ಬಡತನ ಒಂದೇ ಎಂಬ ಅರ್ಥಕ್ಕೆ ದಾರಿಮಾಡಿಕೊಡುತ್ತದೆ. ಇದರೊಟ್ಟಿಗೆ ಉಳಿದ ಸಮಸ್ಯೆಗಳೂ ಸೇರಿಕೊಂಡು ಇಡೀ ವ್ಯವಸ್ಥೆಯಲ್ಲಿ ಪ್ರಗತಿ ಸಾಧಿಸುವ ವಿಚಾರ ಹೆಚ್ಚಿನ ಭಿನ್ನತೆಗೆ ಕಾರಣವಾಗುತ್ತದೆ. ಹಾಗಾಗಿ ದೇಶದ ಸುಧಾರಣೆಯ ಆದ್ಯತೆಯಲ್ಲಿ ಹಳ್ಳಿ ನಗರಗಳಲ್ಲಿ ಯಾವುದನ್ನು ಆರಿಸಬೇಕು ಎಂಬುದು ತೊಡಕಿನ ಪ್ರಶ್ನೆಯಾಗಿದೆ. ಸಾಮಾಜಿಕ ವ್ಯವಸ್ಥೆಯ ಚಿಂತನೆಯು ಘೋಷಣೆಯ ಹಂತದಲ್ಲಿ ಹಳ್ಳಿಗಳನ್ನು; ಪ್ರಯೋಗದ ಹಂತದಲ್ಲಿ ನಗರಳನ್ನು ಆಯ್ದುಕೊಂಡು ತಾರತಮ್ಯಗಳನ್ನು ಬಲಪಡಿಸುತ್ತಿವೆ ಎಂಬ ಕೂಗು ದಟ್ಟವಾಗಿ ಕೇಳಿಬರುತ್ತಿದೆ.

ಗ್ರಾಮೀಣ ಹಾಗೂ ನಗರ ಎಂಬ ಪ್ರತ್ಯೇಕತೆಯ ಮಹಿಳಾ ರಾಜಕಾರಣದಲ್ಲಿ ಸಮೀಕರಣಗೊಳ್ಳುವ ಸಾಧ್ಯತೆ, ಈ ಸಮೀಕರಣದಿಂದ ಮಹಿಳಾ ರಾಜಕಾರಣದಲ್ಲಿ ಪ್ರತಿಫಲಿತವಾಗುವ ವಿಧಾನಗಳನ್ನು ಈ ಕೆಳಗಿನ ಅಂಶಗಳ ವ್ಯಾಪ್ತಿಯಲ್ಲಿ ಪರಿಶೀಲಿಸಲು ಯತ್ನಿಸುತ್ತದೆ.

೧. ನಗರಗಳ ಸೌಕರ್ಯ ಸೌಲಭ್ಯಗಳು ಮಹಿಳಾ ರಾಜಕಾರಣಕ್ಕೆ ಪೂರಕವೋ ಮಾರಕವೋ ಅಥವಾ ಇವು ಪುರುಷ ರಾಜಕಾರಣವನ್ನು ಬಲಪಡಿಸುವುದಾಗಿದೆಯೋ?

೨. ಹಳ್ಳಿಗಳ ಅವಕಾಶವಂಚಿತ ಸ್ಥಿತಿ ಎಂಬುದು ಮಹಿಳಾ ರಾಜಕಾರಣದ ಮೇಲೆ ಯಾವ ರೀತಿ ಮತ್ತು ಹೇಗೆ ಪ್ರಭಾವ ಬೀರುತ್ತದೆ?

೩. ಪಂಚಾಯತ್ ರಾಜ್ಯ ಹಂತದಲ್ಲಿನ ರಾಜಕೀಯ ಮೀಸಲಾತಿ ಗ್ರಾಮೀಣ ಮಹಿಳಾ ರಾಜಕಾರಣದ ದಿಕ್ಕನ್ನು ಬದಲಾಯಿಸಿದೆಯೇ?

೪. ನಗರ ಹಾಗೂ ಗ್ರಾಮೀಣವೆಂಬ ಪ್ರತ್ಯೇಕತೆ ಅಥವಾ ಭೇದವನ್ನು ಹಾದು ಏಕತ್ರವಾಗಿ ಹರಿಯಬಹುದಾದ ಮಹಿಳಾ ರಾಜಕಾರಣದ ಪ್ರಜ್ಞೆಯನ್ನು ಗುರುತಿಸಬಹುದೇ?

೫. ಈ ಎರಡು ಪ್ರದೇಶಗಳ ಭಿನ್ನತೆಗೆ ಅನುಗುಣವಾಗಿ ಮಹಿಳಾ ರಾಜಕಾರಣದಲ್ಲಿಯೇ ಭಿನ್ನತೆಯನ್ನು ಕಾಣಬಹುದಾದ ಸಾಧ್ಯತೆ ಇದೆಯೇ?

ನಗರಗಳಲ್ಲಿ ಉತ್ತಮ ಶಿಕ್ಷಣ ಹೊಂದಿದ ಮಹಿಳೆ ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಗೆ ಸರಿಗಟ್ಟುವಲ್ಲಿ ಕೊಂಚ ಮುಂದೆಯೇ ಇರುತ್ತಾರೆ. ನಗರಗಳಲ್ಲಿ ಸಿಗುವ ಶಿಕ್ಷಣ, ಅವಕಾಶ, ಸಮಾಜದ ಹಿನ್ನಲೆಗಳು ಗ್ರಾಮೀಣ ಮಹಿಳೆಗೆ ಕನಿಷ್ಠ ಪ್ರಾಥಮಿಕ ಶಿಕ್ಷಣ ಹೊಂದುವಲ್ಲಿಯೂ ಪರಿಸ್ಥಿತಿ ವ್ಯತಿರಿಕ್ತವಾಗಿರುತ್ತದೆ. ಹೀಗೆ ಶಿಕ್ಷಣ ಪಡೆದವರು ಹಳ್ಳಿಗಳಲ್ಲಿ ಪುನಃ ಬಂದು ವಾಸಿಸಲು ಇಷ್ಟಪಡುವುದಿಲ್ಲ. ಏಕೆಂದರೆ ಅವರಷ್ಟೇ ಅಲ್ಲ. ಅವರ

ಮುಂದಿನ ಪೀಳಿಗೆಯ ಮಕ್ಕಳ ಭವಿಷ್ಯದ ದೃಷ್ಟಿಯಿಂದಾಗಿ ನಗರಗಳಲ್ಲಿಯೇ ನೆಲೆಸುವುದರಿಂದ ಹಳ್ಳಿಗಳು ಇನ್ನೂ ಅದೇ ಸ್ಥಿತಿಯಲ್ಲಿರುತ್ತವೆ. ಅವೆರಡರ ನಡುವಿನ ವ್ಯತ್ಯಾಸ ಇನ್ನಷ್ಟು ವ್ಯಾಪಕವಾಗುತ್ತಿದೆ. ಹಳ್ಳಿಗಳ ಜಮೀನುದಾರರು ಅಥವಾ ಭೂಮಾಲಿಕರು ಕೂಡಾ ನಗರಗಳಲ್ಲಿದ್ದುಕೊಂಡೇ ವ್ಯವಸಾಯ, ವ್ಯಾಪಾರಕ್ಕೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸುತ್ತಿರುವುದು ನಮ್ಮ ಕಣ್ಣ ಮುಂದೆಯೇ ದೊರಕಿವೆ. ಮೂಲತಃ ಹಳ್ಳಿಗಳು ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಕಸುಬುಗಳ ಆಧಾರಿತವಾಗಿವೆ. "ವ್ಯವಸಾಯವನ್ನು ಅವಲಂಭಿಸಿರುವವರು ಬಹಳ ಜನರಿದ್ದರೂ, ಅದರಲ್ಲಿ ವಾಸ್ತವವಾಗಿ ದುಡಿಯುವವರು ಅಥವಾ ತೊಡಗಿರುವವರು ಅಥವಾ ಅವಶ್ಯವಾಗಿರುವವರು ಆರ್ಥಿಕ ಆದಾಯದ ಯಾವ ಮೂಲವನ್ನು ಒದಗಿಸಲಾರದು. Too many cooks spoil the broth ಹಾಗಾಗಿ ನಿರುದ್ಯೋಗ ಹೆಚ್ಚಿದಂತೆ ಸಮಾಜಕ್ಕೆ ದುಷ್ಪರಿಣಾಮಗಳುಂಟಾಗಲು ಕಾರಣವಾಗುತ್ತವೆ." (Elementary Indian Economics, K.K.Dewett, J.D. Varma; S. Chand and Co. Ltd, 1990, P. 474)

## ೫. ಗ್ರಾಮ ಹಾಗೂ ನಗರಗಳ ಪ್ರಸ್ತುತ ದಿನಮಾನದ ಬಿಕ್ಕಟ್ಟುಗಳು

ದೇಶ ಸ್ವಾತಂತ್ರ್ಯವಾದ ಆರಂಭದ ದಶಕಗಳಲ್ಲಿ ಕೃಷಿಗೆ ಹಾಗೂ ಅದರ ಸಂಬಂಧಿತ ವಲಯಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಾಗ್ಯೂ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಬೃಹತ್ ಕೈಗಾರಿಕೆಗಳು, ಉಪಕರಣಗಳು, ಸ್ಥಾವರಗಳು ನಗರಗಳಲ್ಲಿ ಕೇಂದ್ರೀಕೃತವಾಗಿದ್ದರಿಂದ ಹಳ್ಳಿಗಳು ತಮ್ಮ ಆದಾಯದ ಮಾರ್ಗಗಳನ್ನು ಕಂಡುಕೊಂಡರೂ ನಗರಗಳಿಗೆ ಸಮಾನಾಂತರವಾಗಿ ಅವಕಾಶಗಳನ್ನು ಸವಲತ್ತುಗಳನ್ನು ಹೊಂದಲಾಗಲಿಲ್ಲ. ಬ್ರಿಟೀಷರು ಹೊಸ ಕೈಗಾರಿಕ ನೀತಿಗಳನ್ನು ಬಹುಬೇಗನೇ ಅಳವಡಿಸಿ ಕೊಳ್ಳಲು ಕಾರಣ ಇಂಗ್ಲೆಂಡಿನಲ್ಲಾದ ಕೈಗಾರಿಕಾ ಕ್ರಾಂತಿ. ಈ ಕ್ರಾಂತಿಯಿಂದಾಗಿ ಭಾರತದಲ್ಲಿನ ಗುಡಿ ಕೈಗಾರಿಕೆಗಳು, ಕರಕುಶಲಕರ್ಮಿಗಳು ಸೊರಗಿದವಲ್ಲದೆ ಕಣ್ಮರೆಯಾಗತೊಡಗಿದವು. ಇದರೊಂದಿಗೆ ಹೊಸದಾಗಿ ಭೂವ್ಯವಸ್ಥೆ ಮಾಡಿದ ಪರಿಣಾಮವಾಗಿ ಗ್ರಾಮೀಣ ಹಾಗೂ ಕೆಳವರ್ಗಕ್ಕೆ ಸೇರಿದ ಜನರು ತಮ್ಮ ಪಾರಂಪರಿಕ ವರಮಾನ ಉದ್ಯೋಗಗಳಿಂದ ವಂಚಿತರಾದರು. ಭಾರತದ ವಿಭಜನೆಯ ಸಂದರ್ಭದಲ್ಲಿ ಆಗಿದ್ದು ಇದೇ. ಭಾರತ ಪಾಕಿಸ್ಥಾನ ದೇಶಗಳ ಅಸ್ತಿತ್ವದಿಂದ ಬ್ರಿಟಿಷ್ ಭಾರತದಲ್ಲಿದ್ದ ಅನೇಕ ಕೈಗಾರಿಕೆ, ಕಾರ್ಖಾನೆಗಳು ಮುಚ್ಚಲ್ಪಟ್ಟವು. ಅಥವಾ ಮುಚ್ಚುವ ಸ್ಥಿತಿ ತಲುಪಿದವು. ಕೆಲವು ಪ್ರದೇಶಗಳು ಯಥೇಚ್ಛವಾಗಿ ಕಚ್ಚಾ ಸಾಮಗ್ರಿಗಳನ್ನು ಬೆಳೆಯುತ್ತಿದ್ದರೂ ಅವುಗಳನ್ನು ಕೊಳ್ಳಲು ಕೈಗಾರಿಕೆಗಳಿಗೆ ಸಾಗಿಸಲೂ ಜನರೂ ಇರಲಿಲ್ಲ. ಅನೇಕ ಕೈಗಾರಿಕೆ ವಲಯಗಳು ಪಶ್ಚಿಮ ಬಂಗಾಳದಲ್ಲಿದ್ದರೆ, ಸೆಣಬು ಬೆಳೆಯುವ ವಿಶಾಲ ಭೂ ಪ್ರದೇಶ ಪೂರ್ವ ಬಂಗಾಳದಲ್ಲಿ (ಈಗಿನ ಬಾಂಗ್ಲಾದೇಶ) ದ್ದರೂ ಭಾರೀ ಆರ್ಥಿಕ ಹಿನ್ನಡೆಗೆ ಕಾರಣವಾಯಿತು. ಈ ಅಂಶಗಳನ್ನು ಮನಗಂಡ ಆಗಿನ ನೆಹರೂ ಸರಕಾರ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೬-೬೧) ಕೈಗಾರಿಕಾ ವಲಯಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು. ಮುಂದಿನ ಪಂಚವಾರ್ಷಿಕ ಯೋಜನೆಗಳಲ್ಲಿಯೂ ಸೆಣಬು, ಹತ್ತಿ, ಕಬ್ಬು, ಬೆಳೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಯಿತು. ಈ ಹೊತ್ತಿಗೆ

೭೯ ಸೆಣಬು ಕೈಗಾರಿಕೆಗಳು ಬಹುತೇಕ ಕಲ್ಕತ್ತದ ಹೂಗ್ಲಿ ನದಿ ಪ್ರದೇಶದಲ್ಲಿ ಸ್ಥಾಪಿತಗೊಂಡವು. ಹಾಗೆಯೇ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳು ರೂರ್ಕೆಲಾ (ಒರಿಸ್ಸಾ), ಭಿಲೈ (ಮಧ್ಯಪ್ರದೇಶ) ಮತ್ತು ದುರ್ಗಾಪುರ (ಪ.ಬಂಗಾಳ)ಗಳಲ್ಲಿ ಸ್ಥಾಪಿತವಾದವು. ಈ ಹಿಂದೆ ಸ್ಥಾಪಿತಗೊಂಡಿದ್ದ Tata Iron and Steel Company (TISCO-1907 ಜೆಮ್‌ಶಡ್‌ಪುರ), Mysore Iron Works (೧೯೨೩ ಭದ್ರಾವತಿ) ಕಾರ್ಖಾನೆಗಳು ತಮ್ಮ ಉತ್ಪಾದನೆಯನ್ನು ವೃದ್ಧಿಸಿದವು. ಸಿಮೆಂಟ್, ಸಕ್ಕರೆ ಕಾರ್ಖಾನೆಗಳು, ರಸಗೊಬ್ಬರ ಕಾರ್ಖಾನೆಗಳು ಉತ್ಪಾದನೆಗೆ ಮಹತ್ವ ಕೊಟ್ಟವು. (Elementary Indian Economics, K.K.Devett, J.D.Varma, S.Chand and Company Ltd, 1990 P. 254-262) ಭಾರೀ ಕೈಗಾರಿಕೆಗಳು, ಆಣೆಕಟ್ಟುಗಳು, ನೀರಾವರಿ ಕಾಮಗಾರಿಗಳು, ವ್ಯಾಪಾರ ವೃತ್ತಿ ವಾಣಿಜ್ಯಕ್ಕೆ ಸಂಬಂಧಿಸಿದ ವಿದೇಶೀ ನೀತಿಗಳು ಬದಲಾವಣೆಗಳಿಗೊಳಪಟ್ಟವು.

ಹೀಗೆ ಹೊಸದಾಗಿ ನಿರ್ಮಿಸಲಾದ ಬೃಹತ್ ಆಣೆಕಟ್ಟು ಪ್ರದೇಶ. ಕೈಗಾರಿಕ ಪ್ರದೇಶಗಳು, ಬೃಹತ್ ನೀರಾವರಿ ಯೋಜನೆಗಳು, ಶಕ್ತಿ ಸ್ಥಾವರಗಳು, ಉತ್ತಮ ಸಾರಿಗೆ ಸಂಪರ್ಕಗಳ, ವಿಜ್ಞಾನ ಮತ್ತು ತಂತ್ರಜ್ಞಾನ ಸೌಲಭ್ಯಗಳಿಂದ ಹೆಚ್ಚಿನ ಜನನಿಬಿಡತೆಹೊಂದಲು ನಗರಗಳ ಉಗಮಕ್ಕೆ, ಬೆಳವಣಿಗೆಗೆ ದಾರಿಯಾಯಿತು. ಈ ನಗರಗಳಲ್ಲಿ ವಾಸಿಸುವ ಜನರಿಗೆ ಅನುಕೂಲವಾಗುವಂತೆ ಶಾಲೆ ಕಾಲೇಜುಗಳನ್ನು, ಆಸ್ಪತ್ರೆಗಳನ್ನು, ವಸತಿಗೃಹಗಳನ್ನು,ಪ್ರವಾಸೋದ್ಯಮ ತಾಣಗಳನ್ನು ನಿರ್ಮಿಸಿ ಕೇಂದ್ರಸ್ಥಳಗಳಾಗುವಂತೆ ಆಡಳಿತ ಸಂಸ್ಥೆಗಳು ಅಭಿವೃದ್ಧಿಗೊಳಿಸಿದವು. ಸಹಜವಾಗಿ ಬಾಂಬೆ, ಕೋಲ್ಕತ್ತಾ, ದೆಹಲಿ, ಮದ್ರಾಸ್, ಲಕ್ನೋ, ಪಾಟ್ನಾ, ಪುಣೆ, ನಾಗಪುರ, ಹೈದರಾಬಾದ್, ಬೆಂಗಳೂರು ಇತ್ಯಾದಿ ನಗರಗಳು ಕೈಗಾರಿಕೀಕರಣಗಳೊಂದಿಗೆ ಬೆಳೆದ ಪಟ್ಟಣಗಳಾದವು. ಇಲ್ಲಿನ ಬೃಹತ್ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ದೂರದ ಊರುಗಳಿಂದ ಬಂದಿರುವರಲ್ಲದೇ ತಮ್ಮ ರಾಜ್ಯದವರೆಂತಲೋ ಕರೆತರುವುದರ ಮೂಲಕ ಜನಸಾಂದ್ರತೆ ಜಾಸ್ತಿಯಾಯಿತು. ಇದರೊಂದಿಗೆ ಆಡಳಿತದ ನೀತಿಗಳು,ಯೋಜನೆಗಳು ಹಳ್ಳಿಗಳನ್ನು ಕೇಂದ್ರವಾಗಿಟ್ಟು ಕೊಂಡರೂ ಕೂಡ ನಗರಗಳೇ ಹೆಚ್ಚಿನ ಫಲಾನುಭವಿಗಳಾಗುತ್ತಿರುವುದು ಜನರ ಆಕರ್ಷಣೆಗೆ ಕಾರಣವಾಯಿತು.

ಒಂದು ರೀತಿಯಲ್ಲಿ ಹಳ್ಳಿಗಳು ಮೂಲಭೂತ ಸೌಕರ್ಯಗಳ ಸೌಲಭ್ಯ ಪಡೆದುಕೊಳ್ಳಲು ಪ್ರಯತ್ನಿಸುತ್ತಿದ್ದರೆ, ನಗರಗಳಾದರೂ ಇದಕ್ಕೆ ವಿರುದ್ಧವಾಗಿ ಇವುಗಳ ಕೊರತೆಯನ್ನನುಭವಿಸುತ್ತಿವೆ. ಅನೇಕ ಮೆಟ್ರೋಪಾಲಿಟನ್ (Cosmopolitan) ನಗರಗಳು ಸೌಲಭ್ಯಗಳ ಜೊತೆಗೆ ಉದ್ಯೋಗದ ಸಮಸ್ಯೆಯನ್ನೂ ಎದುರಿಸುತ್ತಿವೆ. ಕೇರಳ ರಾಜ್ಯದ ನಗರಗಳಲ್ಲಿನ ನಿರುದ್ಯೋಗ ಸಮಸ್ಯೆ ಸಾಮಾಜಿಕ, ರಾಜಕೀಯ ದುಷ್ಪರಿಣಾಮಗಳನ್ನು ಬೀರುತ್ತಿರುವುದು Sample Survey ಮೂಲಕ ತಿಳಿದುಬಂದಿದೆ. ಅದರಲ್ಲೂ ವಿದ್ಯಾವಂತ ಯುವಕರು ಉದ್ಯೋಗ ಅರಸಿ ನಗರಗಳನ್ನು ತೊರೆದು ಹೊರ ರಾಜ್ಯಗಳಿಗೆ ಅಥವಾ ಹೊರ ದೇಶಗಳಿಗೆ ಹೋಗುತ್ತಿರುವುದು ಗಂಭೀರವಾದ ವಿಚಾರವಾಗಿದೆ. (A Survey conducted by the Department of Economics and Statistics (DES) in 1987 estimated that 20% of the more and 58% of the female labour force were umemployed in urban areas. The

50th round survey conducted by the National Sample Survey Organisation (NSS) ranks as a Sate having the second highest rate of urban unemployment in India".(Economic and politicalweekly, September 28, 2002. page No.4073. Vol.XXXVII No.39 Article by B.A.Prakash) ಆದರೆ ಕೆಲವು ನಗರಗಳಲ್ಲಿ ಇರಬಹುದಾದ ಹೆಚ್ಚಿನ ಉದ್ಯೋಗಾವಕಾಶಗಳು, ಅಧಿಕ ಕೂಲಿ, ಆದಾಯಗಳು, ನಗರಗಳಲ್ಲಿ ಸಿಗುವ ಸವಲತ್ತುಗಳು ಹಳ್ಳಿಗರನ್ನು ನಗರದೆಡೆಗೆ ಸೆಳೆದವು. ಹಳ್ಳಿಗಳಲ್ಲಿ ಕೃಷಿ ಕೂಲಿ, ವ್ಯಾಪಾರ ಮಾಡುವವರೆಲ್ಲ ಮಳೆ ಇಲ್ಲವೆಂತಲೋ, ಬೆಳೆ ಹಾನಿಯಾಯಿತೆಂತಲೋ ನಗರಗಳಿಗೆ ವಲಸೆಯಾದರು. ಉನ್ನತ ಶಿಕ್ಷಣ, ಶುಶ್ರೂಷೆ, ಜೀವನ ರಕ್ಷಣೆ ಎಲ್ಲವೂ ನಗರಗಳಲ್ಲಿದ್ದುದರಿಂದ ಸಹಜವಾಗಿ ಹಳ್ಳಿಗರು ಇಲ್ಲಿಗೆ ಬಂದು ವಾಸಿಸತೊಡಗಹತ್ತಿದರು. ಅಷ್ಟೆ ಅಲ್ಲ ರೈತರು ಬೆಳೆದ ಉತ್ಪನ್ನಗಳಿಗೆ ಮಾರುಕಟ್ಟೆಗಳು ಲಭ್ಯವಾಗುತ್ತಿದ್ದು, ಒಳ್ಳೆಯ ಬೆಲೆಯು ಸಿಗುತ್ತಿದ್ದುದು ವಲಸೆಗೆ ಇನ್ನೊಂದು ಕಾರಣ.

ಹೀಗೆ ನಿರಂತರ ವಲಸೆಯಿಂದಾಗಿ ಹಳ್ಳಿಗಳು ತಮ್ಮ ಅಸ್ತಿತ್ವಗಳನ್ನು ಕಳೆದುಕೊಳ್ಳಲಾರಂಭಿಸಿದವು. ಅಲ್ಲಿನ ಜನರು ತಮ್ಮ ಕಸುಬುಗಳೊಂದಿಗೆ ನಗರದ ಅಥವಾ ಕೈಗಾರಿಕಾ ಪ್ರದೇಶಗಳಿಗೆ ನೆಲೆಸಲು ಆರಂಭಿಸಿದ್ದರಿಂದ ಗುಡಿಕೈಗಾರಿಕೆಗಳು ನಿರ್ನಾಮವಾದವು. ಒಂದು ಕಡೆ ಹಳ್ಳಿಗಳು ನಿರ್ನಾಮವಾದರೆ ಅದಕ್ಕೆ ಮುಖವಾಗಿ ನಗರಗಳು ನಿರ್ಮಾಣವಾಗತೊಡಗಿವೆ. ಎಲ್ಲಾ ನೈಸರ್ಗಿಕ ಸಂಪನ್ಮೂಲಗಳನ್ನು ಮಾನವ ಸಂಪನ್ಮೂಲಗಳನ್ನು ಕಳೆದುಕೊಂಡ ಗ್ರಾಮಗಳು ಬರಿದಾದವು, ಇತ್ತ ನಗರಗಳು ಬೆಳೆದು ಅಂತರರಾಷ್ಟ್ರೀಯ ಮಟ್ಟಕ್ಕೆ ತಲುಪುವ ಕ್ರಿಯೆ ಅವ್ಯಾಹತವಾಗಿ ನಡೆಯುತ್ತಿದೆ. ನಗರ ಹಾಗೂ ಗ್ರಾಮಗಳ ನಡುವಿನ ಅಸಹಜವಾದ ಅಂತರವು ಇಡೀ ದೇಶದ ಎಲ್ಲಾ ಅಂಶಗಳ ಮೇಲೆ ಪ್ರಭಾವ ಬೀರಿದೆ. ಇದು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ ಇತ್ಯಾದಿ ಎಲ್ಲ ವಲಯಗಳ ಮೆಲೆ ಪ್ರಭಾವಿಸಿದೆ. ನಗರಗಳಲ್ಲಿ ವಾಸಿಸುವ ಜನ ಹಳ್ಳಿಗಳಲ್ಲಿನ ಜನರಿಗಿಂತ ಬಹುತೇಕ ಕ್ಷೇತ್ರಗಳಲ್ಲಿ ಮುನ್ನಡೆ ಸಾಧಿಸುತ್ತಲೇ ಇದ್ದಾರೆ. ಹಾಗೆಯೇ ಸಮಸ್ಯೆಗಳು ಮತ್ತು ಪರಿಹಾರಗಳಲ್ಲಿಯೂ ಭಿನ್ನತೆಗಳು ಕಾಣುತ್ತಿವೆ. ಉದಾಹರಣೆಗೆ ನಿರುದ್ಯೋಗ ಸಮಸ್ಯೆಯನ್ನು ಗಮನಿಸಿದರೆ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವನ್ನು ಕಾಣುತ್ತೇವೆ. ನಗರಗಳಲ್ಲಿ ವಿದ್ಯಾವಂತ ನಿರುದ್ಯೋಗಿಗಳು, ಹಳ್ಳಿಗಳಲ್ಲಿ ಅವಿದ್ಯಾವಂತ ನಿರುದ್ಯೋಗಿಗಳು ಹಾಗೆಯೇ ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ವ್ಯತ್ಯಾಸವನ್ನು, ಸಂಬಂಧಗಳಲ್ಲಿ ವ್ಯತ್ಯಾಸದ ಪ್ರಭಾವವನ್ನು ಗುರುತಿಸಲಾಗುತ್ತಿದೆ.

ಸ್ವಾತಂತ್ರ್ಯ ನಂತರ ಭಾರತದಲ್ಲಿ ಹಳ್ಳಿಗಳ ಮತ್ತು ನಗರಗಳ ಕಲ್ಯಾಣಕ್ಕಾಗಿಯೇ ಪ್ರತ್ಯೇಕ ಸಚಿವಾಲಯಗಳು ಕಾರ್ಯಾರಂಭ ಮಾಡಿದವು. ಹೆಚ್ಚುತ್ತಿರುವ ಜನಸಂಖ್ಯೆ, ಸಂಪನ್ಮೂಲಗಳ ಬಳಕೆಯ ಜಾಣ್ಮೆಯ ಕೊರತೆ, ಶಿಕ್ಷಣ, ಉದ್ಯೋಗ, ಆದಾಯಗಳ ಸವಲತ್ತುಗಳನ್ನು ಅರಸುತ್ತ ಜನ ನಗರಗಳಿಗೆ ಲಗ್ಗೆ ಇಟ್ಟಿದ್ದರ ಪರಿಣಾಮವಾಗಿ ಹಳ್ಳಿಗಳು ಸದಾ ನಗರಗಳ ಮಾದರಿಯನ್ನು ಅನುಸರಿಸತೊಡಗಿದವು. ಎಲ್ಲವೂ ನಗರೀಕರಣ ಪ್ರಕ್ರಿಯೆ ಕಡೆಗೆ ವಾಲುತ್ತಿದೆ. ಇದಕ್ಕೆ ಸರಕಾರದ ನೀತಿ ನಿಯಮಗಳು, ಯೋಜನೆಗಳು,

ಕಾರ್ಯಕ್ರಮಗಳು ಜನರ ಆಸಕ್ತಿಗಳ ಬೆನ್ನೆಲುಬಾಗಿ ಆಧುನೀಕರಣ, ನಗರೀಕರಣ, ಕೈಗಾರಿಕೀಕರಣ, ಕಂಪ್ಯೂಟರೀಕರಣ ಇತ್ಯಾದಿ ಪರಿಕಲ್ಪನೆಗಳು ಸಾಕಾರಗೊಳ್ಳಲು ಸಾಧ್ಯವಾಗಿಸಿವೆ.

ಆರ್ಥಿಕವಾಗಿ ನಗರಗಳು ಹಳ್ಳಿಗಾಡಿಗಿಂತ ಹೆಚ್ಚು ಸದೃಢವಾಗಿವೆ. ವಿದ್ಯಾವಂತರು, ಬುದ್ದಿಜೀವಿಗಳು, ಸಮಾಜ ಸೇವಕರು, ರಾಜಕಾರಣಿಗಳು, ಅಧಿಕಾರಿಗಳು, ಉನ್ನತ ವರ್ಗಗಳು, ವರ್ತಕರು, ಪಟ್ಟಣಗಳಲ್ಲಿ ಕಾರ್ಯನಿರ್ವಹಿಸುವ ಕೇಂದ್ರಗಳಾಗಿರುವುದರಿಂದ ಸಹಜವಾಗಿ ವ್ಯಾಪಾರ-ವಾಣಿಜ್ಯಗಳು ಭರದಿಂದ ನಡೆಯುತ್ತಿರುತ್ತವೆ. ಯಾವುದೇ ಏರುಪೇರಾದಲ್ಲಿ ತಕ್ಷಣಕ್ಕೆ ಸ್ಪಂದಿಸುವ ಜನ ಹಾಗೂ ಪ್ರತಿಸ್ಪಂದಿಸುವ ಆಡಳಿತ ಯಂತ್ರ ಇರುವುದರಿಂದ ಯಾವತ್ತೂ ಹಳ್ಳಿಗಳಿಗಿಂತ ಮುಂಚೂಣಿಯಲ್ಲಿಯೇ ನಗರಗಳಿರುತ್ತವೆ. ಎಲ್ಲಾ ಹೋರಾಟಗಳು, ಚಳುವಳಿಗಳು, ಆಂದೋಲನಗಳು, ಪ್ರತಿಭಟನೆಗಳು ಇತ್ಯಾದಿಗಳ ಮೂಲ ನೆಲೆ ಗ್ರಾಮೀಣ ಪ್ರದೇಶಗಳಲ್ಲಿದ್ದರೂ ಕೂಡ ಫಲಿತಾಂಶದ ಹಂತದಲ್ಲಿ ಅದರ ಫಲವೆಲ್ಲ ನಗರಗಳು ದೋಚಿಕೊಳ್ಳುತ್ತವೆ. ಈ ತಾರತಮ್ಯ ಹೋಗಲಾಡಿಸಲು ಆಳುವ ಸರಕಾರಗಳ ಎಲ್ಲಾ ಪ್ರಯತ್ನಗಳು ಘೋಷಣೆಗಳ ಹಂತದಲ್ಲಿ ಹಳ್ಳಿಗಳನ್ನು; ಪ್ರಯೋಗದ ಹಂತದಲ್ಲಿ ನಗರಗಳನ್ನು ಆಯ್ದುಕೊಂಡು ತಾರತಮ್ಯವನ್ನು ಇನ್ನಷ್ಟು ಬಲಪಡಿಸುತ್ತವೆ ಎಂಬ ಕೂಗೂ ಕೇಳಿಬರುತ್ತಿವೆ.

ಈ ಅಸಹಜವಾದ ಅಂತರ ಚುನಾವಣೆಯಂತಹ ಪ್ರಸಂಗಗಳಲ್ಲಿಯೂ ಮುಖ್ಯ ಅಂಶವಾಗಿರುತ್ತದೆ. ರಾಜಕೀಯ ಪಕ್ಷಗಳಿಗೆ ಪ್ರತಿಯೊಂದು ಪಕ್ಷವೂ ತನ್ನ ಪ್ರಣಾಳಿಕೆಯಲ್ಲಿ ಹಳ್ಳಿಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು, ಸುಂದರ, ಸ್ವಚ್ಛ ನಗರ ನಿರ್ಮಿಸಲು, ನಾಗರೀಕರ ಸಮಸ್ಯೆ ಬಗೆಹರಿಸುವ ಕಾರ್ಯಕ್ರಮಗಳ ಪ್ರತ್ಯೇಕ ಪಟ್ಟಿಯನ್ನು ಬಿಡಗಡೆಗೊಳಿಸುವುದು ಸಾಮಾನ್ಯ ಸಂಗತಿಯಾಗಿದೆ. ಗ್ರಾಮಪಂಚಾಯತಿಯಿಂದ ಹಿಡಿದು ದೆಹಲಿಯ ಸಂಸತ್ತು, ನಗರ ಚುನಾವಣೆಗಳಲ್ಲಿ ಈ ಆಶ್ವಾಸನೆಗಳು ಹೇರಳವಾಗಿವೆ. ಹಳ್ಳಿಗಳ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಪ್ರತ್ಯೇಕ ಸಚಿವಾಲಯಗಳ ಮೂಲಕ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಶ್ರಮಿಸುತ್ತಿವೆ. ಹಾಗೆಯೇ ನಗರಗಳಿಗಿಂತ ವಸತಿ ಸಮಸ್ಯೆ, ಕುಡಿಯವ ನೀರು, ಚರಂಡಿ ಇತ್ಯಾದಿಗಳ ಬಗ್ಗೆಯೂ ಎರಡೂ ಸರಕಾರಗಳು ಅದೇ ಮಾದರಿಯಲ್ಲಿ ಕಾರ್ಯೋನ್ಮುಖವಾಗಿದ್ದಾಗ್ಯೂ ಈ ಅಂತರವನ್ನು ಕಡಿಮೆಗೊಳಿಸಲು ಸಾಧ್ಯವಾಗುತ್ತಿಲ್ಲ.

ಭಾರತದ ಗ್ರಾಮ ಮತ್ತು ನಗರಗಳ ನಡುವಿನ ಬಿಕ್ಕಟ್ಟಿಗೆ ಎರಡು ಸಮಾಜಗಳ ಮಧ್ಯದ ಭಿನ್ನತೆಯೇ ಆಗಿದೆ ಎಂಬುದು ವಾಸ್ತವವಾದರೂ, ಗ್ರಾಮ ಮತ್ತು ನಗರಗಳೆರಡು ಮಾನವ ಸಮಾಜಗಳೆಂಬುದನ್ನು ಮೊದಲು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಅಭಿವೃದ್ಧಿಯ ಹೆಸರಲ್ಲಿ, ನೆಪದಲ್ಲಿ ನಗರ ಮತ್ತು ಗ್ರಾಮ ಸಮಾಜಗಳೆಂದು ವಿಂಗಡಿಸುತ್ತಿದ್ದೇವೆ. ಮೂಲಭೂತವಾಗಿ ಎರಡೂ ಸಮಾಜಗಳು ಒಂದೇ ಆಗಿವೆ. ಈ ಕಾರಣಕ್ಕಾಗಿಯೇ ಗಿಸ್ಟ್ ಮತ್ತು ಹಾಲ್‌ಬರ್ಟ್‌ರು ಇವೆರಡರ ನಡುವಿನ ವ್ಯತ್ಯಾಸ ಹೆಚ್ಚು ತಾತ್ವಿಕವಾದದು ಹಾಗೂ ಅದು ಬಹುಮಟ್ಟಿಗೆ ತಾತ್ವಿಕ ಕಲ್ಪನೆಯೇ ಆಗಿದೆ ಎಂದಿದ್ದಾರೆ.

ಈ ಎರಡೂ ಸಮಾಜಗಳ ನಡುವೆ ವ್ಯತ್ಯಾಸವೇನೇ ಇದ್ದರೂ ವಾಸ್ತವವಾಗಿ ನಗರ-ಗ್ರಾಮೀಣ ಸಮಾಜಗಳ ಮಧ್ಯೆ ಪರಸ್ಪರ ನಿಕಟ ಸಂಬಂಧ ಹಾಗೂ ಅಂತರಾವಲಂಬನೆ (Interdependency) ಇದೆ. ನಗರಗಳು ಬದಲಾವಣೆ ಗೊಳಪಡುತ್ತವೆ ಹಾಗೆ ಸಮಾಜ ಮುಂದುವರೆದಂತೆಲ್ಲ ಇದರ ಪ್ರಭಾವದಿಂದಾಗಿ ಗ್ರಾಮೀಣ ಸಮಾಜಗಳು ಪರಿವರ್ತನೆಗೊಳಪಡುತ್ತಿರುವುದನ್ನು ಕಾಣಬಹುದು. ಭಿನ್ನತೆಗೆ ಮುಖ್ಯ ಕಾರಣ ಎರಡೂ ಸಮಾಜಗಳ ಜನರು ಜೀವಿಸುವ ಪರಿಸರ, ವಾತಾವರಣದ ವ್ಯತ್ಯಾಸಗಳು. ನಗರ ತಾಂತ್ರಿಕ ಪ್ರಧಾನತೆಯಿಂದ ಕೂಡಿದ್ದು ಕೈಗಾರಿಕೆ, ಉತ್ಪಾದನೆ, ವ್ಯಾಪಾರ, ಸಾರಿಗೆ, ಸಂಪರ್ಕ ಮತ್ತು ಸಮಾಚಾರ, ಸರಕಾರ, ಶಿಕ್ಷಣ ಮುಂತಾದ ಕ್ಷೇತ್ರಗಳನ್ನು ಒಳಗೊಂಡಿರುತ್ತದೆ. ನಗರವು ಅಧಿಕಾರದ ಔನ್ನತ್ಯಕ್ಕೆ, ಹೆಚ್ಚಿನ ಸಂಪತ್ತಿಗೆ ಹಾಗೂ ವಿಶೇಷ ಕಾರ್ಯ ನೈಪುಣ್ಯತಾ ತಿಳುವಳಿಕೆಗೆ ಹೆಸರಾಗಿರುವಂತಹದ್ದು. ಆದರೆ ಗ್ರಾಮ ಪ್ರದೇಶಗಳ ಜನರು ಪಾರಂಪರಿಕ ಕಾರ್ಯ ನೈಪುಣ್ಯತೆ, ಸರಳತೆ ಮುಗ್ಧತೆಗೆ ಮೊದಲ ಸ್ಥಾನ ಪಡೆದಿವೆ.

ನಗರ ಹಾಗೂ ಗ್ರಾಮ ಸಮುದಾಯಗಳ ನಡುವಿನ ಬಿಕ್ಕಟ್ಟುಗಳನ್ನು ಅನೇಕ ಅಂಶಗಳ ಆಧಾರದ ಮೇಲೆ ಗುರುತಿಸಬಹುದು. ಅದರಲ್ಲೂ ಕೈಗಾರಿಕಾ ಕ್ರಾಂತಿಯ ನಂತರದ ಅವಧಿಯಲ್ಲಿ ಹುಟ್ಟಿಕೊಂಡ ನಗರ ಸಮುದಾಯಗಳು ಗಣನೀಯವಾಗಿ ಭಿನ್ನತೆಯ ಪ್ರಮಾಣವನ್ನು ಹೆಚ್ಚಿಸಿವೆ. ಗಾತ್ರ, ಜನಸಂಖ್ಯೆ, ಸಾಮಾಜಿಕ ಸಂಬಂಧಗಳು, ಸಾಮಾಜಿಕ ನಿಯಮಗಳು, ಸಾಮಾಜಿಕ ವಿಘಟನೆ, ಸಾಮಾಜಿಕ ಜೀವನ, ಆರ್ಥಿಕ ಪರಿಸ್ಥಿತಿ, ಸಂಸ್ಕೃತಿ, ಸಾಮಾಜಿಕ ಚಾಲನೆ, ರಾಜಕೀಯ ಶಕ್ತಿ ಮುಂತಾದ ಅಂಶಗಳ ಆಧಾರದ ಮೇಲೆ ನಗರ ಹಾಗೂ ಗ್ರಾಮ ಸಮುದಾಯಗಳ ನಡುವಿರುವ ಭಿನ್ನತೆ ಹಾಗೂ ಬಿಕ್ಕಟ್ಟುಗಳನ್ನು ವಿಶ್ಲೇಷಿಸಬಹುದು. ನಗರ ಸಮುದಾಯಗಳು ಗಾತ್ರದಲ್ಲಿ ಅಂದರೆ ಪ್ರದೇಶ ಹಾಗೂ ಜನಸಂಖ್ಯಾ ದೃಷ್ಟಿಯಿಂದ ಗ್ರಾಮ ಸಮುದಾಯಗಳಿಗಿಂತ ಅಧಿಕವಾಗಿಯೇ ಇರುತ್ತದೆ. ಭಾರತವು ಜನಸಂಖ್ಯಾ ಬಲದಲ್ಲಿ ವಿಶ್ವದ ಎರಡನೇಯ ರಾಷ್ಟ್ರವಾಗಿದ್ದರೆ, ಚೀನಾವು ಪ್ರಥಮ ಸ್ಥಾನದಲ್ಲಿದೆ. "ಆದರೆ ನಮ್ಮ ಜನಸಂಖ್ಯೆ ಬೆಳವಣಿಗೆಯ ಶೇಕಡವಾರು (೨.೧) ಚೀನಾಕ್ಕೆ ಹೋಲಿಸಿದಲ್ಲಿ (೧.೪) ಅಧಿಕವಾಗಿರುವುದು ವಿಶೇಷ. ಅದರಲ್ಲೂ ನಗರಗಳ ಜನಸಂಖ್ಯೆಯು ಗ್ರಾಮೀಣ ಪ್ರದೇಶಗಳಿಗಿಂತ ಹೆಚ್ಚಿನ ರೀತಿಯಲ್ಲಿ ಆಗುತ್ತಿರುವುದು ೧೯೬೧ ರಿಂದ ೧೯೯೧ ರವೆಗೆ ನಡೆಸಿದ ದಶಕವಾರು ಜನಗಣತಿಯಿಂದ ತಿಳಿದು ಬಂದಿದೆ." The percentage of population in rural area has comedown from 82% in 1961 to 74.3% in 1991, while the population living in urban areas has raisen from 18% in 1961 to 25.7% in 1991. The decadal growth rates showa decline for rural population and an increase for urban population during the study period. Over these 1961-71, 1971-81 and 1981-91 three decades rural population has raisen by 2.41%, while urban population has raisen by 5.82%, the difference of 3.35% indicating the tempo of urbanization in our country (Indian cities towards next millenium, R.Ram Mohan Rao, S. Simhadri [article by G. Ramakrishna], Rawat Publications, Jaipur and Delhi, 1999, p. 102-103)

**ಗ್ರಾಮೀಣ ಹಾಗೂ ನಗರ ಜನಸಂಖ್ಯೆ (ದಶಲಕ್ಷಗಳಲ್ಲಿ. ಮಿಲಿಯನ್‌ಗಳಲ್ಲಿ)**

| ಜನಗಣತಿ ವರ್ಷ | ಜನಸಂಖ್ಯೆ | | | ದಶಕವಾರು ವೃದ್ಧಿ | | |
|---|---|---|---|---|---|---|
| | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧೯೬೧ | ೩೬೦ (೮೨.೦) | ೭೯ (೧೮.೦) | ೪೩೯ (೧೦೦.೦) | ೨೦.೮೦ | ೨೫.೪೦ | ೨೧.೬೧ |
| ೧೯೭೧ | ೪೩೬ (೮೦.೧) | ೧೦೯ (೧೯.೯) | ೫೪೮ (೧೦೦.೦) | ೨೧.೯೪ | ೩೭.೯೭ | ೨೪.೮೩ |
| ೧೯೮೧ | ೫೨೫ (೭೬.೭) | ೧೬೦ (೨೩.೩) | ೬೮೫ (೧೦೦.೦) | ೧೯.೫೯ | ೪೬.೭೯ | ೨೫.೦೦ |
| ೧೯೯೧ | ೬೨೭ (೭೪.೩) | ೨೧೭ (೨೫.೭) | ೮೪೪ (೧೦೦.೦) | ೧೯.೪೩ | ೩೫.೬೩ | ೨೩.೨೧ |

Note : Figures in parentheses are percentages in total population

Source : Census of India 1971, 1981, 1991

ಹೀಗೆ ನಗರ, ಗ್ರಾಮೀಣ, ಸಮುದಾಯಗಳ ನಡುವಿನ ಬೆಳವಣಿಗೆಯ ಏರುಪೇರಿನಿಂದಾಗಿಯೂ ಅಂತರ ಇನ್ನಷ್ಟು ವ್ಯಾಪಕವಾಗತೊಡಗಿದೆ. ಭಾರತದ ಬೃಹತ್ ನಗರಗಳಾದ ಮುಂಬೈ, ಕೊಲ್ಕತ್ತಾ, ಡೆಲ್ಲಿ ಮತ್ತು ಚೆನ್ನೈನಂತಹ ನಗರಗಳಲ್ಲಿ ಐದು ದಶಲಕ್ಷ ಜನಸಂಖ್ಯೆ ಸರಾಸರಿ ೧೯೯೧ರ ಜನಗಣತಿಯಂತೆ ದಾಖಲಾಗಿದೆ. ಅಂದರೆ ಇಡೀ ದೇಶದ ಒಟ್ಟು ಜನಸಂಖ್ಯೆಯ ಶೇಕಡಾ ೪.೪ ರಷ್ಟು ಜನಸಮುದಾಯ ಈ ಮೆಟ್ರೋಪಾಲಿಟಿನ್ ನಗರಗಳಲ್ಲಿ ಇದೆ. ಈ ನಾಲ್ಕು ಮಹಾನಗರಗಳಲ್ಲಿ ಒಟ್ಟು ೩೭ ದಶಲಕ್ಷದಷ್ಟು ಜನಸಂಖ್ಯೆಯಿದೆ. ಇಷ್ಟೊಂದು ಏರಿಕೆಗೆ ಕಾರಣ ಎರಡು ಅಂಶಗಳನ್ನು ಗುರುತಿಸಬಹುದು. ಒಂದು ಸಹಜವಾದ ಜನಸಂಖ್ಯಾ ಏರಿಕೆ, ಇನ್ನೊಂದು ವಿವಿಧ ಚಿಕ್ಕ ನಗರಳಿಂದ ಹಾಗೂ ಗ್ರಾಮೀಣ ಪ್ರದೇಶಗಳಿಂದ ವಲಸೆಬರುವ ಜನಸಮೂಹ. ಈ ವಲಸೆಯ ಪರಿಣಾಮ ನಗರ - ಗ್ರಾಮೀಣ ಜನರ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಜೀವನ ಕ್ರಮಗಳ ಮೇಲೆ ಅಗಾಧ ಪರಿಣಾಮ ಬೀರುತ್ತದೆ. ನಗರಗಳ ಪುರುಷ-ಸ್ತ್ರೀಯರ ಸ್ಥಿತಿ-ಗತಿಯು ಗ್ರಾಮೀಣ ಪ್ರದೇಶದ ಪುರುಷ-ಸ್ತ್ರೀಯರಿಗಿಂತ ಭಿನ್ನವಾಗಿಯೇ ಇರುತ್ತದೆ. ಉದಾಹರಣೆಗೆ ಶೈಕ್ಷಣಿಕ ರಂಗದಲ್ಲಿ ಗ್ರಾಮೀಣ ಹಾಗೂ ನಗರ ಪ್ರದೇಶದ ಪುರುಷ-ಸ್ತ್ರೀಯರ ಸಾಕ್ಷರತಾ ಪ್ರಮಾಣವನ್ನು ಬಳ್ಳಾರಿ ಜಿಲ್ಲೆಯಲ್ಲಿ ೧೯೬೧ ರಿಂದ ೧೯೯೧ ರವರೆಗೆ ಇದ್ದ ಶೇಕಡವಾರು ಅಂಕಿಗಳನ್ನು ಕೆಳಕಂಡ ಕೋಷ್ಟಕದ ಮೂಲಕ ಗಮನಿಸೋಣ.

## ಗ್ರಾಮೀಣ ಹಾಗೂ ನಗರ ಪ್ರದೇಶದ ಪುರುಷ-ಸ್ತ್ರೀಯರ ಸಾಕ್ಷರತಾ ಪ್ರಮಾಣ

**(ಶೇಕಡಾವಾರು)**

| ಜನಗಣತಿ ವರ್ಷ | ಪುರುಷರು | | | ಸ್ತ್ರೀಯರು | | |
|---|---|---|---|---|---|---|
| | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧೯೬೧ | ೨೦.೮ | ೪೬.೨ | ೩೨.೨ | ೨.೮ | ೧೮.೬ | ೯.೨ |
| ೧೯೭೧ | ೨೯.೭ | ೫೦.೦ | ೩೫.೩ | ೯.೬ | ೨೮.೩ | ೧೪.೬ |
| ೧೯೮೧ | ೩೫.೩ | ೫೪.೩ | ೪೧.೭ | ೧೨.೬ | ೩೩.೧ | ೧೯.೫ |
| ೧೯೯೧ | ೪೧.೮ | ೬೦.೧ | ೪೮.೬ | ೧೯.೪ | ೪೧.೧ | ೨೭.೪ |
| ಆಧಾರ : ಜಿಲ್ಲಾ ಪಂಚಾಯತ್, ವಾರ್ಷಿಕ ಆಡಳಿತ ವರದಿ, ಬಳ್ಳಾರಿ - ೨೦೦೧ | | | | | | |

ಮೇಲಿನ ಕೋಷ್ಠಕವನ್ನು ಗಮನಿಸಿದಾಗ ೧೯೬೧ರ ಜನಗಣತಿಯ ಪ್ರಕಾರ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಸ್ತ್ರೀಯರ ಸಾಕ್ಷರತೆಯ ಪ್ರಮಾಣಕ್ಕಿಂತ ಇಪ್ಪತ್ತೂರರಷ್ಟು ಹೆಚ್ಚಿದೆ. ೧೯೭೧ರಲ್ಲಿ ಸ್ತ್ರೀಯರ ಸಾಕ್ಷರತೆಯ ಪ್ರಮಾಣ, ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ ಕಡಿಮೆ ಇದ್ದರೂ ೧೯೬೧ರಲ್ಲಿನ ಸ್ತ್ರೀ ಸಾಕ್ಷರತೆಯ ಪ್ರಮಾಣಕ್ಕಿಂತ ಹೆಚ್ಚಿನ ಪ್ರಗತಿ ಸಾಧಿಸಿದೆ. ಶೇಕಡಾ ೫.೪ರಷ್ಟು ಪ್ರಮಾಣ ಹೆಚ್ಚಾಗಿರುವುದನ್ನು ಕಾಣಬಹುದು. ಹೀಗೆ ೧೯೮೧-೧೯೯೧ರಲ್ಲಿ ಗ್ರಾಮೀಣ ಮತ್ತು ನಗರಗಳಲ್ಲಿನ ಪುರುಷ ಸಾಕ್ಷರತೆಯ ಪ್ರಮಾಣ ಒಂದೇ ಗತಿಯಲ್ಲಿ ಹೆಚ್ಚಾಗುತ್ತಾ ಹೋಗಿದೆ. ಆದರೆ ಇದೇ ಅವಧಿಯಲ್ಲಿ ಗ್ರಾಮೀಣ ಹಾಗೂ ನಗರಗಳಲ್ಲಿ ಸ್ತ್ರೀಯರ ಸಾಕ್ಷರತೆಯು ಗಣನೀಯ ಪ್ರಮಾಣದಲ್ಲಿ ಹೆಚ್ಚಾಗಿರುವುದನ್ನು ಈ ಮೇಲಿನ ಅಂಕಿಅಂಶಗಳಿಂದ ತಿಳಿದುಬರುತ್ತದೆ. ಒಟ್ಟಾರೆ ೧೯೬೧-೧೯೯೧ರ ಅವಧಿಯಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಪುರುಷರ ಸಾಕ್ಷರತೆಯ ಪ್ರಮಾಣವು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಸ್ತ್ರೀ ಸಾಕ್ಷರತೆಯ ಪ್ರಮಾಣಕ್ಕಿಂತ ಹೆಚ್ಚಾಗಿದ್ದರೂ ಈ ಅವಧಿಯಲ್ಲಿ ಸ್ತ್ರೀಯರ ಸಾಕ್ಷರತೆಯ ಪ್ರಮಾಣ ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ ಹೆಚ್ಚಿನ ಪ್ರಗತಿ ಹಂತದಲ್ಲಿರುವುದು ಕಂಡುಬರುತ್ತದೆ.

## ೬. ಮಹಿಳಾ ಚಳುವಳಿ ಮತ್ತು ಗ್ರಾಮೀಣ ಮಹಿಳೆ

೧೯೪೭ರ ಸ್ವತಂತ್ರ ಭಾರತದ ಕಾಂಗ್ರೆಸ್ ಸರಕಾರ ಮಹಿಳೆಯರಿಗೆ ಪುರುಷರಂತೆ ಸಮಾನವಾದ ಹಕ್ಕುಗಳನ್ನು, ಅವಕಾಶಗಳನ್ನು ಸಾಮಾಜಿಕ, ಆರ್ಥಿಕ, ರಾಜಕೀಯದಂತಹ ಸಾರ್ವಜನಿಕ ಕ್ಷೇತ್ರಗಳಲ್ಲಿ ಸಂವಿಧಾನಬದ್ಧವಾಗಿ ನೀಡುವುದರ ಮೂಲಕ ತನ್ನ ವಾಗ್ದಾನವನ್ನು ಈಡೇರಿಸಿದಂತೆ ಪರಿಭಾವಿಸಲಾಗಿತ್ತು. ಆಗಿನ ಸರಕಾರ ಕೂಡ ಕೆಲವು ಮುಖ್ಯ ಆಡಳಿತ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯದ ಅವಕಾಶಗಳನ್ನು

ಅವರ ಸರ್ವತೋಮುಖ ಏಳಿಗೆಗೆ ಅನುಕೂಲವಾಗುವಂತೆ ಸಂದರ್ಭಗಳನ್ನು ಸೃಷ್ಟಿಸಿತ್ತು. ಹಲವಾರು ಸ್ತ್ರೀವಾದಿ ಹೋರಾಟಗಾರರನ್ನು ಸರಕಾರದ ಅತ್ಯುನ್ನತ ಅಧಿಕಾರ ಕೇಂದ್ರಗಳಲ್ಲಿ ಪ್ರತಿನಿಧಿಸಿ, ಸ್ಥಾನ-ಮಾನಗಳನ್ನು ಕೊಡಲಾಗಿತ್ತು. ಆಗತಾನೇ ರಾಷ್ಟ್ರೀಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ನಂತರ ಸ್ವತಂತ್ರ ವ್ಯವಸ್ಥೆಗೆ ಒಗ್ಗಿಕೊಂಡಂತಹ ಸಂದರ್ಭದಲ್ಲಿ ಎಲ್ಲರ ಗಮನವು ಕೇಂದ್ರೀಕೃತವಾಗಿದ್ದುದು ನವಭಾರತ ನಿರ್ಮಾಣದ ಕಡೆಗೆ. ಉಳಿದ ಎಲ್ಲ ಚಟುವಟಿಕೆಗಳು, ಹೋರಾಟಗಳು ಬಹುತೇಕ ತಟಸ್ಥವಾಗಿದ್ದವು ಅಥವಾ ಸ್ಥಗಿತಗೊಂಡಿದ್ದವು. ಹೀಗಾಗಿ ಸಾಮಾಜಿಕ ಕಳಕಳಿಯುಳ್ಳವರ ಮಹಿಳಾ ಪರ ಚಳುವಳಿಗಳು ಹೆಚ್ಚು ಕಡಿಮೆ ಇಲ್ಲವೆಂಬಂತಿದ್ದವು. ಇಂತಹ ಹೋರಾಟಗಳ ಮುಂಚೂಣಿಯಲ್ಲಿದ್ದವರು ಸರಕಾರದ ಉನ್ನತ ಸ್ಥಾನಗಳಲ್ಲಿ ಪ್ರಾತಿನಿಧ್ಯವನ್ನು ಹೊಂದಿದ್ದರೂ ಕೂಡಾ ಆ ಪರವಾಗಿ ಧ್ವನಿ ಎತ್ತುವವರು ಇಲ್ಲದಂತಾಗಿ ಚಳುವಳಿಗಳು ನಿರ್ಲಿಪ್ತವಾಗಿದ್ದವು. ೧೯೫೦ ಮತ್ತು ೧೯೬೦ರ ದಶಕಗಳಲ್ಲಿ ಒಟ್ಟಾರೆಯಾಗಿ ಮಹಿಳಾ ಪರವಾದ ಯಾವ ಗಂಭೀರ ಹೋರಾಟಗಳೂ ಘಟಿಸಲಿಲ್ಲವೆಂಬುದು ಚಾರಿತ್ರಿಕ ಸತ್ಯ. ಈ ಅವಧಿಯಲ್ಲಿ ಮೇಲ್ವರ್ಗದ ಕಾಂಗ್ರೆಸ್ ಮಹಿಳಾ ನಾಯಕಿಯರಿಂದ ಕೂಡಿದ ಸಂಘಟನೆಗಳೆಂದರೆ, All India Women's Conference (AIWC) ಮತ್ತು Women's Federation ಗಳಾಗಿದ್ದವು. 'ಇಲ್ಲಿನ ಮಹಿಳೆಯರೆಲ್ಲ ನಗರ ಮಧ್ಯಮ ವರ್ಗಗಳಿಂದ ಬಂದವರಾಗಿದ್ದರು. ಅವರ ಮುಖ್ಯ ಕಾಳಜಿಯು ಸ್ತ್ರೀ ಶಿಕ್ಷಣ, ಮತದಾನದ ಹಕ್ಕು, ಸಾಮಾಜಿಕ ಮತ್ತು ಕಾನೂನಿನ ಹಕ್ಕುಗಳು ಮುಂತಾದವುಗಳನ್ನು ಸಮರ್ಥಿಸಿಕೊಳ್ಳುವುದೇ ಆಗಿತ್ತು. (ಮಹಿಳಾ ಚಳುವಳಿಯ ಮಜಲುಗಳು, ಡಾ. ಎನ್.ಗಾಯತ್ರಿ, ಪು. ೫೯). ಮಹಿಳಾ ಸಂಘಟನೆಗಳ ಹಾಗೂ ಅವರ ಹೋರಾಟಗಳ ವ್ಯಾಪ್ತಿ ಕುರಿತು ಸುಧಾ ಸಕ್ಸೇನಾರು ತಮ್ಮ ಲೇಖನ Globalization : Challenges to Women's Movement ನಲ್ಲಿ ನೇರ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ, "The national organisation of women in India are Predominantly urban middle class in character. Their leadership is elitist. The issues which are taken up for agitation and/or amelioration do not concern the hard realities of the life of the common woman-poverty, unemployment, squalor, disease, malnutrion, caste stratification, religious fanaticism etc. In most ex-colonial societies, India is no exception, there are women's organisations sponsored by the national/regional political parties. It may be seen that except for some of the left-oriented parties, the women's wings of most political parties are nominal organizations and largely pocket editions" (Globalization, Culture and women's Development edited by Raj Mohini Sethi, 1999, p. 321).

ಆರಂಭಿಕ ೧೯೭೦ರ ದಶಕದಲ್ಲಿ ಎಡಪಂಥೀಯ(ಕಮ್ಯುನಿಸ್ಟರು)ರಲ್ಲಿ ಉಂಟಾದ ವೈಚಾರಿಕ ಭಿನ್ನಾಭಿಪ್ರಾಯಗಳು, ಸಂಘಟನೆಯ ಒಳ ಜಗಳಗಳು ಹೊಸ ಆಲೋಚನೆಗಳನ್ನು ಹುಟ್ಟು ಹಾಕಿದವು. ಹೋರಾಟದ ದಿಕ್ಕುಗಳನ್ನೇ ಬದಲಿಸಿದವು. ಕಮ್ಯುನಿಸ್ಟ್‌ನ ಕೆಲವರಂತೂ 'ಕ್ರಾಂತಿ' (ಬದಲಾವಣೆ) ಯ ಅರ್ಥ, ಅದರ ಪರಿಕಲ್ಪನೆಯನ್ನು ತೀವ್ರ ಟೀಕೆಗೆ ಗುರಿಪಡಿಸಿದರು. ಕ್ರಾಂತಿಯ ಪುನರ್ ವ್ಯಾಖ್ಯಾನದ ಕಡೆಗೆ

ಒತ್ತುಕೊಟ್ಟರು. ಹೊಸದಾಗಿ ಹುಟ್ಟಿಕೊಂಡ ಈ ವಿಚಾರಗಳು, ಅವುಗಳ ಪ್ರತಿಪಾದಕರು ಹಾಗೂ ಹೋರಾಟಗಾರರನ್ನು ನವ ಎಡಪಂಥೀಯರೆಂದು (New Leftist) ಅಲ್ಲಲ್ಲಿ ಸಣ್ಣ ಪ್ರಮಾಣದಲ್ಲಿ ಗುರುತಿಸಕೊಳ್ಳತೊಡಗಿದರು. ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ National Federation of Indian Women (NFIW) ಎಂದು, ಇನ್ನೊಂದು ಮಹಿಳಾ ಸಂಘಟನೆಯು ೧೯೮೦ರಲ್ಲಿ ಅಖಿಲಭಾರತ ಪ್ರಜಾ ಸತ್ತಾತ್ಮಕ ಮಹಿಳಾ ಸಂಘಟನೆ ಎಂಬ ಹೆಸರಿನಲ್ಲಿ ಕಾರ್ಯಾಚರಣೆಯನ್ನು ಮುಂದುವರೆಸಿತು. ಈ ಬಗೆಯ ತಿಳುವಳಿಕೆಗಳು ಹಿಂದಿನ ವಿಚಾರಗಳಿಗಿಂತ ಭಿನ್ನವಾಗಿಯೂ, ಪ್ರಸ್ತುತ ಸಂದರ್ಭದ ಅಪೇಕ್ಷಣೀಯ ಸಂಗತಿಗಳಾದವು. ಎಡಚಿಂತನೆಯು ಸ್ತ್ರೀವಾದಕ್ಕೆ, ಮಹಿಳಾ ಹೋರಾಟಗಳಿಗೆ, ನವ ಚೈತನ್ಯವನ್ನು, ಹೊಸ ಮಾರ್ಗಗಳನ್ನು ಕೊಡುಗೆಯಾಗಿ ನೀಡಿತು. ಆರಂಭದ ಮಹಿಳಾ ಹೋರಾಟಗಳು ಸಾಮಾಜಿಕ ನೆಲೆಯಲ್ಲಿ ಆದಂತಹವು. ಸ್ತ್ರೀ ಸುಧಾರಣೆಗೆ ಹೆಚ್ಚು ಒತ್ತನ್ನು ಕೊಟ್ಟಂತಹವು. ಕೇವಲ ಮಹಿಳೆಯನ್ನು ಸಾಮಾಜಿಕ ಅನಿಷ್ಟಗಳಿಂದ ಬಿಡುಗಡೆಗೊಳಿಸುವ, ಅವಳಿಗೆ ಶಿಕ್ಷಣವನ್ನು ಕೊಡಿಸುವ, ಪುರುಷನೊಂದಿಗೆ ಸರಿಸಮಾನವಾಗಿ ಮಿತವಾದ ಅವಕಾಶಗಳನ್ನು ಕಲ್ಪಿಸುವ ಇತ್ಯಾದಿ ಚಟುವಟಿಕೆಗಳು ಸ್ತ್ರೀ ವಾದದ ಕಾರ್ಯಸೂಚಿಯಾಗಿದ್ದವು. ಅವುಗಳ ಕಾರ್ಯಕ್ಷೇತ್ರವೂ ಸೀಮಿತವಾಗಿತ್ತು. ಮೇಲಾಗಿ ಈ ಎಲ್ಲಾ ಹೋರಾಟಗಳು ನಗರಗಳಿಗೆ ಕೇಂದ್ರಿತವಾಗಿದ್ದವು. ಸಮಾಜದ ಮೇಲ್ಜಾತಿಯ ಅಥವಾ ಮುಂದುವರೆದ ಶಿಕ್ಷಿತ ಮಧ್ಯಮವರ್ಗದ ಜನರನ್ನೊಳಗೊಂಡ ಚಳುವಳಿಯೇ ಆಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಹಿನ್ನೆಲೆಯುಳ್ಳ ಮಹಿಳಾ ಹೋರಾಟಗಾರರ ವಿಚಾರಗಳು ಈಗಿನ ಹೋರಾಟದ ಮೂಲಗಳಿಗೆ ಭಿನ್ನವಾಗಿ ಪ್ರಸ್ತುತಗೊಂಡವು. ಗಾಂಧೀಜಿಯವರ ಆದರ್ಶ ನಾರಿ ಕಲ್ಪನೆಯು, ಪುರುಷನ ಮನವೊಲಿಸಿ ಲಿಂಗಭೇದವನ್ನು ಅಳಿಸಿಹಾಕುವಂತಹ ಸಮಾಜ ಸುಧಾರಣೆಯ ವಿಚಾರಗಳು ಇಲ್ಲಿ ಸಪ್ಪೆಯಾದವು.

'ಭಾರತದ ಸಂದರ್ಭದಲ್ಲಿ ಸ್ತ್ರೀ ತನ್ನ ಸಾಂಪ್ರದಾಯಿಕ ಪಾತ್ರದಾಚೆಗೆ ನಡೆದು, ಕುಟುಂಬದಿಂದ ಹೊರಬಂದು ಬೀದಿಗಿಳಿದು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ದಿನದಂದೇ ಭಾರತದ ಮಹಿಳಾ ಚಳುವಳಿಯು ಆರಂಭವಾಯಿತು', (ಮಹಿಳಾ ಚಳುವಳಿಯ ಮೂಲಗಳು, ಲೇಖಕಿ ಎನ್ .ಗಾಯಿತ್ರಿ, ಪ್ರಾಧಾನ ಸಂಪಾದಕ, ಡಾ.ಜಿ.ರಾಮಕೃಷ್ಣ, ನವಕರ್ನಾಟಕ ಪ್ರಕಾಶನ, ೧೯೯೮, ಬೆಂಗಳೂರು, ಪುಟ ೯೭) ಎಂದು ಗುರುತಿಸಿದ್ದರೂ ಮಹಿಳಾ ಚಳುವಳಿಯ ಹೋರಾಟದ ಮನೋಭಾವ ಪ್ರತಿಭಟನೆಯ ಧ್ವನಿಯನ್ನು ಭಕ್ತಿಪಂಥದ ಚಳುವಳಿಗಳಲ್ಲಿಯೇ ಮೂಲವಾಗಿ ಗುರುತಿಸಿಕೊಳ್ಳುತ್ತದೆ. ಸುಮಾರು ೧೦೦ ವರ್ಷಗಳ (ಸ್ವಾತಂತ್ರ್ಯ ಹೋರಾಟದಿಂದ) ಇತಿಹಾಸವಿರುವ ಮಹಿಳಾ ಚಳುವಳಿ ಭಾರತದ ವಿವಿಧ ಪ್ರಾಂತ್ಯಗಳಲ್ಲಿ ವಿವಿಧ ಸ್ವರೂಪ ಮತ್ತು ವಿವಿಧ ನೆಲೆಗಳಲ್ಲಿ ನಡೆದಿದೆ. ಉತ್ತರ ಭಾರತದ ಬಹುತೇಕ ಪ್ರಾಂತ್ಯಗಳು ಬ್ರಿಟಿಷ್ ಆಳ್ವಿಕೆಯ ಕ್ರೂರ ಆಡಳಿತವನ್ನು ಅನುಭವಿಸಿದ್ದವು. ಇದಕ್ಕೆ ಕರ್ನಾಟಕದ ಪ್ರಾಂತ್ಯಗಳು ಹೊರತಾಗಿರಲಿಲ್ಲ. ಮೈಸೂರು ಸಂಸ್ಥಾನವನ್ನು ಬಿಟ್ಟು ಉಳಿದೆಲ್ಲಾ ಸಂಸ್ಥಾನಗಳು ಆಂಗ್ಲರ ದೌರ್ಜನ್ಯಕ್ಕೆ, ದಬ್ಬಾಳಿಕೆಗೆ ಹೆಚ್ಚು ತುತ್ತಾಗಿರುವಂತಹುವೇ. ಇಂತಹ ಪರಿಸ್ಥಿತಿಗಳಲ್ಲಿ ಕಾಂಗ್ರೆಸ್ ಕರೆಕೊಟ್ಟ ರಾಷ್ಟ್ರೀಯ ಸ್ವಾತಂತ್ರ ಸಂಗ್ರಾಮದ

ಹೋರಾಟದಲ್ಲಿ ಪಾಲ್ಗೊಂಡ ಮಹಿಳೆಯರೂ ಮುಂಚೂಣೆಯಲ್ಲಿದ್ದರು. ಅದರೊಳಗೆ ಮಹಿಳೆಯರ ಸುಧಾರಣೆಗಾಗಿ ಶ್ರಮಿಸಿದವರು ಅನೇಕರು. ಇವರ ಸಮಾಜ ಸುಧಾರಣೆಯ ಕಾರ್ಯಕ್ರಮಗಳು, ಬೇಡಿಕೆಗಳು, ಚಳುವಳಿಗಳೂ ಅಂದಿನ ಸ್ವಾತಂತ್ರ್ಯ ಹೋರಾಟದ ಅಂಗಗಳಾಗಿ ಗುರುತಿಸಲ್ಪಟ್ಟವೇ ವಿನಹ ಮಹಿಳಾ ಚಳುವಳಿಯೆಂದೋ ಅಥವಾ ಸ್ತ್ರೀಪರ ಹೋರಾಟ, ಸ್ತ್ರೀವಾದವೆಂದೂ ಪರಿಗಣಿತವಾಗಲಿಲ್ಲ. ಆಗಿನ ಹೋರಾಟದ ಸ್ವರೂಪ ಹಾಗೂ ನೆಲೆಗಳೇ ಸೀಮಿತವಾಗಿದ್ದವು. ಈ ಹಿನ್ನೆಲೆಗಳೇ ಇಂದಿನ ಹೋರಾಟಗಳಿಗೆ, ಚಳುವಳಿಗೆ ಕಾರಣವಾಗಿವೆ. ಪ್ರಗತಿಪರಧೋರಣೆಯೊಂದಿಗೆ, ಸ್ತ್ರೀಪರ ವಿಚಾರಗಳೊಂದಿಗೆ ಹುಟ್ಟಿಕೊಂಡ ಮಹಿಳಾ ಸಂಘಟನೆಗಳು ಪ್ರತ್ಯೇಕ ಅಸ್ತಿತ್ವವನ್ನು ಹಾಗೂ ಸ್ವಾಯುಕ್ತತೆಯನ್ನು ಮೈಗೂಡಿಸಿಕೊಂಡವು. ಮಹಿಳಾ ಸಂಘಟನೆಗಳು ನಡೆಸುವ ಹೋರಾಟಗಳು ವಿವಿಧ ಸ್ವರೂಪ ಹಾಗೂ ನೆಲೆಗಳ ಭಿನ್ನತೆಯಿಂದಾಗಿಯೇ ಎಂಬುದಕ್ಕೆ ಇಂದು ನಡೆಯುತ್ತಿರುವ ಹೋರಾಟಗಳೇ ಸಾಕ್ಷಿ.

ಈ ಹೊತ್ತಿನ ಮಹಿಳೆಯರ ಹೋರಾಟದ ಕ್ಷೇತ್ರಗಳು ಹಾಗೂ ವಿಷಯಗಳು ಅಂತರರಾಷ್ಟ್ರೀಯ ಚಳುವಳಿಗೆ ಸಂವಾದಿಯಾಗಿ, ಪರಸ್ಪರ ಸಂಬಂಧಿಯಾಗಿ ಕೆಳಸ್ತರದ ಮಟ್ಟದಿಂದಲೂ ಆರಂಭಗೊಂಡಿದೆ. ಮಹಿಳಾ ಚಳುವಳಿಯ ಚರಿತ್ರೆಕಾರರಾದ ರಾಧಾಕುಮಾರ (೧೯೯೫) ಅವರ ಅಭಿಪ್ರಾಯದಂತೆ 'ಸಮಕಾಲೀನ ಮಹಿಳಾ ಹೋರಾಟಗಳು ಹೆಚ್ಚಾಗಿ ಮಹಿಳೆಯರ ಶ್ರಮ, ನಿಸರ್ಗದ ಸಂಪನ್ಮೂಲ, ರಕ್ಷಣೆ, ಪ್ರಕೃತಿ, ನಾಗರೀಕ ಹಕ್ಕುಗಳು ಮತ್ತು ಮಹಿಳಾ ಆರೋಗ್ಯ ಕುರಿತಾಗಿವೆ. ಈ ಚಳುವಳಿಗಳು ರಾಜಕೀಯ ಪಕ್ಷಧಾರಿತ, ವೃತ್ತಿಪರ ಮತ್ತು ಸ್ವಾಯತ್ತ ಮಹಿಳಾ ಗುಂಪುಗಳ ಜಾಲದ ನೆರವಿನಿಂದಲೂ ನಡೆಯುತ್ತಿವೆ.' Themes in Politics, Gender and Politics in India, edited by Nivedita menon, 1999, P. 21)

ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿನ NFPW ಮಹಿಳಾ ಚಳುವಳಿಯು ಕೆಳಸ್ತರದ ಮಹಿಳೆಯರ ಕುರಿತು ವಿಶೇಷವಾದ ಹಾಗೂ ವ್ಯಾಪಕವಾದ ಕಾಳಜಿಯನ್ನು ತೋರುತ್ತಿರುವುದು ಅದರ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ಗ್ರಾಮೀಣ ಮಹಿಳೆ, ನಗರ ಕೊಳಚೆ ಪ್ರದೇಶಗಳ, ವೇಶ್ಯಾವಾಟಿಕೆ ಪ್ರದೇಶಗಳ, ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕರ, ಕೃಷಿ ಕೂಲಿ ರೈತ ಕಾರ್ಮಿಕರ ಸರಕಾರಿ ಕಛೇರಿಗಳಲ್ಲಿ ದುಡಿಯುವ ನೌಕರರ, ದಿನಗೂಲಿ, ಶ್ರಮಜೀವಿ ಮಹಿಳೆಯರು ಇವರು ಮಹಿಳಾ ಚಳುವಳಿಯ ಕೇಂದ್ರ ವಸ್ತುಗಳು ಹಾಗೂ ಹೋರಾಟದ ವಿಷಯಗಳಾಗಿದ್ದಾರೆ. ಗ್ರಾಮಾಂತರದ ಕುಟುಂಬದಲ್ಲಿನ ಮಹಿಳಾ ಸ್ಥಿತಿ-ಗತಿ ಕುರಿತು ಸಾಮೂಹಿಕವಾಗಿ ನಡೆಸಿದ ಹೋರಾಟಗಳು ಹೆಚ್ಚಾಗಿವೆ. ಪ್ರಗತಿಪರ ಧ್ಯೇಯೋದ್ದೇಶಗಳನ್ನು ಮತ್ತು ಸಾಮಾಜಿಕ ಬದಲಾವಣೆಯ ಆಶಯಗಳನ್ನು ಒಳಗೊಂಡಂತೆ ಸಮಾಜದ ಎಲ್ಲಾ ವರ್ಗದ ಮಹಿಳೆಯರ ಏಳಿಗೆಗಾಗಿ ಹೋರಾಟಗಳು ನಡೆಯುತ್ತಿವೆ. ಒಟ್ಟಾರೆಯಾಗಿ ಹೇಳುವುದಾದರೆ ನಿವೇದಿತಾ ಮೆನನ್‌ರು ಗುರುತಿಸಿದಂತೆ ಮಹಿಳಾ ಹೋರಾಟಗಳು ಈ ಕೆಳಗಿನ ವಿಷಯಗಳನ್ನು ಕೇಂದ್ರವಾಗಿಟ್ಟುಕೊಂಡಿರುತ್ತವೆ." (Themes in Politics- Gender and Politics in India, Oxford University press, New Delhi, 1999).

೧. ಮಹಿಳೆಯರ ಅಭಿವೃದ್ಧಿ

೨. ಮಹಿಳೆಯರ ಮೇಲಿನ ಅತ್ಯಾಚಾರ

೩. ಆರೋಗ್ಯ

೪. ಮಹಿಳೆಯ ಲೈಂಗಿಕ ಅಪೇಕ್ಷೆಯ ಆಯ್ಕೆ ಸ್ವಾತಂತ್ರ

೫. ಶ್ರಮಕ್ಕೆ ತಕ್ಕ ಕೂಲಿ ಹಾಗೂ ಉದ್ಯೋಗಾವಕಾಶಗಳು

೬. ಪ್ರಜಾಪ್ರತಿನಿಧಿ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ

೭. ಏಕರೂಪದ ಶಾಸನ

ಪ್ರಸ್ತುತ ಸಂದರ್ಭದ ಮಹಿಳಾ ಚಳುವಳಿಗಳು ಗ್ರಾಮೀಣ ಮಹಿಳೆಯನ್ನು ಹೇಗೆ ನಿರ್ವಚಿಸುತ್ತವೆ? ಅವಳು ಹೇಗೆ ಇವುಗಳಿಂದ ಪ್ರಭಾವಿತಳಾಗಿದ್ದಾಳೆ? ಗ್ರಾಮೀಣ ಮಟ್ಟದಲ್ಲಿನ ಪಂಚಾಯತ್‌ಗಳಲ್ಲಿ ಮಹಿಳಾ ಮೀಸಲಾತಿಯಿಂದಾಗಿ ರಾಜಕೀಯ ಪ್ರಾತಿನಿಧ್ಯ ದೊರಕಿದ ಮಾತ್ರಕ್ಕೆ ಸ್ತ್ರೀ ಸಶಕ್ತಳಾಗುತ್ತಾಳೆಯೇ? ಅವಳ ಸಬಲೀಕರಣವಾದಂತೆಯೇ? ಎನ್ನುವ ಪ್ರಶ್ನೆಗಳು ಅಧ್ಯಯನ ಶೀಲರಿಗೆ ಆಸಕ್ತಿಯ ವಿಷಯಗಳಾಗುತ್ತವೆ. ಈಗಿನ ಸರಕಾರಗಳು ಮಹಿಳಾ ಸಬಲೀಕರಣದ ಘನ ಉದ್ದೇಶದಿಂದ ಅಧಿಕಾರ ವಿಕೇಂದ್ರೀಕರಣದ ನೆಪದಲ್ಲಿ ರಾಜಕೀಯ ಪ್ರಾತಿನಿಧ್ಯವನ್ನು ಅದು ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ನೀಡಿರುವುದು ಒಂದು ಹಂತದಲ್ಲಿ ಸೋತಂತಿದೆ. ಸ್ತ್ರೀಗೆ ಸರಿಯಾದ ಶಿಕ್ಷಣ, ರಾಜಕೀಯ ಪ್ರಜ್ಞೆಗಳನ್ನು ಕೊಡದೆ ಕಿವುಡ ಹಾಗೂ ಮೂಕ ಪ್ರೇಕ್ಷಕನಂತೆ ಸರಕಾರಗಳು ಕೂಡ ನಿರ್ಲಿಪ್ತವಾಗಿವೆ. ಮೀಸಲಾತಿ ಕೊಟ್ಟಾಕ್ಷಣ ಮಹಿಳೆ ಸಬಲೆಯಾಗುತ್ತಾಳೆ ಎಂದು ನಂಬಿದಂತಿದೆ ಇಂದಿನ ವ್ಯವಸ್ಥೆ.

ವಸಾಹತುಶಾಹಿ ಭಾರತದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ, ಸಾಮಾಜಿಕ ಹೋರಾಟಗಳು ಮಹಿಳೆಯರನ್ನು ಒಳಗೊಂಡದ್ದಾಗಿವೆ. ಇದರೊಟ್ಟಿಗೇನೆ ನಗರ ಮಹಿಳೆಯರಂತೆ ಗ್ರಾಮೀಣ ಮಹಿಳೆಯರು ಆಗ ನಡೆದ ಹಲವು ಹೋರಾಟಗಳಲ್ಲಿ ಭಾಗವಹಿಸಿದ್ದಾರೆ. ಆ ಹೋರಾಟಗಳು ಸಾಮಾಜಿಕ, ಆರ್ಥಿಕ ಹಾಗೂ ಕೃಷಿ, ಕೈಗಾರಿಕೆ ಇತ್ಯಾದಿಗಳಿಗೆ ಸಂಬಂಧಿಸಿದ ಹೋರಾಟಗಳಾಗಿವೆ. ಅಂದಿನ ಮಹಿಳೆಯರ ಭಾಗವಹಿಸುವಿಕೆ ಔಪಚಾರಿಕವಾಗಿರದೆ ಒಂದು ಘನ ಉದ್ದೇಶವನ್ನು ಹೊಂದಿತ್ತು. ಅದಕ್ಕೆ ಬದ್ಧತೆ ಇರುವ ಮಹಿಳಾ ವರ್ಗವೂ ಕ್ರಿಯಾಶೀಲವಾಗಿದ್ದುದು ಸತ್ಯಸಂಗತಿ. ಬಹುತೇಕ ಮೇಲಿನಂತಹ ಹೋರಾಟಗಳು ಗ್ರಾಮೀಣ ನೆಲೆಯಿಂದಲೇ ಬಂದಂತವುಗಳು ಹಾಗೂ ಸಮಾಜದ ಕೆಳಸ್ತರದ ಜನರಿಂದ ಕೂಡಿದ ಹೋರಾಟಗಳು ಎಂಬುದನ್ನು ನಾವು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಆದರೆ ಈ ಹೋರಾಟಗಳೆಲ್ಲದರ ನೇತೃತ್ವವನ್ನು ವಹಿಸಿಕೊಂಡವರು ಮಾತ್ರ ನಗರದ ಮೇಲುವರ್ಗದ ಇಲ್ಲವೇ ಶಿಕ್ಷಿತ ಸಮುದಾಯದಿಂದ ಬಂದ ಬುದ್ಧಿ ಜೀವಿಗಳು ಎಂಬುದು ಇನ್ನೊಂದು ಮುಖ್ಯ ಅಂಶ. ಒಟ್ಟಾರೆಯಾಗಿ ಮಹಿಳಾ ಚಳುವಳಿಗಳು ಮೇಲುವರ್ಗದ ಮಹಿಳೆಯರ ನೇತೃತ್ವ ವಹಿಸಿದ್ದರೂ ಕೆಲವು ಹೋರಾಟಗಳು ಗ್ರಾಮೀಣ ಮಹಿಳೆಯರ ನೆಲೆಯಲ್ಲಿ ಹಾಗೂ ಸ್ಥಳೀಯ ಗ್ರಾಮೀಣ ಮಹಿಳೆಯರ ನೇತೃತ್ವ ವಹಿಸಿದ ಹೋರಾಟಗಳಿವೆ.

## ಔಧ್ ಚಳುವಳಿ

ಔಧ್‌ನಲ್ಲಿ ನಡೆದ ಎರಡು ಚಳುವಳಿಗಳು (೧೯೨೦ - ೨೧ ಮತ್ತು ೧೯೩೦ - ೩೨) ರಾಷ್ಟ್ರೀಯ ರಾಜಕೀಯ ಹೋರಾಟದೊಂದಿಗೆ ಸಂಬಂಧವನ್ನು ಹೊಂದಿದ್ದವು. ಈ ಚಳುವಳಿಗಳು ಮುಖ್ಯವಾಗಿ ಭೂಮಿಗೆ ಸಂಬಂಧಿಸಿದ ಜಾಜ್ ಮನಿ (ಯಜಮಾನ) ಪದ್ಧತಿಯ ವಿರುದ್ಧವಾಗಿದ್ದವು. ಮೂಲತಃ ಗ್ರಾಮೀಣ ನೆಲೆಯ, ಕೃಷಿಕರ ಸಂಘಟಿತ ಪ್ರತಿಭಟನೆಯಾಗಿತ್ತು. ಈ ಹೋರಾಟದ ನಾಯಕತ್ವವನ್ನು ಪ್ರತಾಪಗಡದ ಬಾಬಾ ರಾಮಚಂದ್ರ ವಹಿಸಿದ್ದರು. ಇವರು ಹೆಣ್ಣಿನ ಬಗ್ಗೆ ಸಹಾನುಭೂತಿಗಳಾಗಿದ್ದರಲ್ಲದೇ ಅವರ ಅನುಯಾಯಿಗಳೆಲ್ಲರೂ ಕೆಳಜಾತಿಯವರು, ಅಸ್ಪೃಶ್ಯರು, ಚಮ್ಮಾರರು, ತೋಟಿಗಳು ಮುಂತಾದವರು. ವಿಶೇಷವೆಂದರೆ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಆ ಚಳುವಳಿಯಲ್ಲಿ ಪಾಲ್ಗೊಂಡಿದ್ದರು. ಈ ಪ್ರಾಂತ್ಯದ ರೈತರೆಲ್ಲಾ ದುಬಾರಿ ತೆರಿಗೆ, ಒತ್ತಾಯದ ದುಡಿಮೆಯಿಂದ ಬೇಸತ್ತು ೧೯೩೦ - ೩೨ರಲ್ಲಿ ಬಾಡಿಗೆ ಇಲ್ಲ ತೆರಿಗೆ ಇಲ್ಲ ಎಂಬ ಘೋಷಣೆಯಿಂದ ಕಿಸಾನ್ ಸಭಾ ಪ್ರತಿಭಟಿಸಿದ್ದು ಶೋಷಣೆಯ ಮೂಲವನ್ನು ಜಾಲಾಡಿದಂತಿತ್ತು. ಕ್ರಾಂತಿಕಾರಿ ವಿಚಾರಗಳ ತಳಹದಿಯ ಮೇಲೆ ನಿಂತಿರುವ ಕಮ್ಯುನಿಸ್ಟ್ ಪಕ್ಷದ ನೇತೃತ್ವ ಇಲ್ಲದೆ ಬರೀ ಗ್ರಾಮೀಣ ಕೃಷಿಕರು, ಮಹಿಳೆಯರು ಸೇರಿ ನಡೆಸಿದ ಹೋರಾಟ ಚರಿತ್ರಾರ್ಹವಾಗಿತ್ತು. ಮಹಿಳೆಯರು ಅದರಲ್ಲೂ ಗ್ರಾಮೀಣ ಪ್ರದೇಶದಿಂದ ಬಂದವರು ಹೆಚ್ಚಿನ ಸಂಖ್ಯೆಯಲ್ಲಿದ್ದುದು ಚಳುವಳಿಯು ತೀವ್ರ ರೂಪ ತಾಳಲು ಕಾರಣವಾಯಿತು. ಇದರಲ್ಲಿ ಭಾಗವಹಿಸಿದ ಔಧ್ ಮಹಿಳೆಯರು ಕ್ರಿಯಾಶೀಲರಾಗಿದ್ದರಲ್ಲದೆ ಈ ಅವಕಾಶವನ್ನು ಪಡೆದ ಅನೇಕ ಮಹಿಳೆರು ನಾಯಕಿಯರಾಗಿ ರೂಪುಗೊಂಡು ಅನೇಕ ಕಿಸಾನ್ ಸಭೆಗಳಲ್ಲಿ ಭಾಗವಹಿಸುತ್ತಿದ್ದರು.

## ಮಣಿಪುರದ ಜಿಲೆಂಗ್ರ್ಯಾಂಗ್ ಚಳುವಳಿ

ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಸ್ವಾತಂತ್ರ್ಯದ ತೀವ್ರ ಹೋರಾಟದ ಕಿಡಿ ದೇಶದಾದ್ಯಂತ ಹಬ್ಬಿದ ಸಂದರ್ಭದಲ್ಲಿ ಉತ್ತರದ ಪೂರ್ವ ತಪ್ಪಲು ಪ್ರದೇಶಗಳಾದ ಮಣಿಪುರ, ನಾಗಾಲ್ಯಾಂಡ, ಉತ್ತರ ಕಾಚಾರ್ ಬೆಟ್ಟಗಳ ಜಿಲೆಂಗ್ರ್ಯಾಂಗ್ ಬುಡಕಟ್ಟಿನ ಜನರಲ್ಲಿ ಇದು ಕಾಳ್ಗಿಚ್ಚಿನಂತೆ ಹಬ್ಬಿತು. ಈ ಪೂರ್ವಬೆಟ್ಟದ ಪ್ರದೇಶ ಗಳಲ್ಲಿ ಮಹಾತ್ಮಾ ಗಾಂಧೀಜಿಯವರ ಚಳುವಳಿ ಜನರನ್ನು ಬಹುಬೇಗ ಆಕರ್ಷಿಸಿತು. ಇಂಥಹ ಚಳುವಳಿಯ ನೇತೃತ್ವವನ್ನು ವಹಿಸಿದ್ದ ಬುಡಕಟ್ಟು ನಾಯಕ ಜೆಡೋನಾಂಗ್ ನನ್ನು ಬ್ರಿಟಿಷರು ಗಲ್ಲಿಗೇರಿಸಿದರು. ಏಕೆಂದರೆ ಸೂಕ್ಷ್ಮ ಗಡಿ ಪ್ರದೇಶದಲ್ಲಿದ್ದ ಇಂತಹ ಚಳುವಳಿಯು ಭೀಕರ ಪರಿಣಾಮ ಬೀರಿ ತಮ್ಮ ಅಧಿಪತ್ಯಕ್ಕೆ ಸಂಚಕಾರ ಬಂದಿತೆಂದು ಭಾವಿಸಿದ ಬ್ರಿಟಿಷರು ಬುಡಕಟ್ಟು ಜನರ ಮೇಲೆ ತೀರ ಅಮಾನುಷವಾಗಿ ನಡೆದುಕೊಂಡರು. ಆದರೆ ಈ ಹೋರಾಟ ಇದ್ಯಾವುದಕ್ಕೂ ಬೆದರದೆ, ಹೋರಾಟದ ನೇತೃತ್ವವನ್ನು ಮುಂದುವರಿಸಿಕೊಂಡು ಹೋಗಲು ಹುತಾತ್ಮರಾದ ಜೆಡೋನಾಂಗ್‌ನ ಸಂಬಂಧಿಕರಾದ ಗಿಡೇಲೋ ನಿರ್ಧರಿಸಿ ಕಾರ್ಯಪ್ರವೃತ್ತಳಾದಳು. ಮಣಿಪುರದ ಸುತ್ತಮುತ್ತಲ ಹಳ್ಳಿ ಪ್ರದೇಶಗಳ ಹುಡುಗಿಯರಿಗೆಲ್ಲಾ ಶಿಕ್ಷಣದ ಅನುಕೂಲಗಳಿಲ್ಲದಿದ್ದರೂ ಗಿಡೇಲೋಳು ಹಲವಾರು ಭಾಷೆಗಳನ್ನು ಕಲಿತ ಜನರನ್ನು ಹುರಿದುಂಬಿಸುತ್ತಾ, ಪರಕೀಯರ ಆಡಳಿತಕ್ಕೆ ಧಿಕ್ಕಾರ

ಎಂಬ ಘೋಷಣೆಯೊಂದಿಗೆ ಹೋರಾಡಲು ಒಗ್ಗೂಡಿಸುತ್ತಿದ್ದಳು. ಆದರೆ ಕೊನೆಗೆ ಈಕೆ ಬ್ರಿಟಿಷರಿಗೆ ಬಂಧಿಯಾಗಿ ಸೆರೆಮನೆವಾಸ ಅನುಭವಿಸಬೇಕಾಯಿತು. ಅನೇಕ ವರ್ಷಗಳವರೆಗೆ ಜೇಲಿನಲ್ಲಿ ಕಾಲಕಳೆದ ಈಕೆಯನ್ನು ಆ ಭಾಗದ ಜನತೆ ರಾಣಿ ಗಿಡೇಲೋ ಎಂದು ಕರೆಯುತ್ತಿದ್ದರು.

**ಬಂಗಾಲದ ತೇಭಾಗ್ ಚಳುವಳಿ**

ಬಂಗಾಳದ ರೈತ ಚಳುವಳಿಯಲ್ಲಿ ಪ್ರಖ್ಯಾತವಾದ ಹಾಗೂ ಭಾರತದ ಮಹಿಳಾ ಚಳುವಳಿ ಇತಿಹಾಸಕ್ಕೆ ಅಭೂತಪೂರ್ವ ದಾಖಲೆ ಒದಗಿಸಿದ ಹೋರಾಟ ತೇಭಾಗ್ ರೈತರ ಹೋರಾಟ. ಈ ಹೋರಾಟ ಮೂಲಭೂತವಾಗಿ ಕೆಳಸ್ತರದ ಜನರನ್ನು ಅಂದರೆ ಗ್ರಾಮೀಣ ಮತ್ತು ಕೃಷಿಕ ಮಹಿಳೆ ಹಾಗೂ ಹಿಂದೂ ಮುಸ್ಲಿಂ ಸಮಾಜವನ್ನೊಳಗೊಂಡ ಚಳುವಳಿಯಾಗಿತ್ತು. ಬಂಗಾಳದಲ್ಲಿ ಜಾರಿಯಲ್ಲಿದ್ದ ಜಮೀನ್ದಾರಿ ಪದ್ಧತಿ ಜನರನ್ನು ವಿಪರೀತವಾಗಿ ಶೋಷಿಸಿಯಾಗಿತ್ತು. ಹಾಗೆಯೇ ಬೆಳೆಯ ೧/೨ ಭಾಗವನ್ನು ರೈತನು ಹೊಲದ ಒಡೆಯನಿಗೆ ನೀಡಬೇಕಾಗಿದ್ದುದು ಆಗಿನ ಷರತ್ತು ಆಗಿತ್ತು. ಇವೆರಡರ ವಿರುದ್ಧ ರೈತರ ಆಕ್ರೋಶ ಮುಗಿಲು ಮುಟ್ಟಿತ್ತು. ಆಗ ೧೯೪೩ರಲ್ಲಿ ತಲೆದೋರಿದ್ದ ಮಹಾಕ್ಷಾಮ ಇಡೀ ಬಂಗಾಳದ ರೈತರನ್ನು ದಾರಿದ್ರ್ಯದಿಂದ ಕಂಗೆಡಿಸಿತ್ತು. ಈ ಸಂದರ್ಭದಲ್ಲಿ ರೈತರೆಲ್ಲ ನಿರ್ಗತಿಕರಾಗಿದ್ದು ಒಂದಡೆಯಾದರೆ ಜಮೀನ್ದಾರರೆಲ್ಲ ರೈತರಿಂದ ವಸೂಲಿ ಮಾಡಿದ ದವಸ - ಧಾನ್ಯಗಳ ರಾಶಿ ಶೇಖರಿಸಿಕೊಂಡಿದ್ದು ಮತ್ತೊಂದೆಡೆ, ಪುನಃ ೧೯೪೪ರಲ್ಲಿ ಕ್ಷಾಮ ತಲೆದೋರಿದಾಗ ರೈತರು ಕಂಗೆಟ್ಟು ಜಮೀನ್ದಾರರ ಕಣಜಗಳಲ್ಲಿ ಶೇಖರಿಸಿದ್ದ ದವಸ ಧಾನ್ಯಗಳನ್ನು ಹೊರಕ್ಕೆಳೆಯುವ ಹೋರಾಟಗಳಲ್ಲಿ ನಿರತರಾದರು. ಇದರಲ್ಲಿಯೇ ಹೊಲ ಉಳುವ ರೈತನು ತಾನು ಬೆಳೆದ ಹೊಲದಲ್ಲಿ ೧/೨ ಭಾಗವನ್ನು ಕೊಡುವ ಪದ್ಧತಿ ಮುಗಿಸಬೇಕು ಹಾಗೂ ಬೆಳೆಯ ಫಲದ ೨/೩ ರಷ್ಟು ಭಾಗ ರೈತನಿಗೆ ಸೇರಬೇಕು ಎಂಬ ಮುಖ್ಯಸೂತ್ರಗಳೊಂದಿಗೆ ಹೋರಾಟ ಸಾಗಿತು. ಈ ಹೋರಾಟ ಬಂಗಾಳದ ಗ್ರಾಮೀಣ ಮಹಿಳೆಯರ ಆರ್ಥಿಕ ಗುಲಾಮಗಿರಿ ವಿರುದ್ಧದ ಹೋರಾಟವಷ್ಟೇ ಆಗಿರದೇ ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಿತ್ತು. ರಾಜಾರಾಮ ಮೋಹನ್ ರಾಯರು ಕೈಗೊಂಡ ಸುಧಾರಣ ಚಳುವಳಿಯು ನಗರ ಮಹಿಳೆಯರನ್ನು ಜಾಗೃತಗೊಳಿಸಿದ್ದರೆ ತೇಭಾಗ್ ಚಳುವಳಿಯು ಗ್ರಾಮೀಣ ಮಹಿಳೆಯ ರಾಜಕೀಯ ಪ್ರಜ್ಞೆಯನ್ನು ಹೆಚ್ಚಿಸಿತ್ತು.

ಉತ್ತರ ಬಂಗಾಲದುದ್ದಕ್ಕೂ ಈ ಚಳುವಳಿ ವ್ಯಾಪಿಸಿ, ಕ್ರಮೇಣ ಹಳ್ಳಿ-ಜಿಲ್ಲೆಗಳೊಂದನ್ನು ಬಿಡದೆ ಹರಡಿತ್ತು. ಭೀಕರ ಬರಗಾಲದಿಂದ ತತ್ತರಿಸಿದ್ದ ಮನೆಯಲ್ಲಿ ಹಿಡಿಕಾಳು ಇಲ್ಲದೇ ರಾಶಿರಾಶಿಯಾಗಿ ಜಮೀನ್ದಾರರಿಗೆ ಕೊಡುತ್ತಿದ್ದ ಧವಸ ಧಾನ್ಯಗಳು, ಮನೆಯಲ್ಲಿನ ಮಕ್ಕಳು ಕೂಳಿಲ್ಲದೆ ನರಳುತ್ತಿದ್ದ, ಸಾಯುತ್ತಿದ್ದ ಸ್ಥಿತಿಯೇ ಮಹಿಳೆಯರನ್ನು ಚಳುವಳಿಯಲ್ಲಿ ಭಾಗವಹಿಸಲು ಪ್ರೇರೆಪಿಸಿತ್ತು. ಈ ದುಃಸ್ಥಿತಿಯ ಅತಿರೇಕವೆಷ್ಟಿತ್ತೆಂದರೆ, ಮಹಿಳೆಯರು ಪ್ರತಿಯೊಂದು ಹಳ್ಳಿಯಲ್ಲಿ ಜಮೀನ್ದಾರರ ಭತ್ತದ ಕಣಜಗಳನ್ನು ಆಕ್ರಮಿಸಿ ಅದರಲ್ಲಿ ೨/೩ ಭಾಗವನ್ನು ಇಟ್ಟುಕೊಂಡು ಉಳಿದಿದ್ದನ್ನು ಜೋತೇದಾರರಿಗೆ ನೀಡುತ್ತಿದ್ದರು. ಈ

ಚಳುವಳಿಗಾರರನ್ನು ಮಟ್ಟಹಾಕಲು ಜೋತೇದಾರರು ಪೋಲೀಸರನ್ನು ಹರಿಬಿಟ್ಟರು. ಆದರೆ ಜನ ಯಾವುದನ್ನು ಲಕ್ಷಿಸದೇ ತಿರುಗಿಬಿದ್ದರು. ಪೋಲೀಸರು ದೌರ್ಜನ್ಯದಿಂದ ಹಳ್ಳಿಗಳಲ್ಲಿನ ಪ್ರತಿಯೊಂದು ಗುಡಿಸಲುಗಳಿಗೆ ನುಗ್ಗಿ ದವಸಧಾನ್ಯಗಳನ್ನು ಜೋತೇದಾರರಿಗೆ ಹಿಂದಿರುಗಿಸತೊಡಗಿದರು. ಇದರಿಂದ ಹೆದರಿದ ಗಂಡಸರು ಪೋಲೀಸರ ಕಣ್ತಪ್ಪಿಸಿ ಕಾಡಿಗೆ ಓಡಿಹೋದರು. ಇತ್ತ ಮನೆಯಲ್ಲಿದ್ದ ಹೆಂಗಸರ ಮೇಲೆ ಪೋಲೀಸರು ಅಮಾನುಷವಾಗಿ ವರ್ತಿಸಿ ಅನೇಕ ಅತ್ಯಾಚಾರಗಳನ್ನೆಸಗಿದರು.

ಈ ಹೋರಾಟದ ಬೆಂಕಿ ಆರಲಿಲ್ಲ, ಮುಗಿಯಲಿಲ್ಲ. ಕಿಸಾನ್ ಸಮಿತಿ ಮತ್ತು ಕಮ್ಯುನಿಸ್ಟ್ ಪಕ್ಷಗಳು ಚಳುವಳಿಯನ್ನು ಜೀವಂತವಾಗಿಡಲು ಭೂಗತ ಚಟುವಟಿಕೆಗಳನ್ನು ಹುಟ್ಟುಹಾಕಿದರು. ಕಾಡಿನಲ್ಲಿದ್ದ ನಾಯಕರುಗಳಿಗೆ ಹಳ್ಳಿಗಳ ಮಹಿಳೆಯರು ರಕ್ಷಣೆ, ಆಹಾರ, ಆಶ್ರಯಗಳನ್ನು ಪೋಲೀಸರ ಬಗೆಗಿನ ಸುಳಿವು, ಗುಪ್ತ ವರದಿಗಳನ್ನು ನೀಡತೊಡಗಿದರು. ಹಲವೆಡೆ ಪೋಲೀಸ್ ಕ್ಯಾಂಪ್‌ಗಳನ್ನು ಭೇದಿಸಿ ಮಹಿಳೆಯರು ಮುನ್ನುಗ್ಗಿ ಚಳುವಳಿಯನ್ನು ತೀವ್ರಗೊಳಿಸಿದರು. ಇಂತಹ ಮಹಿಳೆಯರಲ್ಲಿಯೇ ಕೆಚ್ಚೆದೆಯವಳೆನಿಸಿದ ಬಿಮ್ಲಾ ಮೊಂಡೇಲ್‌ಳ ನೇತೃತ್ವದ ರೈತ ಮಹಿಳೆಯರ ಗುಂಪೊಂದು ಕುಡುಗೋಲು, ಕೊಡಲಿ, ಪೊರಕೆಗಳನ್ನು ಹಿಡಿದುಕೊಂಡೇ ಪೋಲೀಸರನ್ನು ಬೆನ್ನಟ್ಟಿದರು. ಇಷ್ಟಲ್ಲದೇ ಕೆಲವು ಮಹಿಳೆಯರಂತೂ ತಮ್ಮ ಸೀರೆಗಳ ಕೊನೆಯಲ್ಲಿ ಕಾರಪುಡಿ, ಮೆಣಸಿನಪುಡಿಗಳನ್ನು ಕಟ್ಟಿಕೊಂಡು ಎದುರಿಗೆ ಬಂದ ಪೋಲೀಸರಿಗೆ ಎರಚುತ್ತಿದ್ದರು. ಇಂತಹ ಕ್ರಾಂತಿಕಾರಿ ಐತಿಹಾಸಿಕ ಚಳುವಳಿಯಲ್ಲಿ ಭಾಗವಹಿಸಿದ ಇತರೆ ಮಹಿಳೆಯರಾದ ಸತ್ಯಬಾಲಾ ಬೇರಾ, ಶಿವರಾಣಿ ಮಿತ್ರ, ಬಿಮ್ಲಾ ಮಾಜೀ, ಸಿಂಧುಬಾಲಾ ಬುನಿಯಾ, ವಜ್ರಬಾಲಾ ದೋಲ್ಯೆ ಇವರುಗಳನ್ನು ತೇಭಾಗ ಚಳುವಳಿಯ ಧೀರೋದತ್ತ ನಾಯಕಿಯರೆಂದು ಇಂದಿಗೂ ಜನತೆ ನೆನೆಯುತ್ತದೆ.

ಈ ಗ್ರಾಮೀಣ ಬಡ ಮಹಿಳೆ ಹಿನ್ನೆಲೆಯ ಹೋರಾಟ ಬರೀ ರೈತ ಗ್ರಾಮೀಣ ಜನತೆಯದಲ್ಲದೇ ವರ್ಗ ಹೋರಾಟವಾಗಿ ಇದು ಹಿಂದೂ-ಮುಸ್ಲಿಂರನ್ನು ಒಗ್ಗೂಡಿಸಿದ ಪ್ರಸಂಗವೂ ಹೌದು. ಹೊರಗಿನ ದಾಸ್ಯವನ್ನು ವಿರೋಧಿಸುವ ಚಳುವಳಿಯಷ್ಟೇ ಪ್ರಾಮುಖ್ಯತೆಯನ್ನು ಒಳಗಿನ ದಾಸ್ಯ ವಿಮೋಚನೆಗಾಗಿ ನಡೆಸಿದ ಹೋರಾಟವು ಮಹತ್ವವನ್ನು ಹೊಂದಿತ್ತು. ಇಂತಹ ಹೋರಾಟ ಮನೋಭಾವ, ಅನ್ಯಾಯವನ್ನು ವಿರೋಧಿಸುವ, ಸಮಾನ ಹಕ್ಕಿಗಾಗಿ ಹೋರಾಡುವ ಮಹಿಳಾ ಚಳುವಳಿಗಳು ಯಾವುದೇ ಪುರುಷಕೇಂದ್ರಿತ ಅಥವಾ ಪುರುಷ ನೇತೃತ್ವದ ಹೋರಾಟಕ್ಕಿಂತ ಮೇಲ್ಪಂಕ್ತಿಯಲ್ಲಿ ನಿಲ್ಲುವಂತಹದ್ದಾಗಿದೆ ಈ ತೇಭಾಗ ಚಳುವಳಿ.

**ಮಹಾರಾಷ್ಟ್ರದ ವರ್ಲಿ-ಆದಿವಾಸಿಗಳ ಹೋರಾಟ**

ಮಹಾರಾಷ್ಟ್ರದ ಠಾಣಾ ಜಿಲ್ಲೆಯ ವರ್ಲಿಗಳು ಅಂದರೆ ಆದಿವಾಸಿಗಳು ತಮ್ಮ ಅಸ್ತಿತ್ವಕ್ಕಾಗಿ, ಉಳಿವಿಗಾಗಿ ಗೋದಾವರಿ ಪರುಲೇಕರ್ ರವರ ನೇತೃತ್ವದಲ್ಲಿ ನಡೆದ ಹೋರಾಟ ಕಮ್ಯುನಿಸ್ಟ್ ಚಳುವಳಿ ಹಾಗೂ ಭಾರತೀಯ ಮಹಿಳಾ ಚಳುವಳಿಗಳ ಇತಿಹಾಸದಲ್ಲಿಯೇ ಅಗ್ರಸ್ಥಾನವನ್ನು ಪಡೆಯುತ್ತದೆ. ವರ್ಲಿ ಆದಿವಾಸಿಗಳು ತಮ್ಮ

ಅಜ್ಞಾನ, ಶಿಕ್ಷಣವಿಲ್ಲದೇ, ದಾರಿದ್ರ್ಯಗಳಿಂದ ಇದ್ದ ಭೂಮಿಗಳನ್ನು ಜಮೀನ್ದಾರರಿಗೆ ಮಾರಿಕೊಂಡರು. ಅಷ್ಟೇ ಅಲ್ಲ ತಮ್ಮ ದೇಹವನ್ನು ಕೂಡಾ ಮಾರಿಕೊಳ್ಳುವ ಸ್ಥಿತಿಗೆ ತಲುಪಿದ್ದರು. ಅವರು ಜಮೀನ್ದಾರನ ಭೂಮಿಯಲ್ಲಿ ನಿರಂತರ ಉಳುಮೆ ಮಾಡುವುದಲ್ಲದೇ ಕೊಟ್ಟ ಕೂಲಿಗೆ ತೃಪ್ತಿಪಟ್ಟುಕೊಳ್ಳಬೇಕಾಗಿತ್ತು. ಭೂಮಾಲೀಕನ ತೃಪ್ತಿಗೆ, ಅವನ ಆಸೆ ಈಡೇರಿಕೆಗೆ ಮನೆಯ ಹೆಣ್ಣುಮಕ್ಕಳನ್ನು ಕಳಿಸಬೇಕಾಗಿತ್ತು ಇಲ್ಲದಿದ್ದಲ್ಲಿ ಎದುರಾದವರನ್ನು ಕೊಲ್ಲಲಾಗುತ್ತಿತ್ತು. ಹಾಗೂ ಇನ್ನೂ ಮುಂದೆ ಯಾರೇ ಹೀಗೆ ಮಾಡಿದಲ್ಲಿ ಅದೇ ಗತಿಯಾಗುವುದೆಂದು ಹೆದರಿಸಿ ತಾಕೀತು ಮಾಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಗೋದಾವರಿ ಪರುಲೇಕರ್‌ರವರು ವರ್ಲಿ ಆದಿವಾಸಿಗಳನ್ನು ಸಂಘಟಿಸಿ, ೧೯೪೫ರಲ್ಲಿ ಠಾಣಾದ ಲೆತ್‌ವಾಲಾದಲ್ಲಿ ನಡೆದ ಕಿಸಾನ್ ಸಭಾದಲ್ಲಿ ಜಮೀನ್ದಾರರ "ಬಿಟ್ಟಿ ಚಾಕರಿಗೆ ಧಿಕ್ಕಾರ" ಎಂಬ ಘೋಷಣೆ ಕೂಗಿದ್ದು, ದುಡಿವ ವರ್ಗದ ಜನತೆ ಶೋಷಣೆಯ ವಿರುದ್ಧ ಸಿಡಿದು ನಿಂತಿದ್ದು ನಿಜಕ್ಕೂ ಸಂದರ್ಭೋಚಿತವಾಗಿತ್ತು. ಹಾಗೆಯೇ ಜಮೀನ್ದಾರರ 'ವಿವಾಹಿತ ತೊತ್ತು' ಪದ್ಧತಿಯನ್ನು ಅಳಿಸಿಹಾಕುವ ಪ್ರತಿಜ್ಞೆ ಏಳು ಸಾವಿರ ಮಹಿಳೆಯರ ಸಂಘಟನೆಯೊಂದಿಗೆ ತೊಟ್ಟದ್ದು ವರ್ಲಿ ಆದಿವಾಸಿಗಳ ಶೋಷಣೆ ಮುಕ್ತ ಜೀವನಕ್ಕೆ ದಾರಿಯಾಯಿತು. ವರ್ಲಿ ಆದಿವಾಸಿ ಗ್ರಾಮಗಳ ಹೆಣ್ಣುಮಕ್ಕಳೆಲ್ಲ ಗಂಡಸರೊಂದಿಗೆ ಸೇರಿ ಕೆಂಪು ಬಾವುಟವನ್ನು ಹಿಡಿದು ಜಮೀನ್ದಾರರ ದಬ್ಬಾಳಿಕೆಯ ವಿರುದ್ಧ ಪ್ರತಿಭಟನೆ ನಡೆಸಿ, ಘೋಷಣೆಗಳನ್ನು ಕೂಗಿದರು. ಅಲ್ಲದೇ ಹೊಲಗಳಲ್ಲಿ ಹುಲ್ಲು ಕೀಳುವ ಕೆಲಸಮಾಡಲು ಎಲ್ಲ ಆದಿವಾಸಿಗಳು ನಿರಾಕರಿಸಿದರು. ಇದರಿಂದ ಬಾಂಬೆ ನಗರಕ್ಕೆ ಆಗಮಿಸುತ್ತಿದ್ದ ಹುಲ್ಲಿನ ರಸ್ತೆಗೆ ಅಡಚಣೆ ಉಂಟಾಯಿತು. ಆಗ ಸರಕಾರ ಆದಿವಾಸಿಗಳ ನ್ಯಾಯಯುತ ಬೇಡಿಕೆಗೆ ಮಣಿದು ಕೂಲಿಯ ದರವನ್ನು ನಿಗದಿಗೊಳಿಸಿತು. ಹಾಗೂ ಮಹಿಳೆಯರ ಮೇಲಿನ ಜಮೀನ್ದಾರರ 'ವಿವಾಹಿತ ತೊತ್ತು' ಪದ್ಧತಿಯನ್ನು ತೆಗೆದು ಹಾಕಲಾಯಿತು. ಅಂತೂ ಈ ಎಲ್ಲದರ ಫಲಕ್ಕೆ ಕಾರಣ ವರ್ಲಿ ಮಹಿಳೆಯರು ಗಳಿಸಿದ ಘನತೆ, ಸ್ವಾಭಿಮಾನ, ದುಡಿತಕ್ಕೆ ತಕ್ಕ ಬೆಲೆ ಮುಖ್ಯವಾಗಿತ್ತು. ಒಟ್ಟಿನಲ್ಲಿ ವರ್ಲಿಗಳ ಈ ದಂಗೆಯ ರೂವಾರಿ ಗೋದಾವರಿ ಪರುಲೇಕರ್‌ರಂತಹ ಧೀರಮಹಿಳೆಯ ನೇತೃತ್ವದಿಂದ ವರ್ಲಿ ಮಹಿಳೆಯರಿಗೆ ಬಹುಮುಖ ಪ್ರಯೋಜನಗಳನ್ನು ನೀಡಿತ್ತು. ಅವರಲ್ಲಿ ಹೆಚ್ಚಿನ ಆತ್ಮವಿಶ್ವಾಸ ಹುಟ್ಟಲು, ಸಂಘಟನೆಯ ಅರಿವು ಮೂಡಿಸಲು ಕಾರಣವಾಯಿತು.

**ತೆಲಂಗಾಣ ಮಹಿಳಾ ಹೋರಾಟ**

ಬ್ರಿಟೀಷ್ ಭಾರತದಲ್ಲಿದ್ದ ಅರಸೊತ್ತಿಗೆಯ ಸಂಸ್ಥಾನಗಳಲ್ಲಿ ಹೈದರಾಬಾದ್ ಸಂಸ್ಥಾನವೂ ಒಂದು. ಇದರಲ್ಲಿ ಶೇಕಡಾ ೪೦ ಭಾಗ ದೊಡ್ಡ ದೊಡ್ಡ ಜಮೀನ್ದಾರಿ, ಜಹಗೀರುಗಳಿದ್ದವು. ಈ ವ್ಯವಸ್ಥೆಗಳು ಅಮಾನವೀಯವಾದ ಪಾಳೇಗಾರಿ ಶೋಷಣೆಯನ್ನು ಆಚರಿಸುತ್ತಿದ್ದವು. ಉಳಿದ ಶೇಕಡಾ ೬೦ ಭಾಗ ನಿಜಾಮನ ಕ್ರೂರ ಆಳ್ವಿಕೆಗೊಳಪಟ್ಟಿತ್ತು. ಅಮಾನವೀಯ ಆಳ್ವಿಕೆಯ ವಿರುದ್ಧ ಅಲ್ಲಲ್ಲಿ ಕಾರ್ಮಿಕ ಹಾಗೂ ರೈತ ಹೋರಾಟಗಳು ಜರುಗಿದವು. ಇಂತಹ ಚಳುವಳಿಗಳು ಮಾಚಿರೆಡ್ಡಿಪಲ್ಲಿ ಮತ್ತು ಅಕ್ಕೂರುಗಳಲ್ಲಿ ನಡೆದವು. ಈ ಚಳುವಳಿಗಳಲ್ಲಿ ಭಾಗವಹಿಸಿದ ರೈತರ ಮೇಲೆ ನಡೆಸಿದ ದೌರ್ಜನ್ಯ ದೇಶದ ಹಲವರ ಗಮನ ಸೆಳೆಯಿತು.

ನಿಜಾಮನ ಪೋಲೀಸರ ಗೂಂಡಾಗಿರಿ, ಹಳ್ಳಿಗಳ ಮೇಲೆಸಗಿದ ದೌರ್ಜನ್ಯ, ಹೆಂಗಸರ ಅತ್ಯಾಚಾರ ಕುರಿತು ತಿಳಿಯಲು ಪದ್ಮಜಾ ನಾಯಿಡು, ಅವರೇ ಖುದ್ದು ಹಳ್ಳಿಗಳಿಗೆ ಭೇಟಿ ನೀಡಿದ್ದರು. ನಂತರ ೧೯೪೫ರಲ್ಲಿ ಅಕ್ನೂರ್ ಮತ್ತು ಜನಗಾಂವ್ ಗಳಲ್ಲಿ ಬಲತ್ಕಾರದ ಕಂದಾಯದ ವಿರುದ್ಧ ಜನತೆ ರೊಚ್ಚಿಗೆದ್ದು ದಂಗೆಗಳನ್ನು ಆಯೋಜಿಸಿದರು. ನಿಜಾಮನು ತನ್ನ ಸಶಸ್ತ್ರ ಪೋಲೀಸ್ ಪಡೆಯನ್ನು ದಂಗೆಗಳನ್ನು ಹತ್ತಿಕ್ಕಲು ಕಳಿಸಿದನು. ಹಳ್ಳಿಗಳಿಗೆ ನುಗ್ಗಿದ ಪೋಲೀಸರು ಆ ಊರನ್ನೇ ಸಂಪೂರ್ಣವಾಗಿ ನಾಶಗೊಳಿಸಿದರು. ಅಲ್ಲಿಂದ ಗಂಡಸರೆಲ್ಲ ತಪ್ಪಿಸಿಕೊಂಡು ಗೆರಿಲ್ಲಾ ಪಡೆಗಳನ್ನು ಕಟ್ಟತೊಡಗಿದರು. ಉಳಿದವರು ಹೆಂಗಸರು ಮಕ್ಕಳೇ ಹೆಚ್ಚು ನೋವಿಗೀಡಾದರು. ಮಹಿಳೆಯರು ಗೆರಿಲ್ಲಾ ಪಡೆಗಳಿಗೆ ಆಹಾರ, ಸಂದೇಶಗಳನ್ನು ಪೂರೈಸತೊಡಗಿದರು. ಈ ಸಂದರ್ಭದಲ್ಲಿ ಎಷ್ಟೋ ಮಹಿಳೆಯರು ಪೋಲೀಸರ ಕೈಗೆ ಸಿಕ್ಕಿಬಿದ್ದು ಪಡಬಾರದ ಕಷ್ಟ ಅನುಭವಿಸುತ್ತಿದ್ದರು. ಹೋರಾಟದ ಸ್ವರೂಪ ತೀವ್ರವಾಗುತ್ತ ಮಹಿಳೆಯರು ಹೆಚ್ಚಿನ ಶೌರ್ಯ, ತ್ಯಾಗಗಳನ್ನು ಪ್ರದರ್ಶಿಸಿದರು. ಅವರಲ್ಲಿ ಕೆಲವರು ಗೆರಿಲ್ಲಾ ಪಡೆಯಲ್ಲಿ ತರಬೇತಿ ಹೊಂದಿದರು. ಕಾಮ್ರೇಡ್ ಸ್ವರಾಜ್ಯಂ ಮತ್ತು ಅರ್ತುಲ್ಲಾ ಕಮಲಾದೇವಿ ಇಬ್ಬರೂ ಈ ಚಳುವಳಿಯುದ್ದಕ್ಕೂ ಆಂಧ್ರ ಮಹಾಸಭಾದ ಪ್ರಮುಖ ನಾಯಕಿಯಾಗಿ ಸಂಘಟನೆಯಲ್ಲಿ ತೊಡಗಿದ್ದರು. ಆ ಹೊತ್ತಿಗಾಗಲೇ ಹಲವಾರು ಮಹಿಳೆಯರು ಹೋರಾಟದ ಮುಖ್ಯವಾಹಿನಿಗೆ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಸೇರಿದ್ದರು. "ಆಂಧ್ರದ ಕೃಷ್ಣ ಜಿಲ್ಲೆಯಲ್ಲಿ ಮಹಿಳೆಯರಿಂದ ಕೂಡಿದ ಒಂದು ಬೃಹತ್ ಸಾಮಾಜಿಕ ಸಂಘಟನೆ ಸ್ಥಾಪನೆಯಾಗಿ, ೧೨೪ ಸ್ಥಳೀಯ ಯೂನಿಟ್‌ಗಳಿಗೆ ಸೇರಿದ ಆರು ಸಾವಿರ ಕಾರ್ಮಿಕ ಮಹಿಳೆಯರು ಈ ಸಂಘಟನೆಗೆ ಬಂದರು. ಈ ಜಿಲ್ಲಾ ಮಹಿಳಾ ಸಂಘದ ಅಧ್ಯಕ್ಷೆಯಾಗಿ ಸೂರ್ಯವತಿಯೆಂಬ ರೈತನ ಮಗಳು ಕ್ರಿಯಾಶೀಲವಾಗಿ ಕೆಲಸ ಮಾಡುತ್ತಿದ್ದಳು" (ಮಹಿಳಾ ಚಳುವಳಿಯ ಮಜಲುಗಳು, ಡಾ. ಎನ್.ಗಾಯಿತ್ರಿ, ೧೯೯೮, ಪು. ೪೨).

ಆ ವೇಳೆಗಾಗಲೇ ಆಂಧ್ರದ ಹಲವಾರು ಜಿಲ್ಲೆಗಳಲ್ಲಿ ಮಹಿಳಾ ಸಂಘಟನೆಯ ಶಾಖೆಗಳು ವಿಸ್ತರಿಸಿದ್ದವು. ನಾಲ್ಕು ತರಬೇತಿ ಶಿಬಿರಗಳಲ್ಲಿ ಅನೇಕರು ಸಂಘಟಕರಾಗಿ ತರಬೇತಿಗೊಂಡರು. ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿನ ಮಹಿಳೆಯರನ್ನು ಜಾಗೃತಗೊಳಿಸಲು ಅವರ ಸಮಸ್ಯೆಗಳನ್ನು ಬಗೆಹರಿಸುವ ಅರಿವು ಮೂಡಿಸಲು ಸಂಘಟಕರು ಕ್ರಿಯಾಶೀಲರಾದರು. ಹೀಗಾಗಿ ಹಳ್ಳಿಗಳಲ್ಲಿನ ಮೂಲಭೂತ ಸೌಕರ್ಯಗಳ ಕಡೆಗೆ ಹೆಚ್ಚು ಒತ್ತಾಯಕೊಟ್ಟರು. ಮಹಿಳೆಯರ ಶೌಚಾಲಯಗಳ ನಿರ್ಮಾಣಕ್ಕೆ ಒತ್ತಾಯಿಸಲಾಯಿತು. ಈ ಚಳುವಳಿಯಿಂದಾಗಿ ಮಹಿಳೆಯರು ಅದರಲ್ಲೂ ಗ್ರಾಮೀಣ ಪರಿಸರದಿಂದ ಬಂದವರು ಸಂಘಟಿತರಾಗಿ ತಮ್ಮ ಚಿಕ್ಕಪುಟ್ಟ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುತ್ತಾ ಜನರ ಬೆಂಬಲ ಗಳಿಸಿದರು. ಹೀಗೆ ಬಂಗಾಳದ ನಂತರ ಇಡೀ ದೇಶದಲ್ಲಿ ಬೃಹತ್ ಮಹಿಳಾ ಸಂಘಟನೆಯಾಗಿ ಬೆಳೆದಿದ್ದೆಂದರೆ ಆಂಧ್ರ ಮಹಿಳಾ ಸಭಾ. ತೆಲಂಗಾಣದ ಚಳುವಳಿಯು ಮೂಲವಾಗಿ ಮಹಿಳೆಯರಿಂದ ಆರಂಭಗೊಂಡು ಅಲ್ಲಿನ ಗ್ರಾಮೀಣ ಮಹಿಳೆಯರಲ್ಲಿ ರಾಜಕೀಯ ಪ್ರಜ್ಞೆಯನ್ನು ಹೆಚ್ಚಿಸುವ ಕೆಲಸ ಮಾಡಿತು.

## ದ್ರಾವಿಡ ಚಳುವಳಿ ಮತ್ತು ಮಹಿಳೆ

ತಮಿಳುನಾಡಿನಲ್ಲಿ ಆರಂಭಗೊಂಡ 'ಆತ್ಮ ಚಳುವಳಿಗಳ' ರೂವಾರಿ ಪೆರಿಯಾರ್ ಇ.ವಿ.ರಾಮಸ್ವಾಮಿ ನಾಯ್ಕರ್. ಈ ಚಳುವಳಿ ದ್ರಾವಿಡ ಚಳುವಳಿ. ತಮಿಳರ, ತಮಿಳು ಸಮಾಜದ, ಧರ್ಮದ, ಜಾತೀಯ ಅಂತಸ್ತುಗಳನ್ನು ಮತ್ತು ಪಿತೃ ಪ್ರಧಾನ ವ್ಯವಸ್ಥೆಯನ್ನು ಕುರಿತು ಮುಕ್ತವಾಗಿ ಗಟ್ಟಿಯಾಗಿ ಪ್ರಕಟಗೊಂಡ ಹೋರಾಟ. ಮೇಲಿನ ಆರ್ಥಿಕ ರಾಜಕೀಯ ಚಳುವಳಿಗಳಂತಲ್ಲದಿದ್ದರೂ ಇದು ಸಾಂಸ್ಕೃತಿಕ ಚಳುವಳಿಯಾಗಿತ್ತು. ಆರಂಭದ ದಿನಗಳಲ್ಲಿ ಈ ಚಳುವಳಿಯ ರಾಜಕೀಯ ಗೊತ್ತುವಳಿಯಲ್ಲಿ ಮಹಿಳಾ ವಿಮೋಚನೆಯೇ ಮುಖ್ಯ ಪ್ರಶ್ನೆಯಾಗಿತ್ತು. ಪೆರಿಯಾರ್ ಚಳುವಳಿಯು ಕ್ರಾಂತಿಕಾರಿಯಾಗಿದ್ದು, ಸಾಂಪ್ರಾದಾಯಿಕವನ್ನು ನಿರ್ನಾಮ ಮಾಡುವ, ಬದಲಾವಣೆಯಲ್ಲಿ ನಂಬಿಕೆಯಿರುವ, ಆತ್ಮ ಗೌರವ, ಸಮಾನತೆ ಮತ್ತು ಪ್ರಗತಿಯನ್ನು ಬಯಸುವದಾಗಿತ್ತು. ಈ ಮನೋಧರ್ಮವೇ ಮಹಿಳಾ ಪ್ರಶ್ನೆಯನ್ನು ಕುರಿತು ಅವರ ವೈಚಾರಿಕ ದೃಷ್ಟಿಕೋನದಲ್ಲಿ ಪ್ರತಿಬಿಂಬಿತವಾಗಿರುವುದನ್ನು ಕಾಣುತ್ತೇವೆ. ಮದುವೆ ಮತ್ತು ಕುಟುಂಬಗಳು ಪಿತೃಪ್ರಧಾನ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ಬಹುಮುಖ್ಯ ಅಂಶಗಳೆಂದು, ಅವುಗಳನ್ನು ಪೆರಿಯಾರ್ ತೀವ್ರವಾಗಿ ನಿರಾಕರಿಸುತ್ತ, ಅವುಗಳ ಮೇಲೆ ನಿಷೇಧವನ್ನು ಹೇರಲು ಒತ್ತಾಯಿಸುತ್ತಿದ್ದರು. ಹೆಣ್ಣಿನ ಪಾತಿವ್ರತ್ಯದ ಬಗೆಗಿನ ಸಮಾಜದ ಪರಿಕಲ್ಪನೆಯನ್ನು, ಬಹುಪತ್ನಿತ್ವವನ್ನು ಹಿಗ್ಗಾಮುಗ್ಗವಾಗಿ ಜಗ್ಗಾಡಿದರು. ಇದೇ ಹೆಣ್ಣಿನ ಸ್ವಾತಂತ್ರ್ಯವನ್ನು, ವೈಚಾರಿಕ ಪ್ರಜ್ಞೆಯನ್ನು, ಸ್ವಾಭಿಮಾನವನ್ನು ನಾಶಮಾಡುತ್ತಾ ಬಂದಿದೆಯೆಂದು ವಾದಿಸಿದರು. ಪೆರಿಯಾರ್‌ರು ಸರ್ವ ಸಮ್ಮತವಾದ, ಸಮಾಜದ ಸಮ್ಮತಿಯೊಂದಿಗೆ ಕಡ್ಡಾಯ ರಿಜಿಸ್ಟರ್ ಮದುವೆಗಳನ್ನು ಬೆಂಬಲಿಸಿದರು. ಸರಳ ವಿವಾಹದ ಪದ್ಧತಿಯು ಪೆರಿಯಾರ್ ರ ಆತ್ಮಗೌರವ ಚಳುವಳಿಯು ಮುಖ್ಯವಾದದ್ದು ಮತ್ತು ಹಿಂದೂ ವಿವಾಹಶಾಸ್ತ್ರಗಳಿಂದ ಮುಕ್ತಗೊಳಿಸುವುದೇ ಆಗಿತ್ತು.

## ಮಹಿಳಾ ಚಳುವಳಿಗಳು ಮತ್ತು ಸ್ವಾಯತ್ತ ಗುಂಪುಗಳು

ಈಗಾಗಲೇ ಚರ್ಚಿಸಿದಂತೆ ೧೯೭೦ರ ದಶಕದಿಂದೀಚೆಗೆ ಮಹಿಳಾ ಚಳುವಳಿಗಳ ಸ್ವರೂಪ ಹಾಗೂ ದೃಷ್ಟಿಕೋನಗಳು ತೀವ್ರವಾಗಿ ಬದಲಾದವು. ಮಹಿಳೆಯರ ಸ್ಥಿತಿ-ಗತಿ ಕುರಿತು ೧೯೭೪ ರಲ್ಲಿಯ ಸಮಿತಿಯು ಒಂದು ವರದಿಯನ್ನು ನೀಡಿತು. ಈ ಸಮಿತಿಯ ವರದಿಯಂತೆ ಮಹಿಳೆಯರು ಎರಡು ದಶಕಗಳಿಂದ ಅನೇಕ ಪ್ರತಿಕೂಲ ಪರಿಸ್ಥಿತಿಗಳನ್ನು ಕಂಡಿದ್ದಾರೆ. ಲಿಂಗತಾರತಮ್ಯ, ಜೀವಿತಾವಧಿ ಸಾಮರ್ಥ್ಯ, ಸಾಕ್ಷರತೆ, ರಾಜಕೀಯ ಸಾರ್ವಜನಿಕ ಭಾಗವಹಿಸುವಿಕೆ ಅಥವಾ ಪಾಲ್ಗೊಳ್ಳುವಿಕೆ ಮತ್ತು ಅವಳ ಜೀವನಾಧಾರಿತ ಅಂಶಗಳು ಇತ್ಯಾದಿಗಳು ಅವಳ ಮೇಲೆ ಬೆಳಕನ್ನು ಚೆಲ್ಲುವ ವರದಿ ಅದಾಗಿತ್ತು. ಈ ಸಮಿತಿಯ ವರದಿ ಪ್ರಕಟಣೆಯಾಗಿದ್ದು ಹಾಗೂ ಅಂತರರಾಷ್ಟ್ರೀಯ ಮಹಿಳಾ ವರ್ಷ ದಿನಾಚರಣೆ ಒಟ್ಟೊಟ್ಟಿಗೆ ಜರುಗಿದವು.

ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಜಾಗೃತಿಗೊಳ್ಳಲು ಮಹಿಳಾ ಸಂಘಟನೆಗಳೊಂದಿಗೆ ಮಹಿಳಾ ಸ್ವಾಯತ್ತ ಗುಂಪುಗಳು ಕಾರ್ಯ ಪ್ರವೃತ್ತವಾಗಿವೆ. "ಇಂತಹ ಮಹಿಳಾ ಸ್ವಾಯತ್ತ ಗುಂಪುಗಳು ದೇಶವ್ಯಾಪಿ ಹಬ್ಬಲು ೧೯೭೮ರ ಮಥುರಾ ಪ್ರಕರಣವು ಹೆಚ್ಚಿನ ಸ್ಫೂರ್ತಿಯನ್ನು ಚಳುವಳಿಗಳ ಸಂಘಟನೆಗೆ ಚಾಲನೆಯನ್ನು ನೀಡಿತು" ಎಂಬುದಾಗಿ ರಾಜ್ ಮೋಹಿನಿ ಸೇಠಿ ತಮ್ಮ ಲೇಖನ Globalisation and Women's Movement past compulsions and Future Dilemmas ರಲ್ಲಿ ಅಭಿಪ್ರಾಯಪಟ್ಟಿದ್ದಾರೆ. (Globalisation, Culture, and Women's Development, Raj Mohini Sethi, P. 348). ಬಹುತೇಕ ಈ ಗುಂಪುಗಳು ಕಮ್ಯುನಿಸ್ಟ್ ಪಕ್ಷದ ಅಥವಾ ಎಡಪಂಥೀಯ ಚಿಂತನೆಗಳೊಂದಿಗೆ ಗುರುತಿಸಿಕೊಂಡು ಕಾರ್ಯಪ್ರವೃತ್ತವಾದವು ಅಥವಾ ಈ ಬಗೆಯ ಚಿಂತನೆಗಳನ್ನು ಹೊಂದಿದವರೊಂದಿಗೆ ಮಹಿಳಾ ಸ್ವಾಯತ್ತ ಗುಂಪುಗಳು ಕ್ರಿಯಾಶೀಲವಾದವು. ಈ ಸಂಘಟನೆಗಳ ಸಾಮಾಜಿಕ ಕಳಕಳಿ, ಹೋರಾಟಗಳು ಮುಖ್ಯವಾಗಿ ಲಿಂಗಾಧಾರಿತ ಶ್ರಮವಿಭಜನೆ ಹಾಗೂ ಪಿತೃಪ್ರಧಾನ ಸಂಸ್ಕೃತಿಯ ಶೋಷಣೆಯ ವಿರುದ್ಧವಾಗಿದ್ದವು. ಹೀಗಾಗಿ ಸಮಾಜದ ಎಲ್ಲ ವರ್ಗದ ಅಂದರೆ ಎಲ್ಲಾ ಸ್ತರದ ಮಹಿಳಾ ಜನಸಮುದಾಯಗಳನ್ನು ಒಳಗೊಂಡು ಜನಪರ ಕೆಲಸವನ್ನು ಮಾಡುತ್ತಿವೆ. ನಗರ - ಗ್ರಾಮೀಣ ಶೋಷಿತ ಕಾರ್ಮಿಕರ, ನೌಕರರ, ಕೃಷಿ ಕೂಲಿಗಳ ಮಹಿಳಾ ಸಮುದಾಯಗಳ ಸಮಸ್ಯೆಗಳನ್ನು ಎತ್ತಿಕೊಂಡು ಅವುಗಳ ಪರಿಹಾರಕ್ಕಾಗಿ ಹೋರಾಟ ನಡೆಸುವುದು ನ್ಯಾಯಯುತವೆಂದು, ಇಂದಿನ ಸ್ವಾಯುತ್ತ ಗುಂಪುಗಳು ಆ ನಿಟ್ಟಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಅದು ವರದಕ್ಷಿಣೆ ಸಾವಿನ ವಿಷಯವಾಗಿರಬಹುದು, ಅತ್ಯಾಚಾರವಿರಬಹುದು, ವಿವಾಹ ವಿಚ್ಛೇದನ ಇರಬಹುದು ಅಥವಾ ಮಹಿಳೆಯ ಶೋಷಣೆಗೆ ಕಾರಣವಾದ ಯಾವುದೇ ವಿಷಯವಾದರೂ ಅವುಗಳಲ್ಲಿ ಮಹಿಳಾ ಸ್ವಾಯತ್ತ ಗುಂಪುಗಳು ಸ್ವಯಂ ಪ್ರೇರಣೆಯಿಂದ ಹೋರಾಡುತ್ತಲಿವೆ. ಮಹಿಳಾ ಪರ ಇಂತಹ ಅನೇಕ ಕಾನೂನುಗಳ ಮೂಲಭೂತ ಆಚರಣೆಯಲ್ಲಿರುವ ತೊಡಕುಗಳನ್ನು ದೌರ್ಬಲ್ಯಗಳನ್ನು ನಿವಾರಿಸುವಲ್ಲಿ ಸ್ವಾಯತ್ತ ಗುಂಪುಗಳು ಬಹುವಾಗಿ ಶ್ರಮಿಸುತ್ತಿವೆ.

ಕೆಲವು ಸಂದರ್ಭದಲ್ಲಿ ಸಾರ್ವಜನಿಕ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆಸಿದ ಹೋರಾಟಗಳು ಪೂರ್ಣವಲ್ಲದಿದ್ದರೂ ಅಲ್ಪಮಟ್ಟದಲ್ಲಿ ಫಲಪ್ರದವಾಗಿವೆ. ಕೆಲವು ವಿಷಯಗಳನ್ನು ಸಾರ್ವಜನಿಕಗೊಳಿಸಿ ನಡೆಸಿದ ಹೋರಾಟಗಳು ಹೇರಳವಾಗಿವೆ. ಚಿಪ್ಕೋ ಚಳುವಳಿಯು ಮಹಿಳೆಯರಿಗೆ ಒಂದು ಕೋಟೆಯನ್ನು ನಿರ್ಮಿಸಿತಲ್ಲದೇ ಅದು ಸಾರ್ವಜನಿಕರಣಗೊಂಡು, ಹೋರಾಟದ ತೀವ್ರತೆಯನ್ನು ಹೆಚ್ಚಿಸಿತು. ಹಾಗೆಯೇ ನರ್ಮದಾ ಬಚಾವೋ ಚಳುವಳಿ, (ಮೇಧಾ ಪಾಟ್ಕರ್) ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ಮಣ್ಣು ಸಂರಕ್ಷಣಾ ಹೋರಾಟಗಳು ಇತ್ಯಾದಿ. ಮಹಿಳೆಯರ ಪಾಲ್ಗೊಳ್ಳುವಿಕೆಯಿಂದ ಫಲವನ್ನು ಕಂಡವು.

ಈ ಎಲ್ಲಾ ಚಳುವಳಿಗಳ ತುಡಿತ ಗ್ರಾಮೀಣ ಮಹಿಳೆಯರ, ರೈತ ಕೂಲಿ, ಕೃಷಿ ಕಾರ್ಮಿಕ, ಕಾರ್ಖಾನೆ ಕಾರ್ಮಿಕರ ಸಹನೆಯ ಕಟ್ಟೆಯೊಡೆದು ಶೋಷಣೆ ವಿರುದ್ಧ ಸೆಟೆದು ನಿಂತುದ್ದಾಗಿದೆ. ಸಮಾನ ಕೂಲಿಗೆ ಸಮಾನ ವೇತನ ಎಂಬ ಸಮಾಜವಾದದ ಸೊಲ್ಲಿದೆ. ಅಸಮಾನ ಹಂಚಿಕೆಯ ವಿರುದ್ಧ ಧ್ವನಿ ಇದೆ. ಸಂಪ್ರದಾಯದ

ವಿರುದ್ಧ, ಸಾಂಸ್ಕೃತಿಕ ಬಂಧನ ಪಿತೃಪ್ರಧಾನತೆಯ ಹುನ್ನಾರಗಳಿಗೆ ಪ್ರತಿರೋಧವಿದೆ. ಇಲ್ಲಿ ಗ್ರಹಿಸಬೇಕಾದದ್ದು ಎಲ್ಲ ಚಳುವಳಿಗಳ ನೇತೃತ್ವವನ್ನು ಕಮ್ಯುನಿಸ್ಟ್ ಪಕ್ಷ ವಹಿಸಿದ್ದರೂ ಕೂಡಾ ಗ್ರಾಮೀಣ ಸಮಾಜದಲ್ಲಿ ನಡೆದ ಈ ಹೋರಾಟಗಳಲ್ಲಿ ಭಾಗವಹಿಸಿದ ವಿವಿಧ ಜಾತಿ, ವರ್ಗ, ಪಂಥಗಳಿಗೆ ಸೇರಿದ ಮಹಿಳೆಯರು ಅಲ್ಲಿನ ಪುರುಷರೊಂದಿಗೆ ಹೊಂದಿದಷ್ಟು ಸಮತಾಭಾವವನ್ನು ಮೇಲ್ಜಾತಿಯ ಪುರುಷ ಅಥವಾ ಮಹಿಳೆಯರೊಂದಿಗೆ ಹೊಂದುವುದು ಸಾಧ್ಯವಿರಲಿಲ್ಲ. ಗ್ರಾಮೀಣ ಸಮುದಾಯದ ಕೆಳಜಾತಿಯ ವರ್ಗಗಳಿಗೆ ಸೇರಿದ ಮಹಿಳೆಯರು ಆರ್ಥಿಕ ಉತ್ಪಾದನೆಯಲ್ಲಿ ತೊಡಗಿದವರಾಗಿದ್ದು, ಅವರ ಸಮಸ್ಯೆಯ ತೊಡಕನ್ನು ಬಿಡಿಸಲು ಹೋರಾಟದ ನೇತೃತ್ವವನ್ನು ಮೇಲ್ಜಾತಿಯ, ನಗರದ ವಿದ್ಯಾವಂತರೇ ವಹಿಸಿದ್ದರು. ಇದರಲ್ಲಿ ಭಾಗವಹಿಸಿದ ರೈತಾಪಿ ಮಹಿಳೆಯರು ಯಾವುದೇ ರಾಜಕೀಯ ಅಧಿಕಾರದ ಲಾಲಸೆ ಇಲ್ಲದೇ ಒಂದೇ ಮನಸ್ಸಿನಿಂದ ತೊಡಗಿಸಿಕೊಂಡಿದ್ದರು. ಇದನ್ನು ರಾಷ್ಟ್ರೀಯ ಹೋರಾಟದ ಸಂದರ್ಭದಿಂದಲೂ ಗುರುತಿಸಬಹುದು ಹೋರಾಟಗಳೆಲ್ಲದರಲ್ಲಿ ಸಾಮೂಹಿಕ ಪಾತ್ರ ಮತ್ತು ತೊಡಗಿಸಿಕೊಳ್ಳುವಿಕೆಯ ಆಶಯವೇ ಸಂಘಟನೆಗೆ ಕಾರಣವಾಗಿದೆ. ಚಳುವಳಿಯ ನೇತಾರರ ಕರೆಗೆ, ಪ್ರೋತ್ಸಾಹಕ್ಕೆ ಅಥವಾ ಸಹಮತ ವ್ಯಕ್ತಪಡಿಸಿ ಮಹಿಳೆಯರು ಪಾಲ್ಗೊಂಡಿರಬಹುದು ಅಥವಾ ತಾವೇ ಸ್ವಯಂ ಪ್ರೇರಣೆಯಿಂದ ಹೋರಾಟಕ್ಕೆ ಧುಮುಕಿರಲೂಬಹುದು.

ಈಗಾಗಲೇ ಚರ್ಚಿಸಿದಂತೆ ಮಹಿಳಾ ಸಮಾನತೆಯ ಹೋರಾಟಗಳು, ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟಗಳೊಂದಿಗೆ ನಡೆದಂತಹವು. ಹೆಚ್ಚು ಜಾಗೃತಗೊಂಡ ಮಹಿಳಾ ವರ್ಗ ರಾಷ್ಟ್ರೀಯ ಹೋರಾಟಕ್ಕೆ ಅನುಕೂಲವಾಗಿ ಪರಿಣಮಿಸಿತ್ತು. ಲಿಂಗವೈರುಧ್ಯ, ಮಹಿಳೆಯರ ಅಧೀನತೆ ಇತ್ಯಾದಿ ದೌರ್ಜನ್ಯಗಳ ಬಗ್ಗೆ ಎಚ್ಚರಗೊಂಡದ್ದು, ನಗರದ ವಿದ್ಯಾವಂತ ಮಹಿಳೆಯರೇ. ನಗರದ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಲಿಖಿತವಾಗಿ ದಾಖಲೆಗೊಂಡಿದ್ದು ಹೇರಳವಾಗಿ ಸಿಗುತ್ತಿವೆಯಾದರೂ, ಗ್ರಾಮೀಣ ಮಹಿಳೆಯರು ಹೋರಾಟಗಳಲ್ಲಿ ಭಾಗವಹಿಸಿದ ಕುರಿತು ದಾಖಲೆಗಳು ಸಿಗುವುದು ವಿರಳ. ಆದಾಗ್ಯೂ ಬ್ರಿಟೀಷರ ಆಡಳಿತಾವಧಿಯ ಅಂತ್ಯದಲ್ಲಿ ಗ್ರಾಮೀಣ ಮಹಿಳೆಯರು ಹೋರಾಟದಲ್ಲಿ ಭಾಗವಹಿಸಿ ರಾಷ್ಟ್ರವಿಮೋಚನೆಗಾಗಿ ತಮ್ಮ ಅಮೂಲ್ಯ ಕಾಣಿಕೆ ನೀಡಿರುವುದನ್ನು ಮರೆಯಲಾಗದು.

❖❖

# ೪

# ಸ್ವಾತಂತ್ರ್ಯೋತ್ತರ ಕಾಲದ ಬಳ್ಳಾರಿ ಜಿಲ್ಲೆಯ ರಾಜಕಾರಣ ಮತ್ತು ಮಹಿಳೆ

ಬ್ರಿಟಿಷರು ಭಾರತಕ್ಕೆ ಬರುವ ಮುನ್ನ ಮತ್ತು ನಂತರ ಇದ್ದಂತಹ ಬಳ್ಳಾರಿ ಜಿಲ್ಲೆಯ ರಾಜಕೀಯ ಚಿತ್ರಣವನ್ನು ರಾಜಮನೆತನಗಳ ಹಿನ್ನೆಲೆಯಲ್ಲಿ ನೋಡಲಾಗಿದೆ. ವಿಜಯನಗರದ ಅರಸ ಪೆನುಗೊಂಡೆಯಲ್ಲಿದ್ದ ವೆಂಕಟಪತಿ ದೇವನು (೧೫೮೬-೧೬೧೪) ಈ ಭಾಗವನ್ನು ಹರಪನಹಳ್ಳಿ ಪಾಳೆಯಗಾರರಿಗೆ ಬಿಟ್ಟುಕೊಟ್ಟನು. ಕ್ರಿ.ಶ. ೧೬೭೭-೭೮ರಲ್ಲಿ ಮರಾಠರ ಶಿವಾಜಿ ಇದನ್ನು ವಶಪಡಿಸಿಕೊಂಡನು. ಛತ್ರಪತಿ ಶಿವಾಜಿಯ ಮರಣಾನಂತರ ಕ್ರಿ.ಶ. ೧೬೮೦ರಲ್ಲಿ ಮೊಘಲ್ ಬಾದಶಹನಾದ ಔರಂಗಜೇಬನು ಇದನ್ನು ಪಡೆದುಕೊಂಡನು. ಈತನ ಮರಣಾನಂತರ (ಕ್ರಿ.ಶ. ೧೭೦೭ರಲ್ಲಿ) ಹೈದರಾಬಾದಿನ ನಿಜಾಮನು ಈ ಪ್ರದೇಶವನ್ನು ಕಬಳಿಸಲು ಯತ್ನಿಸಿದ್ದು, '೧೭೬೧ರಲ್ಲಿ ಹೈದರಾಲಿ ಹರಪನಹಳ್ಳಿ ಮತ್ತು ರಾಯದುರ್ಗಕ್ಕೆ ದಂಡೆತ್ತಿ ಬಂದು ಕಪ್ಪ ಕಾಣಿಕೆಯನ್ನೂ ಪಡೆಯುತ್ತಾನೆ' (ಬಳ್ಳಾರಿ ಜಿಲ್ಲಾ ಗ್ಯಾಸೆಟಿಯರ್ ೧೯೦೪ ಪುಟ ೪೫). ಆನಂತರ ೧೭೬೨ರಲ್ಲಿ ಈ ಪ್ರದೇಶ ಹೈದರನ ಆಳ್ವಿಕೆಗೆ ಒಳಪಟ್ಟಿತು. ನಂತರ ಹೈದರಾಲಿಯ ಮಗ ಟಿಪ್ಪುಸುಲ್ತಾನ ಕೆಲಕಾಲದವರೆಗೆ ಇದರ ಮೇಲೆ ಹತೋಟಿಯನ್ನು ಹೊಂದಿದ್ದ. ಕ್ರಿ.ಶ. ೧೭೯೯ರ ಬ್ರಿಟಿಷ್, ಮರಾಠ ಮತ್ತು ನಿಜಾಮರ ಕೂಟದ ೪ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪು ಸೋತನು. ಅವನ ಮರಣಾನಂತರ ಹಿಂದಿನ ಮೈಸೂರು ಸಂಸ್ಥಾನದ ಪ್ರದೇಶ ಹಾಗೂ ಇಂದಿನ ಬಳ್ಳಾರಿ, ದಕ್ಷಿಣಕನ್ನಡ ಮತ್ತು ಉತ್ತರಕನ್ನಡ

ಜಿಲ್ಲೆಗಳು ಇಂಗ್ಲೀಷರ ವಶವಾದವು. ಇಷ್ಟೊತ್ತಿಗಾಗಲೇ ಕರ್ನಾಟಕವು ಬ್ರಿಟಿಷರ ಆಡಳಿತಕ್ಕೆ ಹಲವು ಹಂತಗಳಲ್ಲಿ ಬಂದಾಗಿತ್ತು. "ಆಗಿನ ಗವರ್ನರ್ ಆಗಿದ್ದ ಲಾರ್ಡ್ ಆರ್ಥರ್ ವೆಲ್ಲೆಸ್ಲಿಯು ಸಹಾಯಕ ಸೈನ್ಯ ಪದ್ಧತಿಗೆ (Subsidary Alliance ಸೇನಾ ಮೈತ್ರಿಯಿಂದ) ಕ್ರಿ.ಶ. ೧೮೦೦ರಲ್ಲಿಯೇ ಹೈದರಾಬಾದಿನ ನಿಜಾಮ ಒಪ್ಪಿಕೊಂಡು ಬ್ರಿಟಿಷರ ಮಾಂಡಳಿಕನಾಗಲು ಅಧಿಕೃತ ಸಹಿಯೊಂದಿಗೆ ಸಮ್ಮತಿಯನ್ನು ಸೂಚಿಸಿದ್ದ. ಹೀಗಾಗಿ ನಿಜಾಮನ ವಶದಲ್ಲಿದ್ದ ಕನ್ನಡ ಜಿಲ್ಲೆಗಳು ಬ್ರಿಟಿಷರ ಅಧೀನಕ್ಕೊಳಪಟ್ಟಿದ್ದವು." (ಬಳ್ಳಾರಿ ಜಿಲ್ಲೆಯಲ್ಲಿನ ಕಲೆಕ್ಟರುಗಳ ಆಳ್ವಿಕೆ ೧೮೦೦ - ೧೯೪೭ ಒಂದು ಸಮೀಕ್ಷೆ ವಿರೂಪಾಕ್ಷಿ, ಕನ್ನಡ ವಿಶ್ವವಿದ್ಯಾಲಯ, ಅಕ್ಟೋಬರ್ ೩೧.೧೯೯೫, ಪು. ೮, ಅಪ್ರಕಟಿತ) ೧೮೦೦ರ ಡಿಸೆಂಬರ್‌ನಲ್ಲಿ "ನಿಜಾಮನು ತನಗೆ ಬಂದ ಬಳ್ಳಾರಿ ಪ್ರದೇಶವನ್ನು ಬ್ರಿಟಿಷರಿಗೆ ದತ್ತಿಯಾಗಿ ಬಿಟ್ಟುಕೊಟ್ಟನು. ಆಗಿನಿಂದ ಈ ಭಾಗವನ್ನು ದತ್ತಿಮಂಡಲವೆಂದು (Ceded Districts ಬಳ್ಳಾರಿ, ಕಡಪ, ಕರ್ನೂಲು ಮತ್ತು ಅನಂತಪುರ) ಕರೆಯಲಾಯಿತು. ಹಾಗೆ ಬಳ್ಳಾರಿ ಪ್ರದೇಶವು ಕ್ರಿ.ಶ. ೧೮೦೦ರಲ್ಲಿ ಬ್ರಿಟಿಷರಿಗೆ ನೇರ ಆಳ್ವಿಕೆಗೊಳಪಟ್ಟಿತ್ತು." (ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ಹಂಪಿ, ೧೯೯೮, ಪು. ೨೧). ನಂತರ ಮುಂಬಯಿ ಕರ್ನಾಟಕವೆನಿಸಿದ ಪ್ರದೇಶ ಮರಾಠ ಪೇಶ್ವೆಯ ವಶವಿದ್ದು, ೧೮೧೮ರಲ್ಲಿ ಅವರ ಆಡಳಿತಕ್ಕೆ ಸೇರಿತು. ಕೊಡಗಿನ ರಾಜನನ್ನು ಪದಚ್ಯುತಗೊಳಿಸಿ, ೧೮೩೪ರಲ್ಲಿ ಅದನ್ನು ವಶಕ್ಕೆ ಪಡೆದುಕೊಂಡರು.

"ಇಂದಿನ ಕರ್ನಾಟಕವು ಹಲವು ಸ್ವರೂಪದ ಆಡಳಿತಗಳಿಗೆ ಒಳಪಟ್ಟಿತ್ತು. ಬ್ರಿಟಿಷರ ನೇರ ಆಡಳಿತದಲ್ಲಿದ್ದ ಪ್ರದೇಶಗಳಿಗೆ ದಕ್ಷಿಣಕನ್ನಡ, ಉತ್ತರಕನ್ನಡ, ಬಳ್ಳಾರಿ; ಕೊಳ್ಳೆಗಾಲ ಮುಂತಾದ ಮದ್ರಾಸ್ ಪ್ರಾಂತ್ಯದಲ್ಲಿ ಇದ್ದ ಪ್ರದೇಶಗಳು; ಕೊಡಗು ಕಮೀಶನರಿಂದ ಆಳಲ್ಪಡುತ್ತಿದ್ದ ಬ್ರಿಟಿಷರ ನೇರ ಆಡಳಿತದಲ್ಲಿದ್ದ ಪ್ರದೇಶ. ಬೆಳಗಾವಿ, ಬಿಜಾಪುರ, ಉತ್ತರಕನ್ನಡ ಮತ್ತು ಧಾರವಾಡ ಜಿಲ್ಲೆಗಳು ಮುಂಬಯಿ ಪ್ರಾಂತ್ಯದಲ್ಲಿ ಇದ್ದವು. ಇದರ ವಿನಾ ಮೈಸೂರು, ಹೈದರಾಬಾದ್ ಸಂಸ್ಥಾನಗಳಲ್ಲೇ ಅಲ್ಲದೇ ಜಮಖಂಡಿ, ರಾಮದುರ್ಗ, ಸಂಡೂರು, ಸವಣೂರು ಹೀಗೆ ೨೦ಕ್ಕೂ ಮೇಲ್ಪಟ್ಟು ಕಿರು ಸಂಸ್ಥಾನಗಳಲ್ಲಿ ಸ್ಥಳೀಯ ಆಶ್ರಿತ ರಾಜರ ಆಡಳಿತದಲ್ಲಿ ಕನ್ನಡ ಜನ ಹಂಚಿಹೋಗಿದ್ದರು." (ಈ ಪೈಕಿ ಸುರಪುರ, ಕಿತ್ತೂರು, ನರಗುಂದಗಳನ್ನು ಮುಂದೆ ಬ್ರಿಟಿಷರು ವಶಪಡಿಸಿಕೊಂಡರು) (ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು ೭೯, ಸಂ: ಎಸ್.ಆರ್. ರಾಮಸ್ವಾಮಿ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ, ಲೇ : ಡಾ. ಸೂರ್ಯನಾಥ್ ಕಾಮತ್, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೧೯೯೮, ಪು. ೧೯೫)

೧೯೨೦ರ ನಂತರ ಗಾಂಧೀಜಿಯವರ ಪ್ರವೇಶದಿಂದ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಸಾಮಾಜಿಕ ಸ್ವರೂಪ ತೀವ್ರ ಬದಲಾಯಿತಾದರೂ, ಅದಕ್ಕೂ ಪೂರ್ವ (ಬಳ್ಳಾರಿ ಜಿಲ್ಲೆ) ಕರ್ನಾಟಕದಲ್ಲಿ ರಾಷ್ಟ್ರೀಯ ಹೋರಾಟ ಆರಂಭವಾಗಿತ್ತು. ಇಂಗ್ಲಿಶ್ ಮತ್ತು ಪಾಶ್ಚಿಮಾತ್ಯ ಶಿಕ್ಷಣಗಳಿಂದ ನವ ರಾಷ್ಟ್ರೀಯತೆಯ ಚಳುವಳಿ ಚಿಗುರಿತು. ೧೮೮೫ರಲ್ಲಿ ಸ್ಥಾಪನೆಗೊಂಡ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನಲ್ಲಿನ ಉನ್ನತ ಸ್ಥಾನಗಳೆಲ್ಲ

ಸಮಾಜದ ಉನ್ನತ ವರ್ಗದವರೇ ಆದ ಇಂಗ್ಲಿಶ್ ಶಿಕ್ಷಣ ಪಡೆದ ವರ್ಗದವರಾಗಿರುವುದು ರಾಷ್ಟ್ರೀಯಮಟ್ಟದಲ್ಲಿ ಗಣನೀಯವಾಗಿತ್ತು. ಅಖಿಲ ಭಾರತದ ಮಟ್ಟದಲ್ಲಿದ್ದಂತೆ ಬಳ್ಳಾರಿ ಜಿಲ್ಲೆಯಲ್ಲಿ ಆರಂಭದ ಸ್ವಾತಂತ್ರ್ಯ ಹೋರಾಟದ ಸಾಮಾಜಿಕ ಸ್ವರೂಪವು ಮೇಲೆ ಹೇಳಲಾದ ಸಮಾಜದ ಉನ್ನತವರ್ಗವನ್ನು ಮಾತ್ರ ಒಳಗೊಂಡು ತುಂಬಾ ಸೀಮಿತವಾಗಿತ್ತು. ೧೯ನೇ ಶತಮಾನದ ಕೊನೆಯಭಾಗ ಹಾಗೂ ೨೦ನೇ ಶತಮಾನದ ಮೊದಲ ದಶಕಗಳಲ್ಲಿ, ಈ ಎರಡೂ ದಶಕಗಳ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದವರು. ಕ್ರಿಯಾಶೀಲರಾಗಿದ್ದವರೆಲ್ಲಾ ವೃತ್ತಿಯಲ್ಲಿ ವಕೀಲರಾಗಿದ್ದರು. ಅವರೆಂದರೆ ಕೋಲಾಚಲಂ ವೆಂಕಟರಾವ್, ಕಲ್ಲೂರು ಸುಬ್ಬರಾವ್, ನೇತ್ರಹಳ್ಳಿ ಸಂಜೀವರಾಯರು, ವೆಂಕಟರಮಣಾಚಾರ್ಯ, ಬಾದನಹಟ್ಟಿ ವೆಂಕೋಬರಾಯರು, ಟೇಕೂರು ನಾರಾಯಣಶಾಸ್ತ್ರೀಗಳು, ಲ್ಯಾಂಗ್ಲಿ ಭೀಮಸೇನರಾವ್ ಮುಂತಾದವರು ಸಮಾಜದ ಮೇಲ್ಜಾತಿಯ ಗುಂಪಿಗೆ ಸೇರಿದವರಾಗಿದ್ದರು. ಆರಂಭಿಕ ಹಂತದಲ್ಲಿ ಆಲೂರು ವೆಂಕಟರಾಯರು, ಗಳಗನೂರು ಶಾಂತಕವಿ, ಕೆ.ವಾಸುದೇವಾಚಾರ್ಯರು, ಸುಬೋಧ ರಾಮರಾಯರು, ಬಿ. ವೆಂಕಟಾಚಾರ್ಯರು ಮತ್ತಿತರರು ರಾಜ್ಯದ ಜನತೆಯಲ್ಲಿ ಬಿತ್ತಿದ ರಾಷ್ಟ್ರೀಯ ಭಾವನೆಗಳು ಬಳ್ಳಾರಿ ಜಿಲ್ಲೆಯ ಜನತೆಯನ್ನು ಪ್ರಚೋದಿಸಿದ್ದವು. ಇದರೊಂದಿಗೆ ವೃತ್ತ ಪತ್ರಿಕೆಗಳು ಸಹ ಈ ನಾಯಕರುಗಳ ವಿಚಾರಗಳನ್ನು ಪ್ರಚುರಪಡಿಸಿ ತಮ್ಮ ಪಾಲಿನ ಕೊಡುಗೆಯನ್ನು ನೀಡಿದವು.

೧೮೮೫ರಲ್ಲಿ ಮುಂಬಯಿಯಲ್ಲಿ ನಡೆದ Indian National Congressನ ಅಧಿವೇಶನಕ್ಕೆ ಕರ್ನಾಟಕದಿಂದ ಮೊಟ್ಟ ಮೊದಲಬಾರಿಗೆ ಬೆಳಗಾವಿ ಮತ್ತು ಬಳ್ಳಾರಿ ಕಡೆಯ ಎರಡು ತಂಡಗಳು ಭಾಗವಹಿಸಿದ್ದವು. ಹಾಗೆಯೇ ಮುಂದೆ ನಡೆದ ಮದ್ರಾಸ್ ಮತ್ತು ಅಲಹಾಬಾದ್‌ಗಳಲ್ಲಿನ ಅಧಿವೇಶನಗಳಿಗೂ ಈ ತಂಡಗಳು ಭಾಗವಹಿಸಿರುವುದನ್ನು ನೋಡಿದರೆ ಬಳ್ಳಾರಿಯ ಜನತೆ ಆಗಿನ ರಾಷ್ಟ್ರೀಯ ಹೋರಾಟದಲ್ಲಿ ಎಷ್ಟೊಂದು ಸಕ್ರಿಯವಾಗಿ ಕಾರ್ಯಪ್ರವೃತ್ತರಾಗಿದ್ದರೆಂಬುದು ತಿಳಿದುಬರುತ್ತದೆ. ಹೀಗಾಗಿ ಗಾಂಧೀ ಆಗಮನದ ಮೊದಲೇ ಇಲ್ಲಿ ಸ್ವಾತಂತ್ರ್ಯದ ಕಿಚ್ಚು ಹತ್ತಿತ್ತು. ರಾಷ್ಟ್ರೀಯ ಕಾಂಗ್ರೆಸ್ ಆಯಾ ಪ್ರಾಂತ್ಯಗಳಿಗನುಗುಣವಾಗಿ ಪ್ರತ್ಯೇಕ ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ಸ್ಥಾಪಿಸಿಕೊಳ್ಳಲು ಅನುಮತಿ ಕೊಟ್ಟಿತ್ತು. ಆಗ 'ಕರ್ನಾಟಕದ ಸಿಂಹ' ಎನಿಸಿಕೊಂಡಿದ್ದ ಗಂಗಾದರರಾವ್ ದೇಶಪಾಂಡೆ ಅವರು ಮೊಟ್ಟಮೊದಲ ಕೆ.ಪಿ.ಸಿ.ಸಿ. ಅಧ್ಯಕ್ಷರಾದರು. ಇದೇ ಸಂದರ್ಭದಲ್ಲಿ ಆಲೂರು ವೆಂಕಟರಾಯರು ಏಕೀಕರಣ ಚಳುವಳಿಯನ್ನು ಹುಟ್ಟುಹಾಕಿದರು. ಏಕೆಂದರೆ ಕನ್ನಡ ಮತ್ತು ಕರ್ನಾಟಕ ಪ್ರೇಮಗಳನ್ನು ಬಲಪಡಿಸಿದರೆ ರಾಷ್ಟ್ರೀಯತೆಯನ್ನು ಸಾಧಿಸುವುದು ಸುಲಭ ಎಂದು ಮನಗಂಡಿದ್ದರು. ಆವಾಗಲೇ 'ಕರ್ನಾಟಕದ ಗತವೈಭವ'ವನ್ನು ೧೯೧೭ರಲ್ಲಿ ಆಲೂರು ವೆಂಕಟರಾಯರು ಬರೆದದ್ದು. ಅಖಂಡ ಕರ್ನಾಟಕದ ಕಲ್ಪನೆ, ಅದರ ಇತಿಹಾಸದ ಸ್ಫೂರ್ತಿದಾಯಕ ಕಥನ ಅದು ಒಳಗೊಂಡಿತ್ತು.

೧೯೨೧-೨೨ರಲ್ಲಿ ಭುಗಿಲೆದ್ದ ರಾಷ್ಟ್ರೀಯ ಹೋರಾಟದ ಚಳುವಳಿಯ ಕಾವು ತನ್ನ ತೀವ್ರತೆಯನ್ನು ಹೆಚ್ಚಿಸಿತ್ತು. ಗಾಂಧೀಜಿಯವರ ಕರೆಗೆ ಓಗೊಟ್ಟ ಜನತೆ ಅನೇಕ ಸಭೆ, ಮೆರವಣಿಗೆ, ಬಂದ್‌ನಂತಹ

ಚಟುವಟಿಕೆಗಳಲ್ಲಿ ತೊಡಗಿದರು. ಸ್ವದೇಶಿ ವಸ್ತುಗಳ ಸ್ವೀಕಾರ, ವಿದೇಶಿ ವಸ್ತುಗಳ ಬಹಿಷ್ಕಾರ ಅವ್ಯಾಹತವಾಗಿ ನಡೆಯತೊಡಗಿದವು. ರೈತರು, ಕೃಷಿ ಕೂಲಿ-ಕಾರ್ಮಿಕರು, ಸಮಾಜ ಸೇವಕರು, ಗ್ರಾಮೀಣ ಜನತೆ ಇದರ ಮುಂಚೂಣಿಯಲ್ಲಿದ್ದರು. ಮಹಿಳೆಯರನೇಕರು ಕೂಡ ಹೋರಾಟದಲ್ಲಿ ಹಿಂದೆ ಬೀಳಲಿಲ್ಲ. ಅವರು ಪರೋಕ್ಷವಾಗಿ ಸ್ವಾತಂತ್ರ್ಯ ಹೋರಾಟಗಾರರಿಗೆ ಸಹಾಯವನ್ನು ಸ್ಫೂರ್ತಿಯನ್ನು ನೀಡುತ್ತಿದ್ದರು. ಕೆಲವರಿಗೆ ಮನೆಯಲ್ಲಿ ಆಶ್ರಯವನ್ನು ಇತ್ತರು. ಜಿಲ್ಲೆಯಾದ್ಯಂತ ಈ ಬಗೆಯ ಅನೇಕ ಚಳುವಳಿಗಳು ನಡೆದವು. ಮದ್ಯದಂಗಡಿಗಳ ಮುಂದೆ ಜನರು ಧರಣಿ ಕೂತರು, ಕೆಲ ಯುವಕರು ಕಛೇರಿ ಕಲಾಪಗಳಿಗೆ ಬಹಿಷ್ಕಾರ ಹಾಕಿ ಅಸಹಕಾರವನ್ನು ಪ್ರದರ್ಶಿಸಿದರು. ಹೀಗೆ ಕಾನೂನಿನ ಉಲ್ಲಂಘನೆ ಮಾಡಿದ್ದಕ್ಕಾಗಿ, ಬಳ್ಳಾರಿ ನಗರದಲ್ಲಿ ಟೇಕೂರ ನಾರಾಯಣಶಾಸ್ತ್ರಿ, ಕಲ್ಲೂರು ಸುಬ್ಬರಾವ್ ಮತ್ತು ಲ್ಯಾಂಗ್ಲಿ ಭೀಮಸೇನರಾವ್ ಅವರು ೬ ತಿಂಗಳು ಶಿಕ್ಷೆಗೆ ಗುರಿಯಾದರು. ಕೆಲ ಹೋರಾಟಗಾರರು ಬಂಧನಕ್ಕೊಳಗಾದರು. ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಮುಸ್ಲಿಮರೂ ಭಾಗವಹಿಸಿದ್ದರು. ನೆಗಳೂರು ಇಮಾಮ್ ಸಾಬ್, ಬಳ್ಳಾರಿಯ ಹಯಾತ್ ಸಾಬ್, ಸುಲ್ತಾನ್ ಮೊಹಿದ್ದಿನ್, ಅಕ್ಬರ್ ಸಾಹೇಬ್, ಹೊಸಪೇಟೆಯ ಎಲ್.ಪೀರಾನ್ ಸಾಹೇಬ ಮುಂತಾದವರು. ಜಿಲ್ಲೆಯ ಮಹಿಳೆಯರೂ ಸೇರಿದಂತೆ ಜಯಲಕ್ಷ್ಮಿಬಾಯಿ, ಡಾ.ಲಕ್ಷ್ಮಿದೇವಿ, ಕೋಗಳಿ ರುದ್ರಮ್ಮ ಮುಂತಾದವರು ಪಾಲ್ಗೊಂಡಿದ್ದರು. ಡಾ. ಲಕ್ಷ್ಮಿದೇವಿ ಹಾಗೂ ಕೋಗಳಿ ರುದ್ರಮ್ಮ ಇವರಿಬ್ಬರದೂ ವಿಧವಾ ಪುನರ್ವಿವಾಹವಾಗಿತ್ತು. ಆ ಹೊತ್ತಿಗೆ ಸಾರ್ವಜನಿಕವಾಗಿ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

೧೯೩೦ರಲ್ಲಿ ಗಾಂಧೀಜಿಯವರು ಆರಂಭಿಸಿದ ಕಾಯಿದೆಭಂಗ ಚಳುವಳಿಯು ಕರ್ನಾಟಕದಲ್ಲಿ ಒಂದಿಲ್ಲೊಂದು ಬಗೆಯ ಪ್ರತಿರೋಧಕ್ಕೆ ದಾರಿಮಾಡಿಕೊಟ್ಟಿತ್ತು. ಕಾಯಿದೆಭಂಗ ಮಾಡಿದ್ದ ನೂರಾರು ಜನರು ಜೈಲುಶಿಕ್ಷೆ ಅನುಭವಿಸಿದರು. ಈ ಹೊತ್ತಿಗಾಗಲೇ ಗುಜರಾತ್ ನ ಬರ್ಡೋಲಿಯಲ್ಲಿ ನಡೆದ ಪ್ರಯೋಗ 'ಕರ ನಿರಾಕರಣೆ ಚಳುವಳಿ' ಯಶಸ್ವಿಯಾದಂತೆ ಇನ್ನಷ್ಟು ಗಂಭೀರ ಸ್ವರೂಪ ತಳೆಯಿತು. ಇದು ಬಳ್ಳಾರಿಯಲ್ಲಿ ವ್ಯಾಪಕವಾಗಿ ಜನರ ಮನದಲ್ಲಿ ಹರಿದಾಡಲಾರಂಭಿಸಿತು. ಅನೇಕರು ಬಂಧನಕ್ಕೊಳಗಾದರು. ಕೆಲವರು ಶಿಕ್ಷೆಗೆ ಗುರಿಯಾದರು, ದಂಡತೆತ್ತರು. ಅಂದಿನ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಪ್ರಕಟಣೆಯಂತೆ ಬಂಧನಕ್ಕೊಳಗಾದವರ ಸಂಖ್ಯೆ ೭೭. ಇವರೆಲ್ಲಾ ಒಂದಿಲ್ಲೊಂದು ಆಪಾದನೆಯ ಮೇಲೆ ಬಂಧಿತರಾಗಿದ್ದರು. ಕೆಲವರು ಈಚಲುಮರ ಕಡಿದಿದ್ದಕ್ಕೆ, ಕೆಲವರು ವಿದೇಶಿ ಬಟ್ಟೆ ಮಾರಾಟದ ವಿರುದ್ಧ ಪ್ರದರ್ಶನ ನಡೆಸಿದ್ದಕ್ಕೆ, ಇನ್ನೂ ಕೆಲವರು ಭೂಕಂದಾಯ, ಮತ್ತಿತರ ಕರ ಕೊಡದೇ ಹೋದುದಕ್ಕಾಗಿ ನಾನಾ ಅವಧಿಯ ಜೈಲು ಶಿಕ್ಷೆಗೊಳಪಟ್ಟರು. ಇದರಲ್ಲಿ ಮಹಿಳೆಯರೂ ಗಣನೀಯವಾಗಿ ರಾಜ್ಯದಾದ್ಯಂತ ಪಾಲ್ಗೊಂಡಿದ್ದರು.

ಗಾಂಧೀ-ಇರ್ವಿನ್ (Gandhi-Irwin) ಒಪ್ಪಂದದ ನಂತರ ೧೯೩೨ರಲ್ಲಿ ಕರ ನಿರಾಕರಣೆ ಪುನಃ ಆರಂಭವಾಯಿತು. ಬ್ರಿಟಿಷರು ಕರ ನಿರಾಕರಿಸಿದವರ ಮನೆ ಮಠ ಆಸ್ತಿಗಳನ್ನು ಮುಟ್ಟುಗೋಲು ಹಾಕಿದರು.

ಹರಾಜಿಗಾಗಿ ಸಾರ್ವಜನಿಕಗೊಳಿಸಿದ್ದರು. ಎಷ್ಟೋ ಜನರು ತೆರಿಗೆ ತೆರದೇ ಬ್ರಿಟಿಷರು ಹೂಡುವ ತಂತ್ರಗಳಿಗೆ ಎದುರಾಗಿ ನಿಲ್ಲಲು ಸಿದ್ಧರಿದ್ದರು. ಅದೆಷ್ಟೆಂದರೆ ತಮ್ಮ ಮನೆ ಮಠಗಳನ್ನು ಕಳೆದುಕೊಳ್ಳಲು ಸಿದ್ಧರಿದ್ದರು. ಬ್ರಿಟಿಷರು ತೆರಿಗೆ ಕೊಡದ ಮನೆಗಳನ್ನೆಲ್ಲಾ ಹರಾಜು ಹಾಕಿದ ಸಂದರ್ಭದಲ್ಲಿ ಕೆಲವನ್ನು ಕೊಳ್ಳುವವರೇ ಇರುತ್ತಿರಲಿಲ್ಲ. ಕೆಲವರು ಸರಕಾರಿ ನೌಕರರು ಮತ್ತು ಇಂಗ್ಲೀಷರಿಗೆ ಅಂದರೆ ಬ್ರಿಟಿಷ್ ರಾಜಸತ್ತೆಗೆ ನಿಷ್ಠೆಯುಳ್ಳವರು ಅವನ್ನು ಕೊಂಡ ಪ್ರಸಂಗಗಳು ಜರುಗಿದವು. ಇಂಥವರ ಮನೆಗಳ ಮುಂದೆ ಮಹಿಳಾ ಸ್ವಯಂ ಸೇವಕರು ನಿರಶನ ಕೂತರು. ಆ ವೇಳೆಯಲ್ಲಿ ಅನೇಕ ಅವಹೇಳನ ಭರ್ತ್ಸನೆಗಳು ನಡೆದವು. ಅವರ ಮೇಲೆ ತ್ಯಾಜ್ಯವಸ್ತುಗಳನ್ನೆಲ್ಲಾ ಎಸೆದರು. ಕಸಕಡ್ಡಿ, ತಿಪ್ಪೆ ಮೈಗೆ ಎರಚಿದರು, ಅವಮಾನಗೊಳಿಸಿದರು. ಗೂಂಡಾಗಳನ್ನು ಮೈಮೇಲೆ ಹರಿಬಿಟ್ಟರು. ಆದರೂ ಮಹಿಳೆಯರು ಧೃತಿಗೆಡಲಿಲ್ಲ. ನಿರಶನವನ್ನು ಕೈ ಬಿಡಲಿಲ್ಲ. ಕೆಲವೊಮ್ಮೆ ಇದು ವಾರಗಟ್ಟಲೆ ನಡೆಯಿತು. ಪೊಲೀಸರು ಈ ಮಹಿಳೆಯರಿಗೆ ಚಿತ್ರಹಿಂಸೆ ಕೊಟ್ಟರೂ ಚರಾಸ್ತಿಗಳನ್ನು ಆಯಾ ಮಾಲೀಕರಿಗೆ ಹಿಂದುರಿಗಿಸಿದ ಮೇಲೆಯೇ ನಿರಶನ ನಿಲ್ಲಿಸುತ್ತಿದ್ದರು. "ಹರಾಜಾದ ವಸ್ತುಗಳನ್ನು ಮತ್ತೆ ಪಡೆಯುವ ಪ್ರಯತ್ನದಲ್ಲಿ ಮಹಿಳಾ ಸತ್ಯಾಗ್ರಹಿಗಳು ವಸ್ತುಗಳನ್ನು ಕೊಂಡು-ಕೊಂಡವರ ಮನೆಗಳ ಮುಂದೆ ಉಪಾವಾಸ ಕುಳಿತಿದ್ದಿದೆ. ಶಿವಮೊಗ್ಗ ಜಿಲ್ಲೆಯ ಹೆಚ್ಚೆ ಎಂಬಲ್ಲಿ ಹೀಗೆ ಸತ್ಯಾಗ್ರಹ ಮಾಡಲಾಯಿತು. ಗೌರಮ್ಮ, ಕಾವೇರಮ್ಮ, ಲಕ್ಷ್ಮಮ್ಮ ಮತ್ತಿತರರ ಸಂಘಟನಾ ಸಾಮರ್ಥ್ಯ ಮೆಚ್ಚುವಂಥದು. ಈ ಮಹಿಳಾ ನಾಯಕರು ದುಗ್ಗಮ್ಮಮ ಮತ್ತು ಭಾಗೀರಥಮ್ಮನವರೊಡಗೂಡಿ ಅಕ್ಕುಂಜಿಯಲ್ಲಿ ಸತ್ಯಾಗ್ರಹ ನಡೆಸಿದರು." (ಕರ್ನಾಟಕ ಚರಿತ್ರೆ ಸಂಪುಟ ೭, ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರು, ಲೇಖಕರು : ಡಾ. ಎಂ.ಜಮುನಾ, ೧೯೯೭, ಪು.೧೫೩)

## ೧. ಬಳ್ಳಾರಿ ಜಿಲ್ಲೆಯ ಹುಟ್ಟು ಮತ್ತು ಮಹತ್ವ

'ಬಳ್ಳಾರಿ'ಯ ಹುಟ್ಟು ಕುರಿತು ಅನೇಕ ಕಥೆಗಳಿವೆ. ಐತಿಹ್ಯಗಳಿವೆ. ಈ ನಗರ ಕ್ರಿ.ಶ. ೧೨ನೇ ಶತಮಾನದಲ್ಲಿಯೇ ಅಸ್ತಿತ್ವದಲ್ಲಿತ್ತೆಂದು ಒಂದು ವಾದವಿದೆ. ಆದರೆ ಈ ಬಗ್ಗೆ ಖಚಿತವಾಗಿ ಒಪ್ಪುವುದು ಸುಲಭದ ಮಾತಲ್ಲ. ಬೈಲೂರಿನಲ್ಲಿ ಸಿಕ್ಕ ಕ್ರಿ.ಶ. ೧೧೩೧ರ ಒಂದು ಶಾಸನದ ಪ್ರಕಾರ ಬಳ್ಳಾರಿ (Ballare) ಪ್ರದೇಶದ ಉಲ್ಲೇಖವನ್ನು ಕಾಣಬಹುದು. ನಂತರ ದೊರೆತ ಸಿಂದಿಗೇರಿ, ಕೋಳೂರು, ಕುರುಗೋಡು ... ಇತ್ಯಾದಿ ಶಾಸನಗಳಲ್ಲಿ ಬಳ್ಳಾರಿ ಎಂಬ ಪದವನ್ನು ಬಳಸಿರುವುದು ಕಂಡುಬಂದಿದೆ. "In three Hoysala inscriptions of the years 1161 A.D. (Belur-193), 1178 A.D. (Nagamangala-70) and 1183 A.D. (Belur-137), 'Ballare' is mentioned as one of the places cpatured by the Hoysala King Vishnuvrdhana. From the context of enumeration of places in these records, it is clear that the place referreed to therein as Ballare is Bellary of the present days" (Gazetteer of India, Mysore state, Bellary District, Govt. Press, Bangalore, 1972)

ಬಳ್ಳಾರಿ ಕುರಿತ ಬಸವಪುರಾಣದ ಒಂದು ದಂತ ಕಥೆಯಂತೆ, ಕೊಳೂರಿನಲ್ಲಿ ಒಬ್ಬ ಶಿವಭಕ್ತನಿದ್ದ. ಅವನ ಹೆಸರು ಬಲ್ಲೇಶ ಮಲ್ಲಯ್ಯ. ಲಿಂಗಪೂಜೆ ಮಾಡದೇ ಎಂದೂ ಊಟವನ್ನು ಮಾಡುತ್ತಿರಲಿಲ್ಲ. ಅವನೊಬ್ಬ ಮಹಾ ಶಿವಭಕ್ತ. ಶಿವನ ಸಾಕ್ಷಾತ್ಕಾರಕ್ಕಾಗಿ, ದರ್ಶನವನ್ನು ಪಡೆಯಲು ಧಾನ್ಯವನ್ನು ಅಳೆಯುವ ಬಳ್ಳವಾಗಿ (ಸೇರಾಗಿ) ಅವತಾರ ತಾಳಿದ. ಹೀಗೆ ಮಲ್ಲೇಶನು ಬಳ್ಳವಾಗಿ ಅವತರಿಸಿದ ಪ್ರದೇಶವನ್ನು ಬಳ್ಳಾರಿ ಎಂದು ಕರೆಯುವಂತಾಯಿತು. ಈಗಲೂ ಕೂಡ ಆ ಕೋಟೆಯಲ್ಲಿ ಮಲ್ಲೇಶನ ಆರಾಧ್ಯ ದೈವ ಶಿವನ ಹಳೆಯ ಗುಡಿಯು ಇದೆ. ಈ ಕುರಿತಾದ ಕಥೆಯನ್ನು ಸರ್ಪಭೂಷಣ ಶಿವಯೋಗಿಗಳ ರಚನೆಯ ಹಾಡಿನಲ್ಲಿ ಕಾಣಬಹುದು ಅಥವಾ ಕೇಳಬಹುದು. ಕರ್ನಾಟಕದ ಪ್ರಸಿದ್ಧ ಕವಿಗಳು ಈ ಸರ್ಪಭೂಷಣ ಶಿವಯೋಗಿಗಳು. ಇನ್ನೊಂದು ಕಥೆಯಂತೆ, ಜನ್ನನು ತನ್ನ ಯಶೋಧರ ಚರಿತೆಯಲ್ಲಿ 'ಬಳಾರಿ' ಎಂದು ದೇವತೆಯನ್ನು ಹೆಸರಿಸಿದ್ದಾನೆ. ಈ ದೇವತೆಯೇ ದುರ್ಗಮ್ಮನ ಅವತಾರವಾಗಿ ಜನಿಸಿದ್ದಾಳೆ. ಅವಳು ಜನಿಸಿದ ನೆಲವನ್ನು ಬಳ್ಳಾರಿ ಎಂದು ಕರೆಯಲಾಗಿದೆ. ಈಗಲೂ ಕೂಡಾ ಕನ್ನಡದಲ್ಲಿ ಬರೆದು, ಓದುವುದು ಬಳ್ಳಾರಿ 'Ballari' ಎಂದು. ಆದರೆ ಬ್ರಿಟಿಷರ ಆಗಮನದಿಂದಾಗಿ ಅದು ಇಂಗ್ಲೀಷಿಕರಣವಾಗಿ 'Bellary' ಎಂದಾಯಿತು.

ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯಪೂರ್ವ ಅಂದರೆ ಬ್ರಿಟಿಷ್ ಭಾರತದ ಕಾಲದಲ್ಲಿ ಆಗಿನ ಹಳೆ ಮದ್ರಾಸ್ ಪ್ರಾಂತ್ಯಕ್ಕೆ (Madras Presidency) ಸೇರ್ಪಡೆಯಾಗಿತ್ತು. ಬಳ್ಳಾರಿಯೊಂದಿಗೆ ಕ್ರಿ.ಶ.೧೮೦೦ರಲ್ಲಿ ಈಗಿನ ಆಂಧ್ರಪ್ರದೇಶದ ಕರ್ನೂಲ್, ಕಡಪ ಮತ್ತು ಅನಂತಪುರ ಜಿಲ್ಲೆಗಳೂ ಸೇರಿ Presidency ಯ Ceded Districts ಅಥವಾ ದತ್ತಿ ಮಂಡಲಗಳೆಂದು ಘೋಷಿಸಲ್ಪಟ್ಟಿದ್ದವು. ಈ ಪ್ರದೇಶಗಳೆಲ್ಲ ಬ್ರಿಟಿಷರ ನೇರ ಆಳ್ವಿಕೆಗೊಳಪಟ್ಟಿದ್ದವು. ಅದೇ ವರ್ಷ ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಯ ಪ್ರಥಮ ಕಲೆಕ್ಟರ್‌ನಾಗಿ ಶ್ರೀ ಥಾಮಸ್ ಮನ್ರೋ ನೇಮಕಗೊಂಡಿರುವುದು ಚಾರಿತ್ರಿಕ ದಾಖಲೆಗಳಿಂದ ತಿಳಿದುಬಂದಿದೆ. ಭಾರತವು ಆಗಸ್ಟ್ ೧೫, ೧೯೪೭ರ ಸ್ವಾತಂತ್ರ್ಯ ನಂತರವೂ ಕೂಡಾ ಅಂದರೆ ಬಳ್ಳಾರಿ ಜಿಲ್ಲೆಯ ಭಾಷಾವಾರು ರಾಜ್ಯಗಳ ವಿಂಗಡನೆಯವರೆಗೂ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿಯೇ ಉಳಿದಿತ್ತು. ನಂತರ ಅಕ್ಟೋಬರ್ ೧, ೧೯೫೩ರಂದು ಕನ್ನಡ ಭಾಷೆ ಮಾತನಾಡುವ ಜನ ಪ್ರದೇಶವೆಲ್ಲ ಪ್ರತ್ಯೇಕವಾಗಿ ಮೈಸೂರು ರಾಜ್ಯ ಎಂದು ಅಸ್ತಿತ್ವಕ್ಕೆ ಬಂದಿತು. ಅಂದಿನಿಂದ ಬಳ್ಳಾರಿ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಗಿ ಅಖಂಡ ಕನ್ನಡಿಗರ ಅವಿಭಾಜ್ಯ ಅಂಗವಾಗಿ ಉಳಿಯಿತು. ಭಾರತ ಒಕ್ಕೂಟದ ರಾಜಕೀಯ, ಸಾಮಾಜಿಕ, ಆರ್ಥಿಕ ಬದಲಾವಣೆಗಳ, ಸ್ಥಿತ್ಯಂತರಗಳ ಭಾಗವಾಗಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದೆ. ಪ್ರಜಾಸತ್ತೆಯ ಪ್ರತಿನಿಧಿ ಸರಕಾರದ ಒಂದು ಅಂಗವಾಗಿ, ಇಲ್ಲಿನ ಜನತೆ ಆಳುವ ಸರಕಾರದ ಕಾಯಿದೆ ಕಾನೂನು, ಜನಪರ ಕಾರ್ಯಗಳು ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಕ್ತವಾಗಿ ಮೆಚ್ಚುವ ಹಾಗೂ ವಿಮರ್ಶಿಸುವ ತಿಳುವಳಿಕೆಯನ್ನು ಪಡೆದಿದ್ದಾರೆ. ಹೀಗಾಗಿ ಇಲ್ಲಿನ ಸ್ಥಳೀಯ ವಿಷಯಗಳೊಂದಿಗೆ ರಾಜ್ಯ, ರಾಷ್ಟ್ರದ ಮತ್ತು ಅಂತರರಾಷ್ಟ್ರೀಯ ವಿದ್ಯಾಮಾನಗಳ ಬಗೆಗೂ ಕಾಳಜಿಯನ್ನು ಹೊಂದಿದ್ದರ ಪರಿಣಾಮವಾಗಿ ಜನರು ತಮ್ಮ ಅಮೂಲ್ಯವಾದ, ಮುಕ್ತ ಮತದಾನದ ಮೂಲಕ ರಾಜಕೀಯ (ಅಧಿಕಾರ ರಾಜಕಾರಣದ) ಭವಿಷ್ಯವನ್ನು ನಿರ್ಧರಿಸುವ ಅನೇಕ ಅವಕಾಶಗಳನ್ನು ಪಡೆದುಕೊಂಡಿದ್ದಾರೆ. ದೇಶದ

ಪ್ರಮುಖ ರಾಜಕೀಯ ಪಕ್ಷಗಳ, ರಾಜಕೀಯ ಮುತ್ಸದಿಗಳ, ನಾಯಕರುಗಳ ಆಸಕ್ತಿಯನ್ನು ಕೆರಳಿಸಿದ ಕ್ಷೇತ್ರವಾಗಿದೆ. ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲೂ ಬಳ್ಳಾರಿ ಜಿಲ್ಲೆಯು ಅನೇಕ ರಾಜಕೀಯ ವಿದ್ಯಾಮಾನಗಳಿಗೆ, ಬೆಳವಣಿಗೆಗೆ ಅತ್ಯಂತ ಭರವಸೆಯ - ಆಶಾದಾಯಕ ತಾಣವಾಗಿದೆ.

ಸ್ವಾತಂತ್ರ್ಯನಂತರದ ಕಾಲಘಟ್ಟಗಳಲ್ಲಿ ಬಳ್ಳಾರಿ ಜನತೆ ಆಡಳಿತಾರೂಢ ಸರಕಾರಗಳಿಗೆ (ಕೇಂದ್ರ ಅಥವಾ ರಾಜ್ಯ ಅಥವಾ ಸ್ಥಳೀಯ ಸಂಸ್ಥೆಗಳಿಗೆ) ಸಹಕಾರವನ್ನು ವಿಸ್ತರಿಸುವುದರೊಂದಿಗೆ, ಸಾರ್ವಜನಿಕ ಉಪಯೋಗಿ ಕಾಮಗಾರಿಗಳಿಗೆ ಆರ್ಥಿಕ ಸಹಾಯವನ್ನು ಹಿಂದಿನಿಂದಲೂ ಕೊಡುತ್ತಲೇ ಬಂದಿದ್ದಾರೆ. ಶಾಲೆ, ಆಸ್ಪತ್ರೆ, ರಸ್ತೆ, ಕೆರೆ ನಿರ್ಮಾಣದಂತಹ ಕಾರ್ಯಗಳಿಗೆ ಜನರು ಸ್ವಯಂ ಪ್ರೇರಣೆಯಿಂದ ಧನಸಹಾಯ ಹಾಗೂ ಶ್ರಮವನ್ನು ಕೊಡುಗೆಯಾಗಿ ನೀಡಿದ್ದಾರೆ. ಅದರಲ್ಲೂ ಯುದ್ಧದಂತಹ ಹಾಗೂ ಇತರೇ ತುರ್ತು ಸಂದರ್ಭಗಳಲ್ಲಿ ದೇಶ ರಕ್ಷಣೆಗಾಗಿ ಸಾಕಷ್ಟು ಧನ ಸಹಾಯವನ್ನು ರಾಷ್ಟ್ರೀಯ ರಕ್ಷಣಾ ನಿಧಿಗೆ ಸಂಗ್ರಹಿಸಿ ಕೊಟ್ಟಿದ್ದಾರೆ. ನೆರೆಯ ಪಾಕಿಸ್ತಾನ ಮತ್ತು ಚೀನಾ ದೇಶಗಳೊಂದಿಗೆ ನಡೆದ ೧೯೬೨, ೧೯೬೭ ಮತ್ತು ೧೯೭೨ರ ಯುದ್ಧಗಳಲ್ಲಿ ಅತ್ಯಂತ ಭಾವೋದ್ವೇಗರಾಗಿ, ಹೆಮ್ಮೆಯಿಂದ ಧನಸಹಾಯವನ್ನು ನೀಡುವುದರ ಮೂಲಕ ರಾಷ್ಟ್ರಪ್ರೇಮವನ್ನು ಮೆರೆದಿದ್ದಾರೆ. ಒಂದು ವರದಿಯಂತೆ ನಗದು ಹಣದೊಂದಿಗೆ ("As at the end of April 1972, the total cash contribution of the people of the district towards the fund stood at about Rs. 6,65,957 lakshs, besides contribution in kind which included two goldrings" Mysore state Gazetteer, Bellary District, 1972 p.647) ಬಂಗಾರವನ್ನು ಕೂಡಾ ನಿಧಿಗೆ ಅರ್ಪಿಸಿದ್ದಾರೆ. ಹಾಗೆಯೇ ದೇಶದ ಶಾಂತಿ ಸಂದರ್ಭದಲ್ಲಿ ಆಚಾರ್ಯ ವಿನೋಬಾ ಭಾವೆಯವರ ಭೂದಾನ ಚಳುವಳಿಗೂ ೧೯೫೮ - ೬೦ರಲ್ಲಿ ಜನತೆ ಸಕಾರಾತ್ಮಕವಾಗಿಯೇ ಸ್ಪಂದಿಸಿದ್ದಾರೆ. ಆದರೆ ಅದಕ್ಕಿಂತಲೂ ಮುಂಚೆ ೮ - ೧೦ ವರ್ಷಗಳಿಗಿಂತಲೂ, ಅಲ್ಲಂ ಸುಮಂಗಳಮ್ಮನವರೇ ಸ್ವಯಂ ಪ್ರೇರಿತರಾಗಿ ಗುಡೇಕೋಟೆಯ ಬಳಿಯ ೨೦೦ ಎಕರೆ ಭೂಮಿಯನ್ನು ದಾನ ನೀಡಿದ್ದರು. ಇದರಿಂದ ಜಿಲ್ಲೆಯಲ್ಲಿ ಮಹಿಳೆಯರು ಕೂಡಾ ತಮ್ಮ ಸಮಾಜ ಸೇವೆಗಳಿಂದ ಮಾದರಿಯಾಗಿದ್ದಾರೆ (ಬಳ್ಳಾರಿಯ ಅಲ್ಲಂ ಸುಮಂಗಳಮ್ಮನವರು, ಡಾ. ಮೃತ್ಯುಂಜಯ ರುಮಾಲೆ, ವೀರಶೈವ ಅಧ್ಯಯನ ಸಂಸ್ಥೆ, ಡಂಬಳ-ಗದಗ, ೧೯೯೯, ಪು. ೪೯). ಅವರ ಆದರ್ಶಗಳ ಪ್ರಭಾವಕ್ಕೆ ಒಳಗಾದವರು ಅನೇಕರು. ಕೆಲವು ಭೂಮಾಲೀಕರು ಸುಮಾರು ೧,೫೩೧ ಎಕರೆಯಷ್ಟು ಜಮೀನನ್ನು ಭೂ ಹೀನರಿಗೆ (ಬಡವರು, ನಿರ್ಗತಿಕರಿಗೆ) ಬಿಟ್ಟುಕೊಟ್ಟಿರುವುದು ಜಿಲ್ಲೆಯ ಜನರು ಸಾಮಾಜಿಕ ನ್ಯಾಯಕ್ಕಾಗಿ ಇರುವ ಕಳಕಳಿಯನ್ನು ನಿರೂಪಿಸಿದ್ದಾರೆ.

ಬ್ರಿಟಿಷರು ಬಳ್ಳಾರಿ ಜಿಲ್ಲೆಯನ್ನು ಸುಮಾರು ೧೪೭ ವರ್ಷಗಳ (ಕ್ರಿ.ಶ. ೧೮೦೦ ರಿಂದ ೧೯೪೭ರವರೆಗೆ) ಕಾಲ ಆಳಿದ ಕಾಲದಲ್ಲಿ ಜಿಲ್ಲೆಯ ಜನರು ಅನೇಕ ರೀತಿಯಲ್ಲಿ ಹೋರಾಟ ನಡೆಸಿದರು. ಈ ಜಿಲ್ಲೆಯು ಒಂದು ದ್ವಿಭಾಷಾ ಗಡಿಜಿಲ್ಲೆಯಾಗಿದ್ದರೂ, ಕನ್ನಡ ಮತ್ತು ತೆಲುಗು ಭಾಷಿಕರು ಪರಸ್ಪರ ಸಹಕಾರ ಮತ್ತು ಸೌಹಾರ್ದತೆಯಿಂದ ಬಾಳಿದ ಚರಿತ್ರೆ ಜಿಲ್ಲೆಗಿದೆ. ಭಾಷಾಂಧತೆಯನ್ನು ಮರೆತು ಅಖಂಡ ಬಳ್ಳಾರಿ ಜಿಲ್ಲೆಯು

ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ಸಂದರ್ಭ ಅವಿಸ್ಮರಣೀಯ ಹಾಗೂ ಅನುಕರಣೀಯವಾದುದು. ಹೀಗಾಗಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಚರಿತ್ರೆಯು ರಾಷ್ಟ್ರೀಯ ಭಾವೈಕ್ಯತೆ, ಭ್ರಾತೃತ್ವ, ಸಹಿಷ್ಣುತೆಯ ಸಂಕೇತವಾಗಿ ಗುರುತಿಸಲ್ಪಡುತ್ತದೆ. ಉದಾಹರಣೆಯಾಗಿ "ಸ್ವಾತಂತ್ರ್ಯ ನಂತರವೂ ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರಾದ ಬಿಂದುಮಾಧವ ಮಾಸ್ತರರು ಹಾಗೂ ವೆಂಕಟರಮಣಚಾರ ಇವರು ಬಳ್ಳಾರಿಯ 'ಗಾಂಧೀಭವನ'ವನ್ನು ನೋಡಿಕೊಂಡು ಹೋಗುತ್ತಿದ್ದಾರೆ. ಹಾಗೆಯೇ ಹೊಸಪೇಟೆಯ ಬೆಲ್ಲದ ಚೆನ್ನಪ್ಪನವರು ಸ್ವತಂತ್ರ ಹೋರಾಟದ ನಂತರವು ರೈತ ಹೋರಾಟವನ್ನು ಸಂಘಟಿಸಿದ್ದಾರೆ" (ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮, ಪು. ೧೨೪) ಎಂಬುದನ್ನು ಗಮನಿಸಬಹುದು.

ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ಸ್ವಾತಂತ್ರ್ಯಪೂರ್ವ ಅಂದರೆ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮತ್ತು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಈಗಲೂ ಜನತೆ ತಮ್ಮನ್ನು ಅನ್ಯಾಯ, ಅಕ್ರಮ, ಅಸಮಾನತೆ ವಿರುದ್ಧ ಹೋರಾಟದಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣಬಹುದು. ಇಂತಹ ಅನೇಕ ಉದಾಹರಣೆಗಳು ಇಂದಿಗೂ ಪ್ರಸ್ತುತವಾಗಿರುವುದನ್ನು ಗುರುತಿಸುವಲ್ಲಿ ಅಧ್ಯಯನಶೀಲರಿಗೆ, ಆಸಕ್ತರಿಗೆ ಉತ್ತಮ ಅವಕಾಶವಾಗಿದೆ.

## ೨. ಚುನಾವಣೆಗಳು : ರಾಜಕೀಯ ಪಕ್ಷಗಳು

೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ವರ್ಷವೇ ಬಳ್ಳಾರಿಯಲ್ಲಿ ಚುನಾವಣೆ ನಡೆದ ಒಂದು ಸ್ವಾರಸ್ಯಕರ ಘಟನೆ ಬಹುಮುಖ್ಯವಾದದ್ದು. ಆಗ ೧೯೪೭ರಲ್ಲಿ ನಡೆದ ಮೊದಲ ವಾರ್ಷಿಕ ಚುನಾವಣೆಗೆ ರಾಜ್ಯಾದ್ಯಂತ ಅಭ್ಯರ್ಥಿಗಳ ಆಯ್ಕೆ ನಡೆಯಿತು. ಎಲ್ಲಾ ಅಭ್ಯರ್ಥಿಗಳ ಆಯ್ಕೆಗೆ ಅವರು ಆಗ ತಾನೇ ಸಿಕ್ಕ ಸ್ವಾತಂತ್ರ್ಯ ಹೋರಾಟದಲ್ಲಿನ ಅವರ ಸೇವಾ ಪಾತ್ರವನ್ನು ಪರಿಗಣಿಸುವುದೇ ಮುಖ್ಯ ಮಾನದಂಡವಾಗಿತ್ತು. ಈ ಹಿನ್ನೆಲೆಯಲ್ಲಿ (ಕಾಂಗ್ರೆಸ್ ಪಕ್ಷ ಬಹಳ ವರ್ಷಗಳವರೆಗೆ ಭಾರತೀಯ ರಾಜಕಾರಣದಲ್ಲಿ ತನ್ನ ಛಾಪನ್ನು ಮೂಡಿಸಿಲು ಸಾಧ್ಯವಾಗಿದ್ದು ಈ ಹಿನ್ನೆಲೆಯಿಂದ) ಬಳ್ಳಾರಿ ವಿಧಾನಸಭೆಗೆ (ಆಗ ಮದ್ರಾಸ್ ಪ್ರೆಸಿಡೆನ್ಸಿಯ ವ್ಯಾಪ್ತಿಯಲ್ಲಿದ್ದು) ಕೊಟ್ಟೂರಿನ ಗೊರ್ಲೆ ರುದ್ರಮ್ಮನವರನ್ನು ಆಯ್ಕೆ ಮಾಡಲಾಗಿತ್ತು. ರುದ್ರಮ್ಮನವರು ಗೊರ್ಲೆ ಶರಣಪ್ಪನ ಹೆಂಡತಿ, ದಂಪತಿಗಳಿಬ್ಬರೂ ಗಾಂಧೀಜಿಯವರ ನಮ್ರ ಅನುಯಾಯಿಗಳು; ಶರಣಪ್ಪನವರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದು, ಆ ಸಂದರ್ಭದಲ್ಲಿ 'ಭಾರತೀಯ ವ್ಯಾಯಾಮಶಾಲೆ'ಯನ್ನು ಸ್ಥಾಪಿಸಿ ಯುವಕರನ್ನು ಚಳುವಳಿಗೆ ಪ್ರೇರಿಪಿಸುತ್ತಿದ್ದರು. ರುದ್ರಮ್ಮನವರು ಸಬರಮತಿ ಆಶ್ರಮದಲ್ಲಿ ಸೇವೆ ಮಾಡಿಕೊಂಡಿದ್ದ ಹಗರಿಬೊಮ್ಮನಹಳ್ಳಿ ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದ ವಿಧವೆ. ಇವರನ್ನು ಮದುವೆಯಾದ ಗೊರ್ಲೆಯರು ಗಾಂಧೀಜಿ ಮತ್ತು ವಿನೋಭಾ ಭಾವೆಯರ ಮೆಚ್ಚುಗೆಗೆ ಪಾತ್ರರಾಗಿದ್ದರು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಮಹಿಳೆಯರಿಗೆ ಪ್ರಾಧಾನ್ಯತೆ ನೀಡಬೇಕೆಂಬ ಉದ್ದೇಶದಿಂದ ಜಿಲ್ಲಾ ಕಾಂಗ್ರೆಸ್ ಮತ್ತು ರಾಜ್ಯ ಕಾಂಗ್ರೆಸ್ ಒಮ್ಮತದಿಂದ ರುದ್ರಮ್ಮನವರನ್ನು ಚುನಾವಣೆಗೆ Congress ಅಭ್ಯರ್ಥಿಯಾಗಿ ಆಯ್ಕೆ ಮಾಡಿದ್ದು ಔಚಿತ್ಯಪೂರ್ಣವಾಗಿತ್ತು.

ಆದರೆ ಒಳರಾಜಕಾರಣದಿಂದಾಗಿ ಕಾಂಗ್ರೆಸ್ ಅಭ್ಯರ್ಥಿ ಎಂದು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ಟಿ.ಬಿ.ಕೇಶವರಾವ್ ಅವರ ಧರ್ಮಪತ್ನಿ ಜಯಲಕ್ಷ್ಮಿಯವರನ್ನು ಕಣಕ್ಕೆ ಇಳಿಸಲಾಗಿತ್ತು. ಈ ಬದಲಾವಣೆ ಜಿಲ್ಲಾ ಕಾಂಗ್ರೆಸ್ ಮುಖಂಡರನ್ನು, ಜನರನ್ನು ದಿಗ್ಭ್ರಾಂತರನ್ನಾಗಿಸಿತ್ತು. ಇದೊಂದು 'ಬ್ರಾಹ್ಮಣ ರಾಜಕೀಯ' ಎಂದು ಮಹಾದೇವಪ್ಪ ಪಟ್ಟಣ ಅವರು ಕಿಡಿಕಾರಿದರು. ಕೂಡಲೇ ಕಾರ್ಯೋನ್ಮುಖರಾಗಿ ಪ್ರಬಲ ಕಾಂಗ್ರೆಸ್‌ಗೆ ಬಂಡಾಯ ಅಭ್ಯರ್ಥಿಯ ತಲಾಶೆ ನಡೆಸಿದರು. ಆಗ ಅವರಿಗೆ ದಾರಿ ತೋರಿದ್ದು ಒಂದೇ ಅದೇ ಗೋರ್ಲೆ ರುದ್ರಮ್ಮನವರನ್ನು ಕಾಂಗ್ರೆಸ್ ಪಕ್ಷದ ಬಂಡಾಯ ಅಭ್ಯರ್ಥಿಯಾಗಿ ಚುನಾವಣೆಗೆ ನಿಲ್ಲಿಸುವುದು. ಅವರೇ ಸೂಕ್ತ ಅಭ್ಯರ್ಥಿ ಎಂದು ತೀರ್ಮಾನಿಸಿದರು. ಈ ಬೆಳವಣಿಗೆಯಿಂದ ವಿಚಲಿತರಾದವರಂತೆ ಕಂಡ ಗೋರ್ಲೆ ರುದ್ರಮ್ಮನವರು ಕಾಂಗ್ರೆಸ್‌ನ ಜಯಲಕ್ಷ್ಮಿ ವಿರುದ್ಧ ನಿಲ್ಲಲು ಹಿಂಜರಿದರು. ಏಕೆಂದರೆ ಕಾಂಗ್ರೆಸ್ ಹಿನ್ನೆಲೆಯಿಂದಲೇ ತಮ್ಮ ಬದುಕನ್ನು ರೂಪಿಸಿಕೊಂಡ ತಾವು ಭಾವನಾತ್ಮಕವಾಗಿ ಗಾಂಧೀಯವರ ಪಕ್ಷದ ಋಣದಲ್ಲಿರುವದರಿಂದ ಕಾಂಗ್ರೆಸ್ ವಿರುದ್ಧ ನಿಲ್ಲಲಾರೆ ಎಂದು ವಿನಯಪೂರ್ವಕವಾಗಿಯೇ ನಿರಾಕರಿಸಿ ರಾಜಕೀಯದಿಂದ ದೂರ ಸರಿದರು.

ಈ ಸಂದರ್ಭ ಬಳ್ಳಾರಿ ಜನತೆಗೆ ಒಂದು ಸ್ವಾಭಿಮಾನದ ಪ್ರಶ್ನೆಯಾಗಿಯೇ ಕಾಡಿದಂತಿತ್ತು. ಆಗ ವೀರಶೈವ ವಿದ್ಯಾವರ್ಧಕ ಸಂಘದ ಪ್ರಮುಖರು ಹಾಗೂ ಅದರ ಆಧಾರ ಸ್ತಂಭಗಳೊಲ್ಲೊಬ್ಬರಾಗಿದ್ದ ತೊಗರಿ ವೀರಮಲ್ಲಪ್ಪನವರ ಧರ್ಮಪತ್ನಿ ತೊಗರಿ ಸರ್ವಮಂಗಳಮ್ಮನವರನ್ನು ಕೇಳಿಕೊಳ್ಳಲಾಯಿತು. ಆದರೆ ತೊಗರಿ ವೀರಮಲ್ಲಪನವರು ಇದಕ್ಕೆ ಸುತಾರಾಂ ಒಪ್ಪದೇ ನಿರಾಕರಿಸಿದರು. ಈಗ ಬಳ್ಳಾರಿಯ ನಾಯಕರುಗಳಿಗೆ ಆತಂಕದ ಹಾಗೂ ಸ್ವಾಭಿಮಾನದ ವಿಚಾರವೂ ಸೇರಿ ಅವರನ್ನು ಇನ್ನಷ್ಟು ಕಾರ್ಯಪ್ರವೃತ್ತರಾಗುವಂತೆ ಪ್ರೇರಣೆ ಮಾಡಿತ್ತು. ಉಳಿದದ್ದು ಒಂದೇ ದಾರಿ, ಒಂದೇ ಉದ್ದೇಶ ಅದು ಗೆಲ್ಲುವ ಕುದುರೆಗಾಗಿ ಹುಡುಕಾಟ. ಬಂಡಾಯ ಅಭ್ಯರ್ಥಿಯು ವ್ಯಕ್ತಿಯಾಗಿರದೇ ವ್ಯಕ್ತಿತ್ವವನ್ನು, ಉತ್ತಮ ನಡತೆ, ಜನರ ಆದರ ಅಭಿಮಾನಗಳಿಗೆ ಪಾತ್ರವಾದಂತಹವರು ಬೇಕಾಗಿತ್ತು. ಒಳ್ಳೆಯ ಸುಸಂಸ್ಕೃತ ಮನೆತನದ ಹಿನ್ನೆಲೆಯುಳ್ಳ ಮಹಿಳಾ ಅಭ್ಯರ್ಥಿಯೇ ಅಂದಿನ ಜರೂರು ಅಭಿಲಾಷೆಯಾಗಿತ್ತು. ಆಗ ಕಣ್ಣಿಗೆ ಬಿದ್ದದ್ದು ಗಡಿಗೆ ಚನ್ನಪ್ಪನವರ ಮನೆತನದ ಮಹಿಳೆ, ಅಲ್ಲಂ ಕರಿಬಸಪ್ಪನವರ ಧರ್ಮಪತ್ನಿ ಶ್ರೀಮತಿ ಅಲ್ಲಂ ಸುಮಂಗಳಮ್ಮನವರು. ಅಂದಿನ ಬಳ್ಳಾರಿ ಜನದ ಗೌರವಗಳಿಗೆ, ಹೆಮ್ಮೆಗೆ ಹೆಸರುವಾಸಿಯಾಗಿದ್ದ ಮನೆತನಗಳೆಂದರೆ ಗಡಿಗೆ ಹಾಗೂ ಅಲ್ಲಂ ಮನೆತನಗಳು. ಗಡಿಗೆ ಚನ್ನಪ್ಪನವರ ಮಗಳು ಹಾಗೂ ಅಲ್ಲಂ ಕರಿಬಸಪ್ಪನವರ ಪತ್ನಿ -ಹೀಗೆ ಎರಡು ಮನೆತನಗಳ ಕೊಂಡಿಯಾಗಿದ್ದ ಅಲ್ಲಂ ಸುಮಂಗಳಮ್ಮನವರ ಆಯ್ಕೆ ಜನತೆಗೆ ಒಂದು ಅಭಿಮಾನದ ಆಯ್ಕೆ ಎಂದೇ ಪರಿಗಣಿತವಾದಂತಿತ್ತು.

ಅಲ್ಲಂ ಸುಮಂಗಳಮ್ಮನವರ ರಾಜಕೀಯ ಪ್ರವೇಶ ಆಕಸ್ಮಿಕವೂ ಮತ್ತು ಅನಿರೀಕ್ಷಿತವೂ ಆಗಿತ್ತು. ಅಂತೂ ಕೊನೆಗೆ ಜನ ಸುಮಂಗಳಮ್ಮನವರನ್ನು ಪ್ರಚಂಡ ಬಹುಮತದಿಂದ ಗೆಲ್ಲಿಸಿ, ಪ್ರಥಮಬಾರಿಗೆ ಮದ್ರಾಸ್

ಅಸೆಂಬ್ಲಿಗೆ ಶಾಸಕಿಯಾಗಿ ಪ್ರವೇಶ ಪಡೆಯುವಂತೆ ಮಾಡಿದರು. ಈ ಗೆಲುವು ದೇಶದಾದ್ಯಂತ ಕಾಂಗ್ರೆಸ್ (ಗಾಂಧೀ-ನೆಹರು)ಗಾಳಿ ಇದ್ದಂತಹ ಸಂದರ್ಭದಲ್ಲಿ ಘಟಿಸಿದ್ದು ಎಲ್ಲ ನಾಯಕರನ್ನು ಹುಬ್ಬೇರಿಸುವಂತೆ ಮಾಡಿತ್ತು. ಅಷ್ಟೇ ಏಕೆ ಸ್ವತಃ ನೆಹರೂರವರೆ ತಮ್ಮ ಪಕ್ಷದ ಅಭ್ಯರ್ಥಿಯನ್ನು ಪರಾಭವಗೊಳಿಸಿದ ಮಹಿಳೆ ಯಾರೆಂದು ಕುತೂಹಲಭರಿತವಾಗಿ ಇವರನ್ನು ನೋಡಲು ಬಂದಿದ್ದರಂತೆ. ಇದು ಅಂದಿನ ರಾಜಕಾರಣವನ್ನು ಜನತೆ ಅರ್ಥೈಸಿ, ನೀಡಿದ ತೀರ್ಪು ಎನ್ನಬಹುದು. ಇದೇ ಪ್ರಜಾಪ್ರಭುತ್ವದ ಜೀವಂತಿಕೆಯೂ, ಕ್ರಿಯಾಶೀಲತೆಯೂ ಆಗಿರುತ್ತದೆ.

ಬಳ್ಳಾರಿ ಲೋಕಸಭೆಗೆ (ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ) ೧೯೫೨ರಲ್ಲಿ ನಡೆದ ಚುನಾವಣೆಯಲ್ಲಿ ಶ್ರೀ ಟಿ.ಸುಬ್ರಹ್ಮಣ್ಯಂ ಕಾಂಗ್ರೆಸ್ ಅಭ್ಯರ್ಥಿಯಾಗಿ ಆಯ್ಕೆಯಾದರು. ನಂತರದ ಎರಡನೇ ಲೋಕಸಭೆ (೧೯೫೭) ಹಾಗೂ ಮೂರನೇ ಲೋಕಸಭೆಗೂ (೧೯೬೨) ಶ್ರೀ.ಟಿ.ಸುಬ್ರಹ್ಮಣ್ಯಂ ಅವರನ್ನೇ ಸಂಸತ್ ಸದಸ್ಯರನ್ನಾಗಿ ಆರಿಸಿ ಕಳುಹಿಸಿದ್ದು ವಿಶೇಷವಾಗಿತ್ತು. ಆಗಿನ ರಾಷ್ಟ್ರೀಯ ಕಾಂಗ್ರೆಸ್‌ನ ಪ್ರಬಲವಾದ ಅಲೆ ಹಾಗೂ ನಾಯಕರುಗಳ ವರ್ಚಸ್ಸಿನಿಂದಾಗಿ ಜನತೆ ಮಾರು ಹೋಗಿದ್ದಿರಬಹುದು. ಅಥವಾ ಪ್ರಬಲ ಅಭ್ಯರ್ಥಿ, ಪ್ರಸಂಗ ಒದಗದೇ ಇದ್ದಿರಲೂಬಹುದು. ಅನಿವಾರ್ಯವಾಗಿ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುವುದರೊಂದಿಗೆ ಚುನಾವಣೆಗೆ ನಿಂತ ಅಭ್ಯರ್ಥಿಯನ್ನು ವಿಜಯಿಯಾಗಿಸಿ ಕಳಿಸುತ್ತಿದ್ದರು. ಇಲ್ಲಿ ಪಕ್ಷವೊಂದನ್ನೇ ಪರಿಗಣಿಸುವುದ ರೊಂದಿಗೆ ಚುನಾವಣಾ ಕಣಕ್ಕಿಳಿದ ಅಭ್ಯರ್ಥಿಯ ವ್ಯಕ್ತಿತ್ವ, ವರ್ಚಸ್ಸು ಪರಿಗಣಿಸಲ್ಪಡುತ್ತಿರಬೇಕು. ಇಲ್ಲಿ ಅಧಿಕಾರ ರಾಜಕಾರಣ ನಿರ್ಧರಿಸಲ್ಪಡುವುದು ಬಹು ಅಂಶಗಳ ಹಿನ್ನೆಲೆಯಲ್ಲಿ. ಲೋಕಸಭೆ ಚುನಾವಣೆಯಲ್ಲಿ ಕೆಲವೊಮ್ಮೆ ರಾಜಕೀಯ ಪಕ್ಷ ತನ್ನ ಪ್ರಭಾವವನ್ನು ಬೀರಿದ್ದಿದೆ. ಉದಾಹರಣೆಗೆ ೧೯೫೨ ರಿಂದ ೧೯೬೭ ರವರೆಗೆ ಕಾಂಗ್ರೆಸ್ ಭಾರಿ ವಿಜಯ ಸಾಧಿಸಿದೆ. ಆದರೆ ೧೯೭೧ರ ಲೋಕಸಭೆಗೆ ಹಿಂದಿನ ಅವಧಿಯಲ್ಲಿದ್ದ ಅಭ್ಯರ್ಥಿ, ಸಂಸತ್ ಸದಸ್ಯರಾದ ಡಾ. ವಿ.ಕೆ.ಆರ್.ವಿ.ರಾವ್ ಅವರು Indian National Congressನಿಂದ ಗೆಲುವು ಸಾಧಿಸಿದ್ದಾರೆ. ೧೯೭೭ರ ಚುನಾವಣೆಯಿಂದ ಈವರೆಗಿನ ೧೯೯೯ರವರೆಗೂ ಏಕೈಕ ಪಕ್ಷವಾಗಿ ಕಾಂಗ್ರೆಸ್ ಅದ್ಭುತ ಯಶಸ್ಸನ್ನು ಸಾಧಿಸಿದೆ. ಇಡೀ ದೇಶದ ಪಕ್ಷ ರಾಜಕೀಯ ನಕ್ಷೆಯಲ್ಲಿ ಕಾಂಗ್ರೆಸ್‌ನ ಭದ್ರಕೋಟೆಯೆಂದೇ ಗುರುತಿಸಲ್ಪಡುವ ಬಳ್ಳಾರಿ ಜಿಲ್ಲೆ ಅಂತರರಾಷ್ಟ್ರೀಯ ಗಮನವನ್ನು ಸೆಳೆದಿದೆ. ಅದರಲ್ಲೂ ಮುಖ್ಯವಾಗಿ ಮತ್ತು ವಿಶೇಷವಾಗಿ ಗಮನಿಸುವಂತಹದ್ದು, ಇಲ್ಲಿ ಮಹಿಳಾ ಅಭ್ಯರ್ಥಿಗಳು ಚುನಾವಣೆಗೆ ನಿಂತ ಸಂದರ್ಭಗಳನ್ನು, ಪ್ರಸಂಗಗಳನ್ನು. ಈಗಾಗಲೇ ಮೇಲೆ ಪ್ರಸ್ತಾಪಿಸಿದಂತೆ ಅತ್ಯಂತ ಕ್ಲಿಷ್ಟ ಸಂದರ್ಭದಲ್ಲಿ ಮಹಿಳಾ ಅಭ್ಯರ್ಥಿ ಅಲ್ಲಂ ಸುಮಂಗಳಮ್ಮನವರು ಕಾಂಗ್ರೆಸ್‌ನ ಬಂಡಾಯ ಅಭ್ಯರ್ಥಿಯಾಗಿ ನಿಂತು ಮದ್ರಾಸ್ ಶಾಸನಸಭೆಗೆ ಆಯ್ಕೆಯಾಗಿದ್ದು ಅವಿಸ್ಮರಣೀಯ. ಆದರೆ ಅವರೇ ಪುನ: ಕಾಂಗ್ರೆಸ್ ಪಕ್ಷದಿಂದ ೧೯೫೭ರಲ್ಲಿ ಬಳ್ಳಾರಿ ಜಿಲ್ಲೆಯ ಕುರುಗೋಡು ಕ್ಷೇತ್ರವನ್ನು ಪ್ರತಿನಿಧಿಸಿ, ರಾಜ್ಯ ವಿಧಾನಸಭೆಯ ಶಾಸಕಿಯಾಗಿ ಗೆಲುವು ಸಾಧಿಸಿದರು. ಈ ಗೆಲುವಿನ ಹಿನ್ನೆಲೆಯಲ್ಲಿ, ಅವರ ಪತಿ ಅಲ್ಲಂ ಕರಿಬಸಪ್ಪ ಕಾಂಗ್ರೆಸ್ ಪಕ್ಷದಿಂದ ಸತತ ಎರಡು ಬಾರಿ ೧೯೬೨ ಮತ್ತು ೧೯೬೭ರಲ್ಲಿ ಕುರುಗೋಡು ಕ್ಷೇತ್ರವನ್ನು ಪ್ರತಿನಿಧಿಸಿರುವುದು ರಾಜಕೀಯ ವಾಸ್ತವ ಸಂಗತಿ.

ಅಂತಹುದೇ ಒಂದು ಪ್ರಸಂಗ ೧೯೫೧ರ ಲೋಕಸಭಾ ಚುನಾವಣೆಯಲ್ಲಿ ಜರುಗಿತ್ತು. ರಾಷ್ಟ್ರಮಟ್ಟದ ರಾಜಕೀಯ ಪಕ್ಷಗಳ, ಉತ್ತಮ ಕೌಟುಂಬಿಕ ಹಿನ್ನೆಲೆ, ವರ್ಚಸ್ಸುಳ್ಳ ಮಹಿಳೆಯರು ಚುನಾವಣೆಗೆ ನಿಂತಿದ್ದು. ೧೯೯೯ರ ಬಳ್ಳಾರಿ ಲೋಕಸಭಾ ಚುನಾವಣೆಯಲ್ಲಿ ಇಬ್ಬರು ರಾಷ್ಟ್ರಮಟ್ಟದ ರಾಷ್ಟ್ರೀಯ ಪಕ್ಷಗಳ ಅಭ್ಯರ್ಥಿಗಳಾಗಿ ಶ್ರೀಮತಿ ಸೋನಿಯಾಗಾಂಧಿ ಹಾಗೂ ಶ್ರೀಮತಿ ಸುಷ್ಮಾಸ್ವರಾಜ್‌ರು (ಅನುಕ್ರಮವಾಗಿ ಕಾಂಗ್ರೆಸ್ (ಐ) ಮತ್ತು ಬಿಜೆಪಿ ಪಕ್ಷದಿಂದ ನಿಂತಿದ್ದರು) ಚುನಾವಣಾ ಪ್ರಚಾರದಲ್ಲಿ ನಡೆಸಿದ ಅಬ್ಬರದ ಭರಾಟೆ ಈ ಜಿಲ್ಲೆಯ ರಾಜಕಾರಣದ ಚರಿತ್ರೆಯಲ್ಲಿ ದಾಖಲಾಗುವಂತಹದ್ದು. ಜನರ ಮತಗಳನ್ನು ಸೆಳೆಯಲು ಹೂಡಿದ ವರಸೆಗಳು, ತಂತ್ರಗಳು ಮತದಾರರಿಗೆ ಆಕರ್ಷಣೀಯವಾಗಿ, ರಂಜನೆಯಾಗಿ ಕಾಣುತ್ತಿದ್ದವು. ಅವರ ಚುನಾವಣಾ ಪ್ರಣಾಳಿಕೆ ಬಿಡುಗಡೆಗೊಂಡಿದ್ದನ್ನು ವಿಶೇಷವಾಗಿ ಗಮನಿಸುವಂತಹದ್ದು. ಶ್ರೀಮತಿ ಸುಷ್ಮಾಸ್ವರಾಜ್‌ರು ತಮ್ಮ ಚುನಾವಣಾ ಭಾಷಣವನ್ನು ಕನ್ನಡದಲ್ಲಿ ಶುರುಮಾಡಿ, ಮತದಾರರ ಮನೆಮನೆಗೆ ತೆರಳಿ, ದೆಹಲಿಯಿಂದ ಇಲ್ಲಿಗೆ ಬಂದ ಮನೆ ಮಗಳನ್ನು ಆರಿಸಿ ಗೆಲ್ಲಿಸುವುದು ನಿಮ್ಮ ಕೈಯಲ್ಲಿದೆ ಎಂದರು. ಅರಿಸಿನ ಕುಂಕುಮದ ಆದರ್ಶ ನಾರಿಯಾಗಿ ಬಿಜೆಪಿ ಸುಷ್ಮಾರನ್ನು ಜನಮತಗಳಿಸಲು ನಿಲ್ಲಿಸಿತ್ತು. ಇದಕ್ಕೆ ಪ್ರತಿಯಾಗಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷೆ ಶ್ರೀಮತಿ ಸೋನಿಯಾಗಾಂಧಿ ತಾನು ಈ ಜಿಲ್ಲೆಯ ಸೊಸೆ ಎಂತಲೂ, ನಿಜವಾದ ವಾರಸುದಾರಳು ತಾನು ಎಂಬ ಬಿರುಸಿನ ಚುನಾವಣಾ ಪ್ರಚಾರ ಮತದಾರರನ್ನು ತೀವ್ರ ಪರೀಕ್ಷೆಗೆ ಗುರಿಮಾಡಿದಂತಿತ್ತು. ಕೆಲವರ ಅಭಿಪ್ರಾಯದಂತೆ ಹಿಂದೆ ಅಲ್ಲಂ ಸುಮಂಗಳಮ್ಮನವರು ಕಾಂಗ್ರೆಸ್‌ನ ಬಂಡಾಯ ಅಭ್ಯರ್ಥಿಯಾಗಿ ಗೆದ್ದಂತೆ ಈಗಲೂ ಹಾಗೇ ಆಗಬಹುದೆಂದು ಭಾವಿಸಿದ್ದರು. ಆದರೆ ಅಂದಿನ ಸಂದರ್ಭ, ಪರಿಸ್ಥಿತಿಯೇ ಬೇರೆ. ಈಗಿನ ವಾತಾವರಣವೇ ಬೇರೆ. ಅಂದಿನ ರಾಜಕೀಯ ಪಲ್ಲಟ, ಒಳರಾಜಕಾರಣದ ಪಿತೂರಿಯಾಗಿತ್ತು. ಸ್ವಾತಂತ್ರ್ಯ ಬಂದ ಆರಂಭದ ದಿನಗಳಲ್ಲಿಯೂ ಬಳ್ಳಾರಿ ಜಿಲ್ಲೆ ಜಾತಿ ರಾಜಕಾರಣದಿಂದ ಹೊರತಾಗಿರಲಿಲ್ಲ. ಅದು ಸುಪ್ತವಾಗಿಯೇ ಇತ್ತು. ಸಾರ್ವಜನಿಕ ರಂಗದ ಬಹುತೇಕ ಕ್ಷೇತ್ರಗಳಲ್ಲಿ ಅಂದು ಬ್ರಾಹ್ಮಣರೇ ಮುಂದಾಳತ್ವ ವಹಿಸಿದ್ದರು ಮತ್ತು ಮುಂದುವರೆದಿದ್ದರು. ಆಗತಾನೇ ವೀರಶೈವ ಲಿಂಗಾಯತರನ್ನು ಒಂದೆಡೆ ಸೇರಿಸಿ, ಶಿಕ್ಷಣ ಸಂಸ್ಥೆಯೊಂದನ್ನು ಪ್ರಾರಂಭಿಸಲಾಗಿತ್ತು. ಅದು ಇಂದಿನ ವೀರಶೈವ ವಿದ್ಯಾವರ್ಧಕ ಸಂಘವೇ ಆಗಿತ್ತು. ಅಲ್ಲಂ ಸುಮಂಗಳಮ್ಮನವರನ್ನು ಕಾಂಗ್ರೆಸ್ ಅಭ್ಯರ್ಥಿಯೆಂದು ಘೋಷಿಸಿದ್ದರೂ, ನಂತರ ಟಿ.ಬಿ.ಕೇಶವರಾವ್ ಅವರ ಧರ್ಮಪತ್ನಿ ಜಯಲಕ್ಷ್ಮಿಯವರಿಗೆ ಕಾಂಗ್ರೆಸ್ ಟಿಕೇಟ್ ನೀಡಿ ನಿಲ್ಲಿಸಿದ್ದುದು ಎಲ್ಲರನ್ನು ರೊಚ್ಚಿಗೆಬ್ಬಿಸಿತ್ತು, ವಿಶ್ವಾಸದ್ರೋಹದ ಕೃತ್ಯವೆಂದೆನಿಸಿತ್ತು. ಅದರಲ್ಲೂ ವಿಶೇಷವಾಗಿ ಒದಗಿದ ಅವಕಾಶ ಕೈ ತಪ್ಪಿದ್ದಕ್ಕೆ ಅಧಿಕಾರವಂಚಿತರಾದವೆಂಬ ಆತಂಕವಿತ್ತು. ಹೀಗಾಗಿ ಅಂದಿನ ಸಂದರ್ಭ, ಪರಿಸ್ಥಿತಿಗಳು ರಾಷ್ಟ್ರೀಯ ಕಾಂಗ್ರೆಸ್‌ಗೆ ಬಂಡಾಯವಾಗಿ ಮಹಿಳಾ ಅಭ್ಯರ್ಥಿಯನ್ನು ನಿಲ್ಲಿಸಿ ಗೆಲ್ಲುವ ಪ್ರಸಂಗ ನಿರ್ಮಾಣವಾಗಿತ್ತು.

ಇತ್ತೀಚಿನ ೧೯೯೯ರ ಲೋಕಸಭಾ ಚುನಾವಣೆ ಎರಡು ಪ್ರಮುಖ ರಾಷ್ಟ್ರೀಯ ಪಕ್ಷಗಳ ನಡುವೆ ಇದ್ದರೂ, ಅದು ಕೋಮುವಾದಿ ಪಕ್ಷ ಮತ್ತು ಜಾತ್ಯಾತೀತ ಪಕ್ಷಗಳ ನಡುವಿನ ಸೆಣಸಾಟ ಎಂದು ರಾಜಕೀಯ ಪಕ್ಷಗಳ ನೇತಾರರು, ನಾಯಕರು ಕೆಲವು ಪಕ್ಷದ ಕಾರ್ಯಕರ್ತರು ಭಾಷಣಗಳನ್ನೇ ಮಾಡಿದ್ದುಂಟು.

ಅದೇನಿದ್ದರೂ, ಈ ಸಂದರ್ಭ ಬಳ್ಳಾರಿ ಜಿಲ್ಲಾ ರಾಜಕಾರಣದ ಮಟ್ಟಿಗೆ ಅಪರೂಪವಾದದ್ದು, ಆಸಕ್ತಿ ಹುಟ್ಟಿಸುವಂತಹದ್ದು. ಕೊನೆಗೆ ಕಾಂಗ್ರೆಸ್ (ಐ) ಪಕ್ಷ ಭಾರೀ ವಿಜಯಿ ಪಕ್ಷವಾಗಿ, ಶ್ರೀಮತಿ ಸೋನಿಯಾಗಾಂಧಿ ಸಂಸತ್ ಸದಸ್ಯೆಯಾಗಿ ಆಯ್ಕೆಯಾದರು. ದಲಿತರ, ಹಿಂದುಳಿದವರ, ಅಲ್ಪ ಸಂಖ್ಯಾತರ, ಮಹಿಳೆಯರ, ಗ್ರಾಮೀಣ ಜನತೆಯ ಪಕ್ಷವೆಂದೇ ಹೆಸರುಗಳಿಸಿದ, ಹಾಗೇ ಬ್ರಾಂಡ್ ಆದ ಕಾಂಗ್ರೆಸ್ ಪಕ್ಷ ಜಯಸಾಧಿಸಿತು. ಭಾರತೀಯ ಜನತಾಪಕ್ಷವನ್ನು ಕೋಮುವಾದಿ ಪಕ್ಷ ಮುಂದುವರೆದ ಜಾತಿಗಳ ಪಕ್ಷ ಎಂಬ ಗುಮಾನಿಯೊಂದಿಗೆ ಜನತೆ ನಿರಾಕರಿಸಿತ್ತು. ಆದರೆ ಈಗ ಬಿಜೆಪಿಯು ತನ್ನ ಕಾರ್ಯಸೂಚಿಯಲ್ಲಿ, ಚುನಾವಣೆ ಪ್ರಣಾಳಿಕೆಯಲ್ಲಿ ಇಂತಹ ಅಪವಾದಗಳಿಗೆ ತೆರೆಯೆಳೆಯಲು ಪ್ರಯತ್ನಿಸುತ್ತಿದೆ. ತನ್ನ ನಿಲವುಗಳನ್ನು ಸಹ ಸಡಿಲಿಸಿದ್ದು, ರಾಜೀ ಮನೋಭಾವವನ್ನು ಹೊಂದಿದೆ. ಇದಕ್ಕೆ ಉತ್ತಮ ಉದಾಹರಣೆ ಇತ್ತೀಚೆಗಷ್ಟೇ ಉತ್ತರ ಪ್ರದೇಶದಲ್ಲಿ ಬಿಎಸ್‌ಪಿ ಪಕ್ಷದೊಂದಿಗೆ ಮೈತ್ರಿಕೂಟ ರಚಿಸಿ ಮುಖ್ಯಮಂತ್ರಿ ಶ್ರೀಮತಿ ಮಾಯಾವತಿ ನೇತೃತ್ವದ ಸರಕಾರಕ್ಕೆ ತನ್ನ ಬೆಂಬಲ ನೀಡಿರುವುದನ್ನು ಗಮನಿಸಬಹುದು.

## ೩. ಸಂಸತ್ತಿನ ಸ್ವರೂಪ ಮತ್ತು ಮಹತ್ವ

ಭಾರತವು ಆಗಸ್ಟ್ ೧೫, ೧೯೪೭ರಂದು ಒಂದು ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಯಿತು. ಅಂದೇ ಬ್ರಿಟಿಷ್ ಚಕ್ರಾಧಿಪತ್ಯ ಅಥವಾ ಸಾಮ್ರಾಜ್ಯಶಾಹಿ ಪ್ರಭುತ್ವ ಕೊನೆಗೊಂಡಿತು. ಸ್ವತಂತ್ರ ರಾಷ್ಟ್ರವಾದ ಭಾರತ ತನ್ನದೇ ಆದ ಸಂವಿಧಾನವನ್ನು ರಚಿಸಿಕೊಳ್ಳಬೇಕಿತ್ತು. ಈ ಹಿನ್ನೆಲೆಯಲ್ಲಿ ಅದಾಗಲೇ ಡಾ. ರಾಜೇಂದ್ರ ಪ್ರಸಾದ್ ಅವರ ಅಧ್ಯಕ್ಷತೆಯಲ್ಲಿ ಡಿಸೆಂಬರ್ ೧೧, ೧೯೪೬ರಂದು ಸಂವಿಧಾನ ರಚನಾ ಸಭೆಯು ಈ ದೇಶಕ್ಕೆ ಬೇಕಾದ ಕಾನೂನುಗಳ ರಚನೆಗೆ ತೊಡಗಿತು. ಇದು ಸಾಮಾನ್ಯವಾಗಿ ಪ್ರಾಂತ್ಯಗಳ ಶಾಸನಸಭೆಗಳ ಸದಸ್ಯರಿಂದ ಆಯ್ಕೆಯಾದವರನ್ನು ಒಳಗೊಂಡಿತ್ತು. ಈ ಸಂವಿಧಾನ ರಚನಾ ಸಭೆಯು ಶ್ರೀ ಸಿ.ರಾಜಗೋಪಾಲಾಚಾರಿ, ಡಾ. ರಾಜೇಂದ್ರ ಪ್ರಸಾದ್, ಸರದಾರ್ ವಲ್ಲಭಬಾಯಿ ಪಟೇಲ್, ಪಂಡಿತ ಜವಾಹರಲಾಲ್ ನೆಹರೂ, ಪ್ರೊ. ಕೆ.ಟಿ.ಶಹಾ, ಆಚಾರ್ಯ ಕೃಪಾಲನಿ, ಕೆ.ಎಂ.ಮುನ್ಷಿ, ಅಬ್ದುಲ್ ಕಲಾಮ ಅಜಾದ್, ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್, ಬಿ.ಎನ್.ರಾವ್, ಟಿ.ಟಿ.ಕೃಷ್ಣಮಾಚಾರಿ ಇತ್ಯಾದಿ ಮಹಾ ಮೇಧಾವಿಗಳ, ಸಂವಿಧಾನ ತಜ್ಞರನ್ನೊಳಗೊಂಡಿತ್ತು. ಅನೇಕರು ಸಂವಿಧಾನ ರಚನ ಸಮಿತಿಯ ಉಪಸಮಿತಿಗಳ ಅಧ್ಯಕ್ಷತೆಯನ್ನು ವಹಿಸಿ ಬಹು ಶ್ರದ್ಧೆಯಿಂದ ತಮ್ಮ ಕೆಲಸವನ್ನು ನಿರ್ವಹಿಸಿದ್ದರು. ಅವರುಗಳೆಂದರೆ, ಸಮಿತಿಗಳಲ್ಲಿಯೇ ಅತ್ಯಂತ ವಿಶೇಷವಾದ ಮತ್ತು ಮಹತ್ವದ ಸಮಿತಿಯಾಗಿದ್ದು ಕರಡು ಸಮಿತಿಯ ಅಧ್ಯಕ್ಷತೆ ವಹಿಸಿದ್ದ ಡಾ. ಬಿ.ಆರ್. ಅಂಬೇಡ್ಕರ್ ಒಬ್ಬ ನುರಿತ ಅನುಭವಿ ಸಂವಿಧಾನ ತಜ್ಞರು, ಕಾನೂನು ಪಂಡಿತರು ಹಾಗೂ ಮಹಾ ಮಾನವತಾವಾದಿ, ಸಾಮಾಜಿಕ ಕ್ರಾಂತಿಕಾರರು. ಹಾಗೆಯೇ ಮಹಾಮೇಧಾವಿಗಳಾಗಿದ್ದ ಸರದಾರ್ ಪಟೇಲ್, ಕೆ.ಎಂ.ಮುನ್ಷಿ, ಜವಾಹರ್‌ಲಾಲ್ ನೆಹರು ಅವರು ವಿವಿಧ ಸಮಿತಿಗಳ ಅಧ್ಯಕ್ಷತೆಯನ್ನು ವಹಿಸಿದ್ದರು.

ಈ ಮೇಲೆ ತಿಳಿಸಿದ ಸಂವಿಧಾನ ರಚನಾ ಸಭೆಯ ಸದಸ್ಯರಲ್ಲದೆ, ಸಂವಿಧಾನ ರಚನೆಯ ಪ್ರಕ್ರಿಯೆಯಲ್ಲಿ ಪಾತ್ರವಹಿಸಲು ೧೫ ಮಂದಿ ಮಹಿಳಾ ಸದಸ್ಯರು Constituent Asembly ಗೆ ಆಯ್ಕೆಯಾಗಿ ತಮ್ಮ ಕೊಡುಗೆ ನೀಡಿದ್ದು ಪ್ರಶಂಸನೀಯವಾದದ್ದು. ಮಹಿಳಾ ಸದಸ್ಯರುಗಳಾದ ಶ್ರೀಮತಿ ವಿಜಯಲಕ್ಷ್ಮೀ ಪಂಡಿತ್, ಶ್ರೀಮತಿ ಸುಚೇತ ಕೃಪಾಲನಿ, ಶ್ರೀಮತಿ ಸರೋಜಿನಿ ನಾಯುಡು, ಶ್ರೀಮತಿ ಹಂಸ ಮೆಹತಾ, ಶ್ರೀಮತಿ ರಾಜಕುಮಾರಿ ಅಮೃತಕೌರ್ ಮುಂತಾದವರು ಮುಖ್ಯರಾಗಿದ್ದರು. ಆಗಸ್ಟ್ ೨೯, ೧೯೪೭ರಲ್ಲಿ ಸಂವಿಧಾನದ ಕರಡು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ಫೆಬ್ರವರಿ, ೧೯೪೮ರಲ್ಲಿ ಅಂತಿಮ ಕರಡು ಸಂವಿಧಾನವನ್ನು ಸಿದ್ಧಪಡಿಸಿತು. ಸಂವಿಧಾನವನ್ನು ರಚಿಸಲು ಸಂವಿಧಾನ ರಚನಾ ಸಭೆಯು ಹಂಗಾಮಿ ಸಂಸತ್ತಿನಂತೆ ಒಂದು ಮಸೂದೆಯನ್ನು ಕಾಯ್ದೆಯನ್ನಾಗಿ ಮಾಡುವ ವಿಧಾನವನ್ನು ಅನುಸರಿಸಿತು. ಅದರಂತೆ ಮೂರು ವಾಚನಗಳನ್ನು ಮಾಡಿತು. ಅಂತಿಮ ವಾಚನದ ಮೂಲಕ (ಅಂದರೆ ೩ನೇ Reading) ಸಂವಿಧಾನದ ಕರಡು ರಚನಾ ಸಭೆಯ ಅಧ್ಯಕ್ಷರಿಂದ ಒಪ್ಪಿಗೆ ಪಡೆದು ನವೆಂಬರ್ ೨೬, ೧೯೪೯ರಂದು 'ಸಂವಿಧಾನ'ವೆಂದು ಅಂಗೀಕರಿಸಿತು. ೨೪ನೇ ಜನವರಿ, ೧೯೫೦ರಂದು ಸಂವಿಧಾನ ರಚನಾಸಭೆಯು ತನ್ನ ಅಂತಿಮ ಅಧಿವೇಶನದಲ್ಲಿ ಡಾ.ರಾಜೇಂದ್ರಪ್ರಸಾದ್ ರನ್ನು ಭಾರತ ಗಣರಾಜ್ಯದ ಪ್ರಥಮ ರಾಷ್ಟ್ರಪತಿಗಳೆಂದು ಸರ್ವಾನುಮತದಿಂದ ಆಯ್ಕೆ ಮಾಡಿತು.

ಸಂವಿಧಾನ ರಚನಾಸಭೆಯು ಸಂವಿಧಾನವನ್ನು ರಚಿಸಲು ಸುಮಾರು ೩ ವರ್ಷಗಳ ಕಾಲ ತೆಗೆದುಕೊಂಡಿತ್ತು. (೨ ವರ್ಷ, ೧೧ ತಿಂಗಳು ಮತ್ತು ೧೮ ದಿನಗಳು). ಭಾರತ ಸಂವಿಧಾನವು ಜನವರಿ ೨೬, ೧೯೫೦ ರಂದು ಜಾರಿಗೆ ಬಂದು, ನಮ್ಮ ರಾಷ್ಟ್ರ ರಾಜಕೀಯ ವ್ಯವಸ್ಥೆ ಕ್ರಿಯಾಶೀಲವಾಗಿದೆ. ಕಾರ್ಯೋನ್ಮುಖವಾಗಿದೆ. ಈ ದಿನ ೨೬ನೇ ಜನವರಿ ಭಾರತದ ಚರಿತ್ರೆಯ ಅತ್ಯಂತ ಮಹತ್ವದ್ದು, ಏಕೆಂದರೆ ಅದೇ ದಿನವೇ ಅಂದರೆ ೧೯೩೦ ರಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಸಾರಿದ್ದೂ ಕಾಂಗ್ರೆಸ್ ಲಾಹೋರ್ ಅಧಿವೇಶನದಲ್ಲಿ "ಪೂರ್ಣ ಸ್ವರಾಜ್ " ಹೊಂದುವ ಠರಾವು ಅಂಗೀಕರಿಸಿದ್ದು.

ಹೀಗೆ ಸುದೀರ್ಘ ಹೋರಾಟದ ಹಾಗೂ ಸತತ ಪರಿಶ್ರಮದ ಫಲವಾಗಿ ಇಂದು ಸ್ವತಂತ್ರ ಭಾರತವು ತನ್ನದೇ ಸಂವಿಧಾನ, ಲಾಂಛನ, ಭೌಗೋಳಿಕ ವ್ಯಾಪ್ತಿ, ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳನ್ನು ಹೊಂದಿದೆ. ವಿಶ್ವದಲ್ಲಿಯೇ ಎರಡನೇ ಅತಿದೊಡ್ಡ ಪ್ರಜಾಪ್ರಭುತ್ವ ಎಂಬ ಹೆಗ್ಗಳಿಕೆಗೂ ಸಂಸದೀಯ ಮಾದರಿಯ ಸರಕಾರ ವ್ಯವಸ್ಥೆಯನ್ನು ಅಳವಡಿಸಿಕೊಂಡು ಪ್ರಜಾ ಸರಕಾರವಾಗಿ ಹೆಸರುವಾಸಿಯಾಗಿದೆ. ಇಂತಹ ಸಂವಿಧಾನವನ್ನು ಹೊಂದಿದ ಭಾರತದಲ್ಲಿರುವ ಪ್ರತಿಯೊಬ್ಬ ನಾಗರಿಕನು ಅದರ ಮೂಲ ಆಶಯ, ಆದರ್ಶ, ತತ್ವಗಳನ್ನು ಅರಿತುಕೊಳ್ಳುವುದು ಅತ್ಯಗತ್ಯ. ನಮ್ಮ ಸಂವಿಧಾನವು ಲಿಖಿತವಾಗಿದ್ದು, ಅದರ ಪ್ರಸ್ತಾವನೆಯ ಪೂರ್ಣಪಾಠ ಹೀಗಿದೆ (೪೨ನೆಯ ಸಂವಿಧಾನ ತಿದ್ದುಪಡಿಯ (೧೯೭೬) ಮೂಲಕ ಹೊಸದಾಗಿ ಸೇರ್ಪಡೆಯಾದಂತೆ)

We, the people of India having solemnly resolved to constitute India into Sovereign, Socialist, Secular, Democratic, Republic and to secure to all its citizens,

| | | |
|---|---|---|
| Justice | : | Social, Economic and Political |
| Liberty | : | of thought , expression, faith belief and worship. |
| Equality | : | of status and opportunity and to promote among them all. |
| Fraternity | : | Assuring the dignity of individual and the unity and integrity of nation. |

In our constituent Assembly this 26th Day of November 1949 do hereby adopt Enact and give to ourselves this constitution. ಇದರ ಕನ್ನಡ ಅನುವಾದ ಪಾಠ ಹೀಗಿದೆ :

'ಭಾರತೀಯ ಪ್ರಜೆಗಳಾದ ನಾವು ಸರ್ವತಂತ್ರ ಸ್ವತಂತ್ರ ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಪ್ರಜಾಸತ್ತಾತ್ಮಕ ಗಣರಾಜ್ಯವನ್ನಾಗಿ ರಚಿಸಲು ಮತ್ತು ಅದರ ಎಲ್ಲ ಪೌರರಿಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ವಿಚಾರ, ಅಭಿವ್ಯಕ್ತಿ ನಂಬಿಕೆ, ಧರ್ಮ ಮತ್ತು ಉಪಾಸನಾ ಸ್ವಾತಂತ್ರ್ಯ, ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆ, ಎಲ್ಲರಿಗೂ ದೊರೆಯಲು ಅವಕಾಶವಾಗುವಂತೆ ವ್ಯಕ್ತಿಗೌರವ ಮತ್ತು ರಾಷ್ಟ್ರದ ಏಕತೆ ಮತ್ತು ಸಮಗ್ರತೆಯನ್ನು ರಕ್ಷಿಸಿ ಭ್ರಾತೃತ್ವವನ್ನು ಎಲ್ಲರಲ್ಲೂ ವೃದ್ಧಿಗೊಳಿಸುವುದಕ್ಕಾಗಿ ದೃಢ ಸಂಕಲ್ಪ ಮಾಡಿ, ನಮ್ಮ ಸಂವಿಧಾನ ರಚನಾ ಸಭೆಯಲ್ಲಿ ನವೆಂಬರ್ ೨೬, ೧೯೪೯ ರಂದು ಈ ಸಂವಿಧಾನವನ್ನು ಅಂಗೀಕರಿಸಿ ಕಾನೂನು ರೂಪದಲ್ಲಿ ಆತ್ಮಾರ್ಪಿತ ಮಾಡಿಕೊಂಡಿದ್ದೇವೆ.'

ಭಾರತ ಸಂವಿಧಾನವನ್ನು ವಿಶ್ವದ ಅತಿದೊಡ್ಡ ಗಾತ್ರದ, ಬಹು ಕಲುಮುಗಳುಳ್ಳ (೩೯೫ Articles, ೮ Schedules, ೨೨ Chapters) ಬೃಹತ್ ಸಂವಿಧಾನ ಎಂದು ಕರೆಯುತ್ತಾರೆ. ಸಂವಿಧಾನದ ಪ್ರಸ್ತಾವನೆಯಲ್ಲಿ ಹೇಳಿರುವಂತೆ, ಭಾರತವು ಪ್ರಜಾಪ್ರಭುತ್ವ ರಾಷ್ಟ್ರವಾಗಿದ್ದು, ನಾಗರಿಕರೆಲ್ಲರಿಗೂ ಸಮಾನ ಹಕ್ಕು - ಬಾಧ್ಯತೆಗಳನ್ನು (Rights- Duties) ಕೊಡಮಾಡಲಾಗಿದೆ. ಯಾವುದೇ ಲಿಂಗ ತಾರತಮ್ಯ, ಜಾತಿ, ಭಾಷೆ, ಧರ್ಮ, ಪ್ರಾದೇಶಿಕತೆ, ಸಂಸ್ಕೃತಿ ಹಿನ್ನೆಲೆಗಳಲ್ಲಿ ಭೇದಗಳನ್ನು ಎಣಿಸುವಂತಿಲ್ಲ. ಇದರೊಂದಿಗೆ ರಾಜ್ಯ ನಿರ್ದೇಶಕ ತತ್ವಗಳನ್ನು (Directive Principles of State Policy) ಅಳವಡಿಸಿ ರಾಷ್ಟ್ರ ರಾಜಕಾರಣದ ಸ್ವೇಚ್ಛಾಚಾರ ಆಡಳಿತಕ್ಕೆ ಮೂಗುದಾರ ಹಾಕಿದೆ. ನಾಗರಿಕ ಹಕ್ಕುಗಳನ್ನು ರಕ್ಷಿಸುವುದರ ಜೊತೆಗೆ ಸಮಾಜದ ಸ್ವಾಸ್ಥ್ಯವನ್ನು, ದೇಶದ ಐಕ್ಯತೆಯನ್ನು ಕಾಪಾಡುವಲ್ಲಿ ಈ ರಾಜ್ಯ ನಿರ್ದೇಶಕ ತತ್ವಗಳು ಪ್ರಮುಖ ಪಾತ್ರ ವಹಿಸಬಲ್ಲವು. ಭಾರತ ಸಂವಿಧಾನವು ಹಲವು ದೇಶಗಳ ಸಂವಿಧಾನದ ತುಣುಕುಗಳ ಜೋಡಣೆ ಹಾಗೂ ತೇಪೆ ಹಾಕಿದ ಕಾಗದ ಎಂಬ ಟೀಕೆಯೂ ಇದೆ. ಅದೇನಿದ್ದರೂ ನಮ್ಮ ಸಂವಿದಾನ ಪಿತಾಮಹರು ಈ ದೇಶಕ್ಕೆ ಬೇಕಾದ ಕಾನೂನುಗಳನ್ನು, ಆದರ್ಶಗಳನ್ನು ವಿವಿಧ ದೇಶಗಳಿಂದ ಎರವಲು ಪಡೆದುಕೊಂಡಿದ್ದಾರೆ ಎಂದ ಮಾತ್ರಕ್ಕೆ ತಪ್ಪಾಗಿ ಭಾವಿಸಬೇಕಾದ್ದು ಏನೂ ಇಲ್ಲ. ಏಕೆಂದರೆ ಒಳ್ಳೆಯದನ್ನು ಅಳವಡಿಸಿಕೊಳ್ಳುವುದರಲ್ಲಿ ಅಥವಾ ಅನುಕರಿಸುವುದರಲ್ಲಿ ಯಾವ

ಲೋಪವೂ ಕಾಣದು. ಉದಾಹರಣೆಗೆ ನಮ್ಮ ಸಂವಿಧಾನದಲ್ಲಿರುವ ಮೂಲಭೂತ ಹಕ್ಕುಗಳನ್ನು (Fundamantal Rights) ಅಮೇರಿಕಾದಿಂದಲೂ, ರಾಜ್ಯ ನಿರ್ದೇಶಕ ತತ್ವಗಳನ್ನು ಐರ್ಲೆಂಡ್ ಮತ್ತು ಜಪಾನ್‌ನಿಂದಲೂ, ಸಂಸದೀಯ ಪದ್ಧತಿ ಸರಕಾರವನ್ನು ಬ್ರಿಟನ್‌ನಿಂದಲೂ ಪಡೆದುಕೊಂಡಿರುವದು ಯೋಗ್ಯವಾಗಿಯೇ ಕಂಡುಬಂದಿದೆ.

ಸಂಸದೀಯ ಪದ್ಧತಿಯನ್ನು ಒಪ್ಪಿಕೊಂಡ ಭಾರತವು ಇದನ್ನು ಬ್ರಿಟನ್‌ನಿಂದ ಪಡೆದುಕೊಂಡಿರುವುದು ಸಹಜವಾಗಿಯೇ ಇದೆ. ವಿಶ್ವದ ಅನೇಕ ರಾಷ್ಟ್ರಗಳು ಬಹುವಾಗಿ ಇದನ್ನೇ ಅಳವಡಿಸಿಕೊಂಡಿವೆ. ಕಾಲಾನುಕ್ರಮದಲ್ಲಿ ಸಂಸದೀಯ ವ್ಯವಸ್ಥೆಯಲ್ಲಿ ಸಾಕಷ್ಟು ಪರಿವರ್ತನೆಗಳು, ಬದಲಾವಣೆಗಳು, ಅನೇಕ ಸುಧಾರಣೆಗಳನ್ನು ಕಾಣಲಾಗಿದೆ. ಬ್ರಿಟನ್ ಸಂಸತ್ತನ್ನು ಎಲ್ಲ ಸಂಸದೀಯ ವ್ಯವಸ್ಥೆಯ ರಾಷ್ಟ್ರಗಳ ಮಾತೃಸಂಸ್ಥೆ ಎಂದು ಕರೆಯಲಾಗುತ್ತಿದೆ. ಆದರೆ ಈ ಉಕ್ತಿ ಇಂದು ಒಪ್ಪಲೇಬೇಕಾದದ್ದಲ್ಲ. ಏಕೆಂದರೆ ಸಂಸದೀಯ ಸರಕಾರದಲ್ಲಿ ಪ್ರಜೆಗಳು ರಹಸ್ಯ ಮತದಾನದ ಮೂಲಕ ಪ್ರತಿನಿಧಿಗಳನ್ನು (ತಮ್ಮ ಆಶೋತ್ತರಗಳ ಈಡೇರಿಸುವ ಪ್ರತಿನಿಧಿಯಾಗಿ) ಆರಿಸಿ ದೇಶದ ಕಾನೂನು ರಚಿಸುವ ನಿಯಮಗಳನ್ನು ರೂಪಿಸುವ ಹೊಣೆಗಾರಿಕೆಯನ್ನು ನೀಡಿರುತ್ತಾರೆ. ವಿಚಿತ್ರವೆಂದರೆ "ಈ ಗುಪ್ತ ಮತದಾನದ ಪದ್ಧತಿ ಬ್ರಿಟನ್‌ಗಿಂತ ಮೊದಲು ದಕ್ಷಿಣ ಆಸ್ಟ್ರೇಲಿಯಾದಲ್ಲಿ ೧೮೫೬ರಲ್ಲಿ ಜಾರಿಗೆ ಬಂದಿತ್ತು. ಆ ನಂತರವಷ್ಟೇ ೧೮೭೨ರಲ್ಲಿ ಬ್ರಿಟನ್ ಇದನ್ನು ಅಳವಡಿಸಿಕೊಂಡಿದ್ದು. ಪ್ರಜಾಪ್ರಭುತ್ವದ ಆಧಾರ ಸ್ತಂಭವಾದ ಚುನಾವಣೆಗಳು, ಮತ ಚಲಾಯಿಸುವ ಹಕ್ಕಿನ ವಿಷಯಗಳು (ಲಿಂಗ) ತಾರತಮ್ಯವಿಲ್ಲದೆ ಮೊದಲು ಚರ್ಚೆಗೊಳಪಟ್ಟು ಎಲ್ಲರಿಗೂ ಓಟಿನ ಹಕ್ಕು ದಕ್ಕಿದ್ದು, ಅದರಲ್ಲೂ ವಿಶೇಷವಾಗಿ ಹಾಗೂ ಪ್ರಮುಖವಾಗಿ ೧೮೯೩ರಲ್ಲಿ ಮಹಿಳೆಯರಿಗೆ ನೀಡಿದ ದೇಶವೆಂದರೆ ನ್ಯೂಜಿಲೆಂಡ್. ಗ್ರೇಟ್ ಬ್ರಿಟನ್ ೧೯೧೮ರಲ್ಲಿ ಮಹಿಳೆಯರಿಗೆ ಮತದಾನದ ಹಕ್ಕನ್ನು ಶಾಸನಬದ್ಧಗೊಳಿಸುವ Unedr an Act ಮೂಲಕ ಕಲ್ಪಿಸಲಾಗಿತ್ತು. ಇನ್ನೂ ಸಂಸತ್ತಿನ ಶಾಸಕಾಂಗದ ವಿರೋಧಪಕ್ಷದ ನಾಯಕನಿಗೆ ಬ್ರಿಟನ್‌ಗಿಂತ ಮೊದಲು ವೇತನ ನಿಗದಿಪಡಿಸಿ, ಕಾನೂನುಬದ್ಧಗೊಳಿಸಿದ ದೇಶಗಳೆಂದರೆ ಕೆನಡಾ ಮತ್ತು ಆಸ್ಟ್ರೇಲಿಯಾ. ಹೀಗೆ ಯಾವುದೇ ಒಂದು ದೇಶ ಸಂವಿಧಾನಾತ್ಮಕವಾಗಿ ಶ್ರೇಷ್ಟವಾದದ್ದು ಅಥವಾ ಕನಿಷ್ಟ ಅಥವಾ ಅನುಕರಣೀಯವಾದದ್ದೆಂದು ಪರಿಗಣಿಸಬಾರದು. ಪ್ರತಿಯೊಂದು ರಾಷ್ಟ್ರವು ತನ್ನದೇ ಆದ ಧನಾತ್ಮಕ ಮತ್ತು ಋಣಾತ್ಮಕ (Positive and Negative) ಅಂಶಗಳನ್ನು ಒಳಗೊಂಡಿರುತ್ತದೆ." (Indian Parliament- A Critical Study, T.S.Rajagopal Iyengar, Prasaranga, University of Mysore, ೧೯೭೨, P. ೩)

ಭಾರತದ ಸಂಸತ್ತು ಬ್ರಿಟಿಷ್ ಮಾದರಿಯದಾದರೂ ಅದು ಪೂರ್ಣ ಪ್ರಮಾಣದ ಅಧಿಕಾರವನ್ನಾಗಲೀ, ಸಾರ್ವಭೌಮತ್ವವನ್ನಾಗಲೀ ಸಂಸತ್ತಿಗೆ ಕೊಟ್ಟಿಲ್ಲ. ನಮ್ಮ ಸಂವಿಧಾನ ಮತ್ತು ಅದರ ರಕ್ಷಕನಾಗಿರುವ ನ್ಯಾಯಾಂಗ ಇವುಗಳೊಂದಿಗೆ ಹೊಣೆಗಾರಿಕೆ, ಅಧಿಕಾರ ಹಂಚಿಕೆಯಾಗಿದೆ. ಇತ್ತ ಬ್ರಿಟಿಷ್ ಮಾದರಿಯ ಶಾಸಕಾಂಗ ಅತ್ತ ಅಮೇರಿಕ ಮಾದರಿಯ ಸಂವಿಧಾನ ಮತ್ತು ನ್ಯಾಯಾಂಗ ಸಾರ್ವಭೌಮತ್ವದ ವ್ಯವಸ್ಥೆಯನ್ನು

ಭಾರತ ಸಂವಿಧಾನ ಒಳಗೊಂಡಿದೆಯೆಂಬ ಜೆ.ಸಿ.ಜೊಹಾರಿಯವರ ಅಭಿಪ್ರಾಯವು ಸರಿಯಾಗಿಯೇ ಇದೆ. "However the peculiar thing about our parliment is that while its general pattern is like that of the English parliment, it is a non-sovereign law-making body like the American congress. Its legislative authority is circumscribed by the written provisions of the constitution that establish a federal system of govt. with power of Judicial reveiw vested in Supreme court and High courts. It, therefore, appears that the Indian constitution has wonderfully adopted the synthesis of the English principle of Parlimentary Sovereignity and American system of Judicial Supremacy." (The constitution of India : A Political legal study, J.C. Johari, Sterling Publishers Pvt. Ltd. New Delhi, 1995, p. 129)

ಹೀಗಾಗಿ ಸಂಸತ್ತು ಎಂದರೆ ಶಾಸಕಾಂಗವಾದರೂ ಅದು ಭಾರತದ ಸಂದರ್ಭದಲ್ಲಿ ಸಂವಿಧಾನದ ಕಲಂ ೭೯ರ (ಭಾಗ V ರ IIನೇ ಅಧ್ಯಾಯದಲ್ಲಿ ವಿವರಿಸಿದಂತೆ) ಪ್ರಕಾರ ಕೇಂದ್ರ ಶಾಸಕಾಂಗ ಅಥವಾ ಸಂಸತ್ತು ರಾಷ್ಟ್ರಪತಿಯನ್ನೊಳಗೊಂಡು ಎರಡು ಸದನಗಳನ್ನು ಹೊಂದಿದೆ. ಆ ಎರಡು ಸದನಗಳೆಂದರೆ ಲೋಕಸಭೆ ಮತ್ತು ರಾಜ್ಯಸಭೆ. ಇವುಗಳ ಸಂವಿಧಾನಿಕ ಮುಖ್ಯಸ್ಥನಾಗಿ ರಾಷ್ಟ್ರಪತಿಯು ಕಾರ್ಯ ನಿರ್ವಹಿಸುತ್ತಾನೆ. ಬ್ರಿಟಿಷ್ - ಭಾರತದಲ್ಲಿ, ಕೇಂದ್ರದಲ್ಲಿ ಮೊಟ್ಟಮೊದಲ ಬಾರಿಗೆ ದ್ವಿಸದನ ಶಾಸಕಾಂಗ ಪದ್ಧತಿಯನ್ನು ಮಾಂಟಿಗೊ - ಚೆಮ್ಸ್‌ಫರ್ಡ್ (೧೯೧೮) ಸುಧಾರಣೆಯನ್ವಯ ಆಚರಣೆಗೆ ತರಲಾಗಿತ್ತು ಎಂಬುದನ್ನು ಗಮನಿಸಬಹುದಾಗಿದೆ. ಅಮೇರಿಕ, ಬ್ರಿಟನ್ ದೇಶಗಳಲ್ಲಿರುವಂತೆ ನಮ್ಮ ಸಂಸತ್ತು ಅಥವಾ ಕೇಂದ್ರ ಶಾಸಕಾಂಗ ದ್ವಿ ಸದನ ಪದ್ಧತಿ ಹೊಂದಿದ್ದು, ಎರಡು ಸದನಗಳಲ್ಲಿ ಲೋಕಸಭೆಯು (House of People) ಕೆಳಮನೆಯಾಗಿದೆ. ರಾಜ್ಯಸಭೆಯು (Council of States) ಮೇಲ್ಮನೆಯಾಗಿದೆ. ಹಾಗೆಯೇ ಕೆಲವು ರಾಜ್ಯಗಳಲ್ಲಿ ಕೇಂದ್ರ ಶಾಸಕಾಂಗದ ಮಾದರಿಯಲ್ಲಿ ರಾಜ್ಯಪಾಲರು ಸಂವಿಧಾನಿಕ ಮುಖ್ಯಸ್ಥರಾಗಿರುತ್ತಾರೆ. ಉದಾಹರಣೆಗೆ ಕರ್ನಾಟಕ ರಾಜ್ಯದಲ್ಲಿ ವಿಧಾನಸಭೆ ಕೆಳಮನೆಯಾಗಿದ್ದು, ವಿಧಾನಪರಿಷತ್ ಮೇಲ್ಮನೆಯಾಗಿದೆ. ಕೆಲವು ರಾಜ್ಯಗಳಲ್ಲಿ ಏಕಸದನ ಶಾಸಕಾಂಗ ಪದ್ಧತಿಯಿದೆ. ೧೯೭೭ರ ಏಪ್ರಿಲ್‌ನಲ್ಲಿದ್ದಂತೆ ಏಕಸದನ ಶಾಸಕಾಂಗ ಹೊಂದಿದ ರಾಜ್ಯಗಳು ಹೀಗಿವೆ: ಆಂಧ್ರಪ್ರದೇಶ (೧೯೮೫), ಅಸ್ಸಾಂ, ಗುಜರಾತ್, ಹರಿಯಾಣ, ಹಿಮಾಚಲ ಪ್ರದೇಶ, ಕೇರಳ, ಮಧ್ಯಪ್ರದೇಶ, ಮಣಿಪುರ, ಮೇಘಾಲಯ, ನಾಗಾಲ್ಯಾಂಡ್, ಒರಿಸ್ಸಾ, ಪಂಜಾಬ್ (೧೯೬೯), ರಾಜಸ್ಥಾನ್, ಸಿಕ್ಕಿಂ, ತಮಿಳುನಾಡು (೧೯೮೬) ತ್ರಿಪುರ, ಪಶ್ಚಿಮಬಂಗಾಳ (೧೯೬೯), ಗೋವಾ, ಮಿಜೋರಾಂ, ಅರುಣಾಚಲಪ್ರದೇಶ, ಪಾಂಡಿಚೇರಿ (ಕೇಂದ್ರಾಡಳಿತ ಪ್ರದೇಶ). ಉಳಿದ ಅಂದರೆ ದ್ವಿಸದನ ಶಾಸಕಾಂಗ ಹೊಂದಿದ ರಾಜ್ಯಗಳು ಹೀಗಿವೆ : ಬಿಹಾರ್, ಜಮ್ಮು ಮತ್ತು ಕಾಶ್ಮೀರ್, ಕರ್ನಾಟಕ, ಮಹಾರಾಷ್ಟ್ರ, ಉತ್ತರಪ್ರದೇಶ. ಈಗ ಸಂಸತ್ತಿನ ಎರಡು ಸದನಗಳ ರಚನೆ, ಅಧಿಕಾರ ಮತ್ತು (ಕರ್ತವ್ಯ) ಕಾರ್ಯಗಳ ಹಾಗೂ ಮಹಿಳೆಯ ಪಾಲ್ಗೊಳ್ಳುವಿಕೆಯ ಕುರಿತು ಹೀಗೆ ವಿವರಿಸಲಾಗಿದೆ.

## ಅ. ರಾಜ್ಯಸಭೆ

ಸಂಸತ್ತಿನ ಮೇಲ್ಮನೆಯನ್ನು (Upper House, Council of States) ರಾಜ್ಯಸಭೆ ಎಂದು ೧೯೫೪ ರಲ್ಲಿ ಭಾರತದ ಪ್ರಥಮ ಲೋಕಸಭೆಯ ಸಭಾಪತಿಯಾಗಿದ್ದ ಶ್ರೀ ಜಿ.ವಿ.ಮಾವಲಂಕರ್ (೧೯೪೬ - ೧೯೫೬)ರ ಸಲಹೆಯ ಮೇರೆಗೆ ನಾಮಕರಣ ಮಾಡಲಾಯಿತು. ಅಂತೆಯೇ ಕೆಳಮನೆಯನ್ನು (Lower House of people) ಲೋಕಸಭೆ ಎಂದು ಕರೆಯಲಾಯಿತು. ಸಂವಿಧಾನದ ೮೦ನೇ ಕಲಮಿನನ್ವಯ ರಾಜ್ಯಸಭೆಯ ಸದಸ್ಯರ ಸಂಖ್ಯೆಯನ್ನು ಗರಿಷ್ಠ ೨೫೦ಕ್ಕೆ ಮಿತಿಗೊಳಿಸಲಾಗಿದೆ. ಒಟ್ಟು ೨೫೦ ಸದಸ್ಯರ ಪೈಕಿ ೨೩೮ ಸದಸ್ಯರು ರಾಜ್ಯಗಳ ವಿಧಾನಸಭೆಗಳ ಸದಸ್ಯರಿಂದ ಮತ್ತು ಕೇಂದ್ರಾಡಳಿತ ಪ್ರದೇಶಗಳ ಸದಸ್ಯರಿಂದ ಪರೋಕ್ಷವಾಗಿ ಚುನಾಯಿತರ ಸಮೂಹದಿಂದ Electoral College ಏಕಮತವನ್ನು ವರ್ಗಾಯಿಸುವ ಪ್ರಮಾಣಾನುಗುಣ ಪದ್ಧತಿಯ (System of Proportional Representation by means of Single Transferable Vote) ಮೂಲಕ ಆಯ್ಕೆಯಾಗುತ್ತಾರೆ. ಈ ಸದನವು ಅಮೇರಿಕೆಯ ಬಲಿಷ್ಠ ಛೇಂಬರ್ ಸೆನೆಟ್‌ನಂತೆ (Congress ಶಾಸಕಾಂಗ ಅದರ ದ್ವಿ ಸದನಗಳು ಜನಪ್ರತಿನಿಧಿಗಳ ಸದನ ಹಾಗೂ ಸೆನೆಟ್) ರಾಜ್ಯಗಳನ್ನು ಸಮಾನವಾಗಿ ಪ್ರತಿನಿಧಿಸಿದೇ, ಜನಸಂಖ್ಯೆಯ ಆಧಾರದ ಮೇಲೆ ಅವುಗಳನ್ನು ಪ್ರತಿನಿಧಿಸುತ್ತದೆ. ಅಮೇರಿಕಾದಲ್ಲಿ ಎಲ್ಲ ರಾಜ್ಯಗಳಿಗೆ (೫೦ ರಾಜ್ಯಗಳಿಂದ ಇಬ್ಬರಂತೆ ೧೦೦ ಸದಸ್ಯರು) ಸಮಾನ ಪ್ರಾತಿನಿಧ್ಯವನ್ನು ನೀಡಲಾಗಿದೆ. ಭಾರತದಲ್ಲಿ ಉಳಿದ ರಾಜ್ಯಸಭೆಯ ೧೨ ಸದಸ್ಯರನ್ನು ರಾಷ್ಟ್ರಪತಿಯವರು ನಾಮಕರಣ ಮಾಡುತ್ತಾರೆ. ಈ ಸದಸ್ಯರು ಕಲೆ, ಸಮಾಜಸೇವೆ, ವಿಜ್ಞಾನ, ತಂತ್ರಜ್ಞಾನ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ, ಸಾರ್ವಜನಿಕ ಸೇವೆಗಾಗಿ ಅಮೂಲ್ಯ ಕೊಡುಗೆ ನೀಡಿದ, ಅಪಾರ ಅನುಭವ ಹೊಂದಿದ ಪ್ರತಿಷ್ಠಿತ ವ್ಯಕ್ತಿಗಳಾಗಿರುತ್ತಾರೆ. ಬಹುತೇಕ ರಾಜ್ಯಸಭೆಯ ಸದಸ್ಯರು ಹಿರಿಯರು, ಅನುಭವಿ ಮುತ್ಸದ್ಧಿ ರಾಜಕಾರಣಿಗಳು, ಸಾರ್ವಜನಿಕ ಸೇವೆಗಾಗಿ ಶ್ರಮಿಸಿದ ವ್ಯಕ್ತಿಗಳು ಆಗಿದ್ದರಿಂದ ಇದನ್ನು ಹಿರಿಯರ ಸದನ Elder's House ಎಂದು ಕರೆಯುತ್ತಾರೆ.

ಆರಂಭದ ದಿನಗಳಲ್ಲಿ ಭಾರತ ಗಣರಾಜ್ಯದ ಉಪರಾಷ್ಟ್ರಪತಿಯಾಗಿದ್ದ ಡಾ. ಎಸ್.ರಾಧಾಕೃಷ್ಣನ್ ಅವರು ರಾಜ್ಯಸಭೆಯ ಪ್ರಥಮ ಸಭಾಪತಿಯಾಗಿದ್ದುದು ಸದನದ ಗಾಂಭೀರ್ಯವನ್ನು ಹೆಚ್ಚಿಸಿತ್ತು. ಆ ಕಾರಣಕ್ಕಾಗಿ ಹಿರಿಯರ ಸದನವೆನ್ನುತ್ತಿದ್ದುದು ಸಾರ್ಥಕವಾಗಿತ್ತು. ಆಗಿನ ಸೆಕ್ರೆಟರಿ ಜನರಲ್ ಆಫ್ ದಿ ಕೌನ್ಸಿಲ್ ಆಫ್ ಸ್ಟೇಟ್ಸ್‌ನ ಶ್ರೀ ಬಿ.ಎನ್.ಬ್ಯಾನರ್ಜಿಯವರು ಮೇಧಾವಿಗಳಿಂದ ಕೂಡಿದ ರಾಜ್ಯಸಭೆಯನ್ನು 'ಚಿಂತಕರ ಚಾವಡಿ' ಎಂದೇ ಕರೆಯುತ್ತಿದ್ದರು. ಅದರಲ್ಲೂ ಐದು ಜನ ಸಭಾಪತಿಯವರನ್ನು ಕುರಿತು ಬ್ಯಾನರ್ಜಿಯವರು ಹೀಗೆ ಉದ್ಗಾರ ತೆಗೆದಿದ್ದುಂಟು : "Those persons have given and aura of dignity to the atmosphere of the House by conducting the proceedings with judicious combination of firmeness and flexibility" (The constitution of India, V.D. Mahajan, S.Chand and Company (Pvt) Ltd, New Delhi, 1989, p. 281) ಆ ಐದು ಮಂದಿ ಸಭಾಪತಿಗಳೆಂದರೆ ಡಾ.ರಾಧಾಕೃಷ್ಣನ್, ಡಾ.ಜಾಕೀರ್ ಹುಸೇನ್, ವಿ.ವಿ.ಗಿರಿ, ಜಿ.ಎಸ್.ಪಾಠಕ್ ಮತ್ತು ಕರ್ನಾಟಕದವರೇ ಆದ ಕನ್ನಡಿಗ ಶ್ರೀ.ಬಿ.ಡಿ.ಜತ್ತಿಯವರು.

ಈ ಹಿರಿಯರ ಸದನ ಅಥವಾ ಚಿಂತಕರ ಚಾವಡಿ ಎಂದೆನಿಸಿದ ರಾಜ್ಯಸಭೆಯು ದೇಶದ ಅತ್ಯುನ್ನತ ಶಾಸಕಾಂಗವಾಗಿದ್ದು, ಜನತೆಗೆ ಅಗತ್ಯವಾದ ಕಾನೂನುಗಳನ್ನು ರಚಿಸುವ, ತಿದ್ದುಪಡಿ ಮಾಡುವ, ಇಲ್ಲವೇ ರದ್ದುಪಡಿಸುವ ಅಧಿಕಾರವುಳ್ಳದ್ದು. ಲಿಂಗಭೇದವಿಲ್ಲದೇ ಇಡೀ ದೇಶದ ನಾಗರಿಕರೆಲ್ಲರ ಆಸೆ - ಆಕಾಂಕ್ಷೆಗಳನ್ನು ಈಡೇರಿಸುವ ಎಲ್ಲರನ್ನು ಪ್ರತಿನಿಧಿಸುವ ಸದನ. ಜನತೆಯ ಒಳಿತಿಗಾಗಿ ಸುಖೀ ರಾಜ್ಯದ ಕಲ್ಪನೆಯನ್ನು ಸಾಕಾರಗೊಳಿಸಲು ಶ್ರಮಿಸುವ ಶಾಸಕಾಂಗವೆಂದೇ ನಮ್ಮ ಸಂವಿಧಾನ ಪಿತರು ಆಶಿಸಿದ್ದ, ಜನಪ್ರತಿನಿಧಿಗಳ ಸೌಧ ಇದಾಗಿದೆ. ಇದರ ರಚನೆಯಡಿ ಸದನವನ್ನು ಪ್ರತಿನಿಧಿಸುವ ಸದಸ್ಯರಾದಿಯಲ್ಲಿ ಲಿಂಗತಾರತಮ್ಯ ಎದ್ದು ಕಾಣುತ್ತಿದೆ. ಪ್ರಜಾಸತ್ತೆಯ ಆದರ್ಶಗಳಿಗನುಗುಣವಾಗಿ ರಾಜ್ಯಸಭೆಯಲ್ಲಿನ ಸದಸ್ಯರನ್ನು ಆಯ್ಕೆ ಮಾಡಲಾಗುತ್ತಿದೆಯೇ ಎನ್ನುವ ಬಗ್ಗೆ ಯೋಚಿಸಬೇಕಾಗಿದೆ. ಈ ಸದನ ಒಳಗೊಂಡಿರುವ ೨೫೦ ಒಟ್ಟು ಸದಸ್ಯರಲ್ಲಿ ೨೩೮ ಜನ ಸದಸ್ಯರು ಪಕ್ಷದ ರಾಜಕೀಯ ಪಕ್ಷದ ಹೆಸರಿನಲ್ಲಿ ಎಲ್ಲಾ ರಾಜ್ಯಗಳಿಂದ ಜನಸಂಖ್ಯಾ ಆಧಾರದ ಮೇಲೆ ಚುನಾವಣೆಯೊಂದಿಗೆ ರಾಜ್ಯಸಭೆಯನ್ನು ಪ್ರವೇಶಿಸುತ್ತಾರೆ. ಈ ಸದನದಲ್ಲಿ ಪ್ರವೇಶ ಪಡೆಯುವವರು ಸಾರ್ವತ್ರಿಕ ಚುನಾವಣೆಯೆಂಬ ಜೂಜಾಟದಲ್ಲಿ ಸ್ಪರ್ಧಿಸದೇ ಹಿಂಬಾಗಿಲಿನಿಂದ ಪ್ರವೇಶಿಸುವ ಅವಕಾಶವನ್ನು ಹೊಂದಿರುವರೆಂಬ ಟೀಕೆಯೂ ಕೇಳಿಬರುತ್ತಿದೆ. ಈಗಾಗಲೇ ಗಮನಿಸಿದಂತೆ ವಿವಿಧ ರಾಜಕೀಯ ಪಕ್ಷಗಳಿಂದ ಚುನಾಯಿತಗೊಂಡ ಸದಸ್ಯರಲ್ಲಿ ರಾಜ್ಯಸಭೆಯನ್ನು ಪ್ರವೇಶಿಸಿದವರು ೨೩೮, ಇನ್ನುಳಿದ ೧೨ ಜನ ಸದಸ್ಯರನ್ನು ರಾಷ್ಟ್ರಪತಿಗಳು ನಾಮಕರಣ ಮಾಡುತ್ತಾರೆ. ಎಲ್ಲಾ ೨೩೮ ಸದಸ್ಯರು ಬಹುತೇಕ ಪುರುಷರೇ ಆಗಿದ್ದು, ಇದರಲ್ಲಿರುವ ಮಹಿಳಾ ಸದಸ್ಯರೆಷ್ಟು? ಇದರ ಸದಸ್ಯತ್ವಕ್ಕೆ ಇರುವ ಮಾನದಂಡ ಮಹಿಳೆಯರಿಗೆ ಅನ್ವಯಿಸುವುದಿಲ್ಲವೋ? ಅಥವಾ ಅನ್ವಯವಾಗಲು ಯೋಗ್ಯವಲ್ಲ ಎಂಬ ತಿರಸ್ಕಾರ ಮನೋಭಾವವೇ? ಮಹಿಳೆಯರನ್ನು ಇತ್ತೀಚಿನ ದಿನಮಾನಗಳಲ್ಲಿ ಪಕ್ಷದ ಸದಸ್ಯತ್ವಕ್ಕೆ ನೋಂದಣಿ ಮಾಡಿಕೊಳ್ಳುವ ಪಕ್ಷದಲ್ಲಿ, ಉನ್ನತಸ್ಥಾನವನ್ನು (?) ನೀಡಿ ಅವರ ಅನುಕಂಪ ಪಡೆಯುವ, ಎಲ್ಲ ರಾಜಕೀಯ ಹುನ್ನಾರಗಳೂ ನಡೆಯುತ್ತಿರುವುದನ್ನು ಕಾಣಬಹುದು. ಅದು ಮಹಿಳೆಯರನ್ನು ಚುನಾವಣಾ ಪ್ರಚಾರಕ್ಕೆ ಬಳಸುವ, ವೇದಿಕೆಯ ಮೇಲೆ ಭಾಷಣ ಮಾಡಲು ಅವಕಾಶ ಕೊಡುವ, ಅವಳ ಸರ್ವತೋಮುಖ ಅಭಿವೃದ್ಧಿಗಾಗಿ ಅತಿಯಾದ ಕಾಳಜಿ ತೋರುವ, ರಾಜಕೀಯ ಪಕ್ಷಗಳು ನೀಡುವ ಅತಿಯಾದ ಮಹತ್ವ, ಅವಳನ್ನು ಚುನಾವಣೆಯೆಂಬ ಸ್ಪರ್ಧೆಯಲ್ಲಿ ಟಿಕೇಟು ಕೊಟ್ಟು ನಿಲ್ಲಿಸಿ, ಗೆಲ್ಲಿಸುವ ಸಾಹಸ ಏಕೆ ಮಾಡಲೊಲ್ಲರು? ಇಲ್ಲಿ ರಾಜಕಾರಣವೆಂಬುದು ಅಧಿಕಾರದ ಚದುರಂಗ. ಸೋಲು ಮತ್ತು ಗೆಲುವುಗಳ ಅದರ ಫಲಿತಗಳು. ಪ್ರತಿಯೊಂದು ರಾಜಕೀಯ ಪಕ್ಷದ ಗುರಿ ಚುನಾವಣೆಯನ್ನು ಗೆಲ್ಲುವುದು. ಮತ್ತು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದೇ ಮೊದಲ ಆದ್ಯತೆಯಾಗಿ ದಾಖಲಿಸಿಕೊಂಡಿರುತ್ತದೆ. ಈ ಗೆಲುವಿಗಾಗಿ ಪ್ರಜಾಪ್ರಭುತ್ವಕ್ಕೆ ವಿರುದ್ಧವಾದ ಎಲ್ಲ ವರಸೆಗಳನ್ನು ಅಂದರೆ Money, Wine and Muscle Power ಗಳ ಪರೋಕ್ಷ ಸಹಕಾರದಿಂದ ಸಿದ್ಧವಾಗಿರುತ್ತದೆ. ಯಾವುದೇ ಪಕ್ಷ ತನ್ನ ಅಸ್ತಿತ್ವವನ್ನು ಮೊದಲು ಉಳಿಸಿಕೊಂಡು, ಮುಂದಿನ ಬಗ್ಗೆ ತಲೆಕೆಡಿಸಿಕೊಳ್ಳುತ್ತದೆ. ಹೀಗಾಗಿ ಪುರುಷ ಪ್ರಧಾನವಾದ, ಪುರುಷ ಕೇಂದ್ರಿತ ಅಥವಾ ನಿಯಂತ್ರಿತ ರಾಜಕೀಯ ಪಕ್ಷಗಳು ತಮ್ಮ ಗೆಲುವು, ಆನಂತರ

ಅಧಿಕಾರ ಹಿಡಿದಿಟ್ಟುಕೊಳ್ಳುವಿಕೆಯನ್ನು ಗುರಿಯಾಗಿಟ್ಟುಕೊಂಡಿರುವಾಗ, ಮಹಿಳೆಯರನ್ನು ಪಕ್ಷದ ಅಭ್ಯರ್ಥಿಯಾಗಿ ಚುನಾವಣೆಗೆ ನಿಲ್ಲಿಸಿ, ಜನ-ಹಣವನ್ನು ಬಳಸಿ ಗೆಲ್ಲಿಸುವಲ್ಲಿ ಹಿಂದೇಟು ಹಾಕುತ್ತಿವೆ. ಇದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಂತೆಲ್ಲಾ ಲಿಂಗಾಧಾರಿತ ಪಕ್ಷಪಾತ ಧೋರಣೆ ಎಷ್ಟು ವ್ಯವಸ್ಥಿತವಾಗಿ, ನಯವಾಗಿ ಅನುಸರಿಸಲಾಗುತ್ತದೆ ಎಂಬುದು ಕಂಡುಬರುತ್ತದೆ.

ಈ ಹಿಂದೆ ಆರಂಭಿಕ ವರ್ಷಗಳಿಂದ ರಾಜ್ಯಸಭೆಯು ಸಭಾಪತಿಗಳಂತಹ ಮೇಧಾವಿಗಳ ಜತೆಯಲ್ಲಿ ಸದನದಲ್ಲಿರುತ್ತಿದ್ದ ಸದಸ್ಯರೆಲ್ಲರೂ ಒಂದಲ್ಲ ಒಂದು ಕ್ಷೇತ್ರದಲ್ಲಿ ಅಸಾಧಾರಣ ಪ್ರತಿಭೆಯುಳ್ಳವರಾಗಿದ್ದರು. ಉತ್ತಮ ಸಂಸದೀಯ ಪಟುಗಳು, ತಜ್ಞರು, ವಿದ್ವಾಂಸರು, ಸಮಾಜ ಸುಧಾರಕರು, ಮುತ್ಸದ್ದಿ ರಾಜಕಾರಣಿಗಳು, ಕಾನೂನು ಪಂಡಿತರು ಇತ್ಯಾದಿ ವಿವಿಧ ಸ್ತರದ ಜನ ಪ್ರತಿನಿಧಿಗಳು ಸಭೆಗೆ ಶೋಭೆಯನ್ನು ತಂದಿದ್ದರು. ಇವರುಗಳು ಮಂಡಿಸುತ್ತಿದ್ದ ವಿಷಯಗಳು, ಅವುಗಳ ಮೇಲಿನ ಚರ್ಚೆ, ವಾದ, ಪ್ರತಿವಾದಗಳು ಪ್ರಜಾಪ್ರಭುತ್ವದ (ಮುಕ್ತ ವಾತಾವರಣದ) ಕಲ್ಪನೆ ಸಾಕಾರಗೊಳ್ಳುವ ಸದನವಾಗಿ ಕಂಗೊಳಿಸುತ್ತಿತ್ತು. ಅನೇಕರು ಈ ಮೇಧಾವಿಗಳ ಮಂಡಲವನ್ನು (Galaxy Of Eminent Personalities) ಹೊಂದಿರುವುದು ಅಭಿಮಾನದ ಸಂಗತಿಯಾಗಿ ಕಂಡುಬರುತ್ತಿತ್ತು. ಅವರಲ್ಲಿ ಪ್ರಮುಖ ಮೇಧಾವಿಗಳೆಂದರೆ, ಪಾಣೀಕ್ಕರ್, ಡಾ. ತಾರಾಚಂದ್, ಡಾ. ಅಂಬೇಡ್ಕರ್, ಸರ್. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್, ಎಮ್.ಸಿ.ಚಾಗ್ಲಾ, ಸಿ.ಕೆ.ದಫ್ತಾರಿ, ಕೆ.ಸಂತಾನಂ, ಆರ್.ಆರ್.ದಿವಾಕರ್, ಭೂಪೇಶ್ ಗುಪ್ತ, ಡಾ. ರಾಮಸ್ವಾಮಿ ಮೊದಲಿಯಾರ್, ಡಾ. ರಾಧಾ ಕುಮುದ್ ಮುಖರ್ಜಿ ಇತ್ಯಾದಿ.

ರಾಜ್ಯಸಭೆಯು ಲೋಕಸಭೆಯಂತಲ್ಲದೇ ಶಾಶ್ವತಸಭೆಯಾಗಿರುತ್ತದೆ. ಇದು ವಿಸರ್ಜನೆಗೊಳ್ಳುವುದಿಲ್ಲ. ಇದರ ಸದಸ್ಯರ ಕಾಲಾವಧಿ ಆರು ವರ್ಷಗಳು. ಪ್ರತಿ ಎರಡು ವರ್ಷಗಳಿಗೊಮ್ಮೆ ಸದನದ ೧/೩ ರಷ್ಟು ಸದಸ್ಯರು ನಿವೃತ್ತರಾಗಿ, ಮತ್ತೆ ಆ ಸ್ಥಾನಗಳಿಗೆ ಚುನಾವಣೆಗೆ ನಿಲ್ಲಲು ಮತ್ತು ಸದಸ್ಯರಾಗಲು ಅರ್ಹರಾಗಿರುತ್ತಾರೆ. ಈಗ ಕರ್ನಾಟಕದಿಂದ ೧೨ ಸದಸ್ಯರು ರಾಜ್ಯಸಭೆಗೆ ಆಯ್ಕೆಯಾಗಿದ್ದಾರೆ. ಅವಿಭಜಿತ ಉತ್ತರಪ್ರದೇಶ ರಾಜ್ಯದಿಂದ ಅತಿಹೆಚ್ಚು (೩೪) ಸದಸ್ಯರನ್ನು ಆರಿಸಿ ಕಳಿಸಲಾಗಿದೆ. ಕೇಂದ್ರಾಡಳಿತ ಪ್ರದೇಶಗಳಾದ ದೆಹಲಿ (೩), ಪಾಂಡಿಚೇರಿ(೧) ಗಳನ್ನು ಬಿಟ್ಟರೆ ಉಳಿದ ಕೇಂದ್ರಾಡಳಿತ ಪ್ರದೇಶಗಳಾದ ಚಂಡೀಘಡ, ದಾದರಾ ಮತ್ತು ನಗರ ಹವೇಲಿ, ದಮನ್ ಮತ್ತು ದಿವ, ಲಕ್ಷದ್ವೀಪ ಜನಸಂಖ್ಯೆಯಲ್ಲಿ ಅತೀ ಚಿಕ್ಕ ಗಾತ್ರ ಹೊಂದಿರುವುದರಿಂದ ರಾಜ್ಯಸಭೆಯಲ್ಲಿ ಪ್ರಾತಿನಿಧ್ಯ ಹೊಂದಿರುವುದಿಲ್ಲ.

ಸಂವಿಧಾನದ ಕಲಂ ೮೪ರಂತೆ ಸಂಸತ್ ಸದಸ್ಯನಾಗಲು ಇರಬೇಕಾದ ಅರ್ಹತೆಗಳನ್ನು ಸ್ಪಷ್ಟಪಡಿಸಲಾಗಿದೆ. ರಾಜ್ಯಸಭೆಯ ಸದಸ್ಯನಾಗಲು :

೧. ಅವನು / ಅವಳು ಭಾರತದ ಪ್ರಜೆಯಾಗಿರಬೇಕು.

೨. ಪ್ರಜೆಯು ೩೦ ವರ್ಷ ವಯೋಮಿತಿ ಹೊಂದಿರಬೇಕು.

೩. ೧೯೫೧ರ ಪ್ರಜಾಪ್ರತಿನಿಧಿ ಕಾಯ್ದೆಯ ಪ್ರಕಾರ (The Representation of the People Act, ೧೯೫೧) ರಾಜ್ಯದಲ್ಲಿನ ಯಾವುದಾದರೂ ಲೋಕಸಭಾ ಕ್ಷೇತ್ರದಲ್ಲಿ ಮತದಾರನಾಗಿರಬೇಕು.

೪. ಅವನು / ಅವಳು ಕಾಲಕಾಲಕ್ಕೆ ಸಂಸತ್ತು ನಿಗದಿಪಡಿಸಿದ ಇತರ ಅರ್ಹತೆಗಳನ್ನು ಹೊಂದಿರಬೇಕು. (An Act of Parliament)

ರಾಜ್ಯಸಭೆಯು ಸದನದ ಕಾರ್ಯ ಕಲಾಪಗಳನ್ನು ನಡೆಸಲು ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ಹೊಂದಿರುತ್ತದೆ. ಸಂವಿಧಾನಬದ್ಧವಾಗಿ ಉಪರಾಷ್ಟ್ರಪತಿಯು ರಾಜ್ಯಸಭೆಯ ಅಧ್ಯಕ್ಷರಾಗಿರುತ್ತಾರೆ. ಅವರು ಸದನದ Ex-Officio Chairman ಆಗಿರುತ್ತಾರೆ. ಸಭಾಪತಿ ಮತ್ತು ಉಪಸಭಾಪತಿಗಳು ಸಂವಿಧಾನ ಕಲಂ ೮೯ ರನ್ವಯ ನೇಮಕ (ಆಯ್ಕೆ) ಹೊಂದುತ್ತಾರೆ. ಉಪಸಭಾಪತಿಯಾಗಿ ಸದನದ ಸದಸ್ಯರಲ್ಲಿಯೇ ಆಯ್ಕೆಯಾದವರಾಗಿರುತ್ತಾರೆ. ರಾಜ್ಯಸಭೆಯ ಅಧಿಕಾರ ಮತ್ತು ಕಾರ್ಯಗಳು ಲೋಕಸಭೆಗೆ ಇರುವಂತೆ ಇದ್ದರೂ, ಕೆಲವು ವಿಷಯಗಳಲ್ಲಿ ರಾಜ್ಯಸಭೆಯು ದುರ್ಬಲವಾಗಿದೆ. ಅದರಲ್ಲೂ ಹಣಕಾಸಿನ ವಿಷಯಗಳಿಗೆ ಸಂಬಂಧಿಸಿದಂತೆ ರಾಜ್ಯಸಭೆಯು ಹೆಚ್ಚೆಂದರೆ ಲೋಕಸಭೆಯು ಅಂಗೀಕರಿಸಿದ ಮಸೂದೆಯನ್ನು ತಡೆಹಿಡಿಯಬಹುದು ಅಥವಾ ವಿಳಂಬ ಮಾಡಬಹುದು. ಅದೂ ೧೪ ದಿನಗಳವರೆಗೆ ಯಾವುದೇ ಪ್ರತಿಕ್ರಿಯೆ ತೋರದಿದ್ದಲ್ಲಿ ಲೋಕಸಭೆಯು ಆ ಮಸೂದೆಯನ್ನು ರಾಜ್ಯಸಭೆಯು ಅನುಮೋದಿಸಿದೆಯೆಂದು ಭಾವಿಸಿ ಪಾಸು ಮಾಡಬಹುದು. ಅಂತಿಮವಾಗಿ ಕೆಳಮನೆಗೆ ಈ ಅಧಿಕಾರವಿರುವದಿಂದ ರಾಜ್ಯಸಭೆ ವಿಧಿಯಿಲ್ಲದೇ ಅಂಗೀಕಾರ ನೀಡಬೇಕಾದ್ದು ಅದರ ದೌರ್ಬಲ್ಯವನ್ನು ಅಸಹಾಯಕತೆಯನ್ನು ತೋರಿಸುತ್ತದೆ. ಪಾಶ್ಚಿಮಾತ್ಯ-ಯುರೋಪ್‌ನ ಹಲವು ರಾಷ್ಟ್ರಗಳಲ್ಲಿನ ಮೇಲ್ಮನೆ ಮತ್ತು ಕೆಳಮನೆಗಳೆರಡೂ ಸಮಾನ ಅಧಿಕಾರವನ್ನು ಹೊಂದಿವೆ. ಹಣಕಾಸಿನ ವಿಷಯಗಳಲ್ಲಿ ಸಮಾನ ಸ್ಥಾನ - ಮಾನ ನೀಡಲಾಗಿದೆ. ಸ್ವೀಡನ್, ಬೆಲ್ಜಿಯಂ ಮತ್ತು ಇಟಲಿ ದೇಶಗಳಲ್ಲಿ ಮೇಲ್ಮನೆ ಅಥವಾ ಎರಡನೇ ಸದನಕ್ಕೆ ಕಾನೂನು ರಚನೆಯೊಂದಿಗೆ ಹಣಕಾಸಿನ ವಿಷಯಗಳಲ್ಲಿ ಸಮಾನ ಅಧಿಕಾರವನ್ನು ನೀಡಿರುವುದು ಕಂಡುಬರುತ್ತದೆ.

ದೇಶದ ಇಂತಹ ಉನ್ನತ ಶಾಸಕಾಂಗದಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ನಿರಾಕರಿಸಿರುವುದಿಲ್ಲ. ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರಗಳೂ ಹಿಂದೆ ಬಿದ್ದಿಲ್ಲ. ಭಾರತದ ಪುರುಷ ರಾಜಕಾರಣ ಇದಕ್ಕೆ ಕೊಡುವ ಕಾರಣಗಳಲ್ಲಿ ಅತಾರ್ಕಿಕವಾದ ಅಸಂಬದ್ಧವಾದ ಸಬೂಬುಗಳು, ಇದರ ಹಿಂದಿನ ಹುನ್ನಾರಗಳನ್ನು ಬಹಿರಂಗ ಗೊಳಿಸುತ್ತವೆ. ಅವುಗಳನ್ನು ಹೀಗೆ ಗುರುತಿಸಬಹುದು.

೧. ರಾಜಕಾರಣ ಎಂಬುದು ಅದರಲ್ಲೂ ಇಂತಹ ಉನ್ನತಮಟ್ಟದ ಅಂದರೆ ಕೇಂದ್ರ, ರಾಜ್ಯಮಟ್ಟದ ರಾಜಕಾರಣ ಅವಳಿಂದಾಗದು. ಅದಕ್ಕಾಗಿ ಅವಳಿಗೆ ಪ್ರತ್ಯೇಕ ರಾಜಕೀಯ

ತರಬೇತಿ, ಶಿಕ್ಷಣ ಅಗತ್ಯವಾಗಿ ನೀಡಬೇಕು. ಮೊದಲು ಕೆಳಸ್ತರದ ರಾಜಕೀಯ - ಗ್ರಾಮಗಳ ಕುಟುಂಬದ ನೆರಳಲ್ಲಿಯೇ, ರಾಜಕೀಯ ಜ್ಞಾನವನ್ನು ಪುರುಷನೇ ನೀಡಬೇಕೆ?

ಮಹಿಳೆಯರ ರಾಜಕೀಯ ಪ್ರವೇಶ ಹಾಗೂ ಹೋರಾಟದ ಕುರಿತು ತೆಲಂಗಾಣ ಚಳುವಳಿ ಹೋರಾಟಗಾರ, ಶಾಸಕ ಸ್ವರಾಜ್ಯಂ ಆಡಿರುವ ಮಾತುಗಳು ಮಾರ್ಮಿಕವಾಗಿದ್ದರೂ ವಾಸ್ತವವಾಗಿವೆ. "ಯಾವುದೇ ಪಕ್ಷದಲ್ಲಿ ಕೆಲಸ ಮಾಡುತ್ತಿದ್ದರೂ ಪುರುಷಾಧಿಪತ್ಯ ವೆಂಬುದು ಗಂಡಸರ ರಕ್ತದಲ್ಲೇ ಇದೆ. ಪ್ರತಿಯೊಂದು ಹಂತದಲ್ಲಿ ಸಂದರ್ಭದ ಅಗತ್ಯಕ್ಕೆ ತಕ್ಕಂತೆ ನಿಧಾನವಾಗಿ ಈ ಪುರುಷಾಧಿಪತ್ಯದ ವಿರುದ್ಧವೂ ಹೋರಾಡಬೇಕಾಗುತ್ತದೆ. ಆದರೆ ಅದೇ ಮುಖ್ಯ ಹೋರಾಟವಲ್ಲ. ರಾಜಕೀಯ ಹೋರಾಟವೇ ಮುಖ್ಯ ಹೋರಾಟ ..... ಪ್ರತಿಯೊಬ್ಬ ಮಹಿಳೆ ಎರಡೂ ರೀತಿಯ ಹೋರಾಟಗಳಲ್ಲಿ ತೊಡಗಬೇಕಾಗುತ್ತದೆ. ಗಂಡಸರು ಮಾತ್ರ ಒಂದೇ ರೀತಿಯ ಹೋರಾಟಗಳಲ್ಲಿ ತೊಡಗಿರುತ್ತಾರೆ. ಕೈಗೆ ಸಿಕ್ಕ ಟವೆಲನ್ನು ಭುಜದ ಮೇಲೆ ಹಾಕಿಕೊಂಡು ಮೆರವಣಿಗೆಗೆ ಗಂಡಸರು ನಡೆದು ಬಿಡುತ್ತಾರೆ. ಆದರೆ ನಾವು ಹಾಗಲ್ಲ. ಮನೆಯಲ್ಲಿಯೂ ಹೋರಾಡಬೇಕು; ಸಾಧ್ಯವಾದರೆ ಮೆರವಣಿಗೆ ಹೋಗುತ್ತೇವೆ, ಇಲ್ಲವಾದರೆ ಇಲ್ಲ. ಗಂಡಸಿಗೆ ನೋವುಂಟು ಮಾಡದೇ ಯಾವುದೇ ರೀತಿಯ ಕೆಲಸಮಾಡಲು ಸಾಧ್ಯವಿಲ್ಲ. ಆದ್ದರಿಂದ ಅವರಿಗೆ ನೋವಾದರೆ ಆಗಲಿ ಎಂದು ನಮ್ಮ ಕೆಲಸ ಮಾಡಬೇಕು." (ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಡಾ. ಪ್ರೀತಿ ಶುಭಚಂದ್ರ, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೦೨, ಪು. ೨೭೬) ಎನ್ನುವ ಮಾತುಗಳು ಮಹಿಳೆಯರ ರಾಜಕೀಯ ಹೋರಾಟದ ಅವಶ್ಯಕತೆಯನ್ನು ಒತ್ತಿ ಹೇಳುತ್ತಿವೆ.

೨. ರಾಜ್ಯಸಭೆಯು ಹಿರಿಯರ, ಬುದ್ಧಿಜೀವಿಗಳ, ಸಾಹಿತಿಗಳ, ಸಂಸದೀಯ ಪಟುಗಳ, ಕಾನೂನು ಪಂಡಿತರ, ವಿಜ್ಞಾನಿಗಳ; ಕಲೆ, ಸಾಹಿತ್ಯ ವಿಜ್ಞಾನ, ಸಾರ್ವಜನಿಕ ಸೇವೆಗಾಗಿ ಉನ್ನತಮಟ್ಟದ ಅಪಾರ ಅನುಭವ ಹೊಂದಿದ, ಸೇವೆ ಸಲ್ಲಿಸಿದ ಸದಸ್ಯರನ್ನೊಳಗೊಂಡ ಶಾಸನ ಸಭೆ. ಇಲ್ಲಿರುವ ಪುರುಷ ಸದಸ್ಯರು ಬಹುತೇಕವಾಗಿ ಮೇಲೆ ಹೇಳಿದ ಎಲ್ಲ ಅರ್ಹತೆಗಳನ್ನು ಹೊಂದಿರುತ್ತಾರೆ. ಆದರೆ ಪ್ರಶ್ನೆ ಇರುವುದು ಮಹಿಳೆಯರಿಗೆ ಈ ಮಟ್ಟವನ್ನು ತಲುಪಲು ಬೇಕಾದ ವ್ಯವಸ್ಥೆ ಸಮಾಜದಲ್ಲಿದೆಯೇ ಎಂಬುದು. ರಾಜ್ಯಸಭೆ ಅಲ್ಲಿ ಒಂದು ಮಹಿಳಾ ಮೀಸಲಾತಿ ಇರುತ್ತದೆ. ಅದಕ್ಕಾಗಿ ಮಹಿಳಾ ಸದಸ್ಯರಿಗೆ ಪ್ರಾತಿನಿಧ್ಯ ಕೊಡಬೇಕು ಎನ್ನುವ ಧೋರಣೆಯೊಂದಿಗೆ ಮಹಿಳೆಗೆ ಅವಕಾಶ ನೀಡಲಾಗುತ್ತದೆ. ಹೀಗಾಗಿ ಸ್ವಾತಂತ್ರ್ಯ ಬಂದಾಗಿನಿಂದಲೂ ರಾಜ್ಯಸಭೆಗೆ ಆಯ್ಕೆಗೊಂಡ (ಚುನಾವಣೆ ಮೂಲಕ) ಮಹಿಳೆಯರು ತೀರ ಕಡಿಮೆ ಅಥವಾ ಇಲ್ಲವೇ ಇಲ್ಲ ಎಂದರೂ ತಪ್ಪಾಗಲಿಕ್ಕಿಲ್ಲವೇನೋ?

೩. ಮೂಗಿಗೆ ತುಪ್ಪ ಸವರಿ ರುಚಿ ತಿಳಿದುಕೊಳ್ಳುವಂತೆ ಹೇಳುವ ರೀತಿಯಲ್ಲಿ ರಾಜ್ಯಸಭೆಗೆ ೧೨ ಜನ ಸದಸ್ಯರನ್ನು ನಾಮಕರಣ ಮಾಡಲಾಗುತ್ತದೆ. ರಾಷ್ಟ್ರಪತಿಯು ಸಂವಿಧಾನ ಬದ್ಧವಾಗಿ ಈ ಅಧಿಕಾರವನ್ನು ಹೊಂದಿರುತ್ತಾರೆ. ರಾಷ್ಟ್ರಪತಿಗಳಾದರೂ, ಆಳುವ ಪಕ್ಷದ ಸರಕಾರ ಸಿದ್ಧಪಡಿಸಿ ಸಲ್ಲಿಸಿದ ಸದಸ್ಯರ ಪಟ್ಟಿಯನ್ನು ಸಹಿ ಹಾಕಿ ಅನುಮೋದಿಸುತ್ತಾರೆ. ಹೀಗೆ ನಾಮಕರಣಗೊಂಡ ಸದಸ್ಯರ ಆಯ್ಕೆ ಸಂದರ್ಭದಲ್ಲಿ, ನೇಮಕದಲ್ಲಿ ತಾರತಮ್ಯವನ್ನು ಕಾಣುತ್ತೇವೆ. ಕೆಲವೊಂದು ಸಂದರ್ಭಗಳಲ್ಲಿ ಪಕ್ಷದ ಕೃಪಾಕಟಾಕ್ಷದಿಂದಲೋ, ಸರಕಾರದ ಧೋರಣೆಯನ್ನು ಬೆಂಬಲಿಸಿದ್ದ ಕಾರಣಕ್ಕೋ ಅಥವಾ ಪಕ್ಷದ ಗೆಲುವಿಗೆ ಶ್ರಮಿಸಿದ ಸಾರ್ವಜನಿಕ ವ್ಯಕ್ತಿ, ಗುಂಪು ಅಥವಾ ನಾಯಕರಾಗಿದ್ದಾರೆಂಬ ಕಾರಣಕ್ಕೋ ರಾಜ್ಯಸಭೆಯ ಸದಸ್ಯತ್ವವನ್ನು ಹೊಂದಿರುವ ಸಾಧ್ಯತೆಗಳುಂಟು. ಎಲ್ಲೋ ಜನಪರ ಕೆಲಸಮಾಡಿದ, ಸಾಮಾಜಿಕ ಕಳಕಳಿ ಹೊಂದಿದ ವ್ಯಕ್ತಿಗಳಿದ್ದರೂ ಅವರ ವಿಚಾರಗಳನ್ನು ಬೆಂಬಲಿಸಿ ಸಹಕರಿಸುವವರೂ ಬಹಳ ವಿರಳ. ಅವರ ಮಾತನ್ನು ಸದನದಲ್ಲಿ ಗಮನಿಸದೇ ಇರಬಹುದು. ಎಷ್ಟೋ ಸಂದರ್ಭಗಳಲ್ಲಿ ಮಹಿಳೆಯರ ವಿಷಯಗಳಿಗೆ ಸಂಬಂಧಿಸಿದ ಚರ್ಚೆ, ಮಸೂದೆಗಳು ಪರಿಗಣನೆಗೆ ಬಾರದೇ ನೆನೆಗುದಿಗೆ ಬಿದ್ದಿವೆ. ಉದಾಹರಣೆಗೆ ಮಹಿಳಾ ಮೀಸಲಾತಿಯಂತಹ ವಿಷಯಗಳು.

೪. ಆದರೂ ೧೯೭೦ರ ದಶಕದಿಂದೀಚೆಗೆ ಎಡಪಂಥೀಯ ಸಂಘಟನೆಗಳೊಂದಿಗೆ ಮಹಿಳಾ ಸಂಘಟನೆಗಳು ಕೂಡಿ ಅನೇಕ ಹೋರಾಟಗಳನ್ನು ಹಮ್ಮಿಕೊಂಡು ಯಶಸ್ವಿಯಾದ ಬೆನ್ನಲ್ಲೇ ರಾಜ್ಯಸಭೆಗೆ ಮಹಿಳಾ ಪರವಾಗಿ ಧ್ವನಿ ಎತ್ತುವ ಸ್ತ್ರೀಯನ್ನು ಸದಸ್ಯರಾಗಿ ನಾಮಕರಣ ಮಾಡುವ ಪರಿಪಾಠ ಜಾರಿಗೆ ಬಂದಿತು. ೧೯೫೨ರಲ್ಲಿ ಭಾರತದಲ್ಲಿ ನಡೆದ ಮೊದಲ ಸಾರ್ವತ್ರಿಕ ಚುನಾವಣೆಯಲ್ಲಿ ಹಲವಾರು ಕಮ್ಯುನಿಸ್ಟ್ ಮಹಿಳೆಯರು ಲೋಕಸಭೆಗೆ ಚುನಾಯಿತರಾಗಿ, ಮಹಿಳೆ ಹಕ್ಕುಗಳಿಗೆ ಸಂಬಂಧಿಸಿದ ಶಾಸನಗಳನ್ನು ಚರ್ಚಿಸಿ, ಮಸೂದೆ ಅಂಗೀಕಾರವಾಗುವಂತೆ ಶ್ರಮಿಸಿದ್ದರು. ಇಂದಿಗೂ ಆ ಗುರುತರ ಹೊಣೆಗಾರಿಕೆಯನ್ನು ಮುಂದುವರಿಸಿಕೊಂಡು ಹೋಗುವ ಮಹಿಳಾ ಸಂಘಟನೆ ಅಗತ್ಯತೆ ಇದೆ. ಅದು ರಾಜ್ಯಸಭೆಯಂತಹ ಸದನದಲ್ಲಿಯೂ ಪ್ರಾತಿನಿಧ್ಯದ ಪಾಲು ಮಹಿಳೆ ಪಡೆಯಬೇಕಾಗಿದೆ.

ಈಚೆಗಿನ ವರ್ಷಗಳಲ್ಲಿ ರಾಜ್ಯಸಭೆಗೆ ಮಹಿಳೆಯರನ್ನು ನಾಮಕರಣ ಮಾಡುವ ಪದ್ಧತಿ ಹಿಂದಿಗಿಂತಲೂ ತುಸು ಭಿನ್ನವಾಗಿಯೇ ಇದೆ. ಇಲ್ಲಿ ನಾಮಕರಣಗೊಂಡ ಸದಸ್ಯರು, ನಾಮಕರಣಗೊಳ್ಳುತ್ತಿರುವ ಸದಸ್ಯರು ಬಹುತೇಕ ಗ್ಲಾಮರ್ ಇರುವ ನಾಯಕಿಯರೇ. ಅದರಲ್ಲೂ ಸಿನಿಮಾ ನಟಿಯರನ್ನು ಸದಸ್ಯರಾಗಿ ಆಯ್ಕೆ ಮಾಡಲಾಗುತ್ತಿದೆ. ಹಾಗೆಯೇ ಕ್ರೀಡೆಗಳಲ್ಲಿ ಮಿನುಗಿದ ತಾರೆಯರನ್ನು ರಾಜ್ಯಸಭೆಗೆ ನಾಮಕರಣ

ಮಾಡಲಾಗುತ್ತಿದೆ. ಸಾಮಾಜಿಕ ಚಳುವಳಿಗಳಲ್ಲಿ ತೊಡಗಿಸಿಕೊಂಡ, ಸ್ತ್ರೀಪರ ಚಿಂತನೆಗೆ ದುಡಿದ ಮಹಿಳಾ ಹೋರಾಟಗಾರರನ್ನು, ಸಾಹಿತಿಗಳನ್ನು ಕೂಡಾ ಮೇಲ್ಮನೆಗೆ ಸದಸ್ಯರಾಗಿ ನಾಮಕರಣ ಮಾಡಿದ್ದು ಇದೆ. ಈ ಎಲ್ಲ ಭಿನ್ನ ನೆಲೆಗಳಿಂದ ಬಂದ ಮಹಿಳಾ ಸದಸ್ಯರು ರಾಜ್ಯಸಭೆಯಲ್ಲಿದ್ದು, ತಮ್ಮ ಪ್ರಾತಿನಿಧ್ಯವನ್ನು ಎಷ್ಟರಮಟ್ಟಿಗೆ ಬಳಸಿಕೊಂಡಿದ್ದಾರೆ ಅಥವಾ ಉಳಿಸಿಕೊಂಡಿದ್ದಾರೆ? ಎನ್ನುವುದು ಚರ್ಚಿಸುವ ವಿಷಯ. ಇವರು ಕಂಡ ಸಾಫಲ್ಯ ಏನು? ಎಷ್ಟು? ಎಂಬಿತ್ಯಾದಿ ಗೊಂದಲುಗಳು ಚರ್ಚೆಗೆ ಗ್ರಾಸವಾಗಿವೆ. ಬಣ್ಣದ ಬದುಕಿನ, ಕನಸುಗಳ ಕಾಲ್ಪನಿಕ ಲೋಕದಲ್ಲಿ ಮಿನುಗಿದ ಚಿತ್ರ ನಟಿ / ತಾರೆಯರು ನಿಜಜೀವನದಲ್ಲಿ ಮಹಿಳೆಯರ ಸಮಸ್ಯೆಗಳನ್ನು ಎಷ್ಟರ ಮಟ್ಟಿಗೆ ಸದನದಲ್ಲಿರುವ ಸದಸ್ಯರಿಗೆ ಮನಮುಟ್ಟುವಂತೆ ಸಮರ್ಥಿಸಲು ಸಾಧ್ಯವಾಗಿದೆ? ಅಥವಾ ಶಬನಾ ಆಜ್ಮಿಯಂತಹ ಮಹಿಳಾಪರ ಹೋರಾಟಗಾರ್ತಿ, ಸಾಮಾಜಿಕ ಕಳಕಳಿಯುಳ್ಳ ಸದಸ್ಯೆಯರು ವಾದಿಸುವ ವಿಚಾರಗಳನ್ನು ಬೆಂಬಲಿಸುವ ಸದಸ್ಯರಾಗಲೀ, ಪಕ್ಷಗಳಾಗಲಿ ಇವೆಯೇ? ಎಂಬುದು ದೊಡ್ಡ ಪ್ರಶ್ನೆ. ಇದಕ್ಕೊಂದು ಉದಾಹರಣೆ ಇತ್ತೀಚೆಗೆ ಸಂಸತ್ತಿನಲ್ಲಿ ಮಹಿಳಾ ಮೀಸಲಾತಿ ಮಸೂದೆ ಕುರಿತು ನಡೆದ ಚರ್ಚೆ. ಇದರಲ್ಲಿ ಭಾಗವಹಿಸಿದ ರಾಜಕೀಯ ಪಕ್ಷಗಳಾಗಲೀ, ಸದಸ್ಯರಾಗಲೀ, ಮಹಿಳಾ ಸದಸ್ಯೆಯರಾಗಲೀ ಒಮ್ಮತಕ್ಕೆ ಬರುವಲ್ಲಿ ವಿಫಲರಾಗಿದ್ದಾರೆ. ಸಮಾಜವಾದಿ ಮುಖಂಡ ಶ್ರೀ ಮುಲಾಯಂಸಿಂಗ್ ಯಾದವ್‌ರು ಮಹಿಳಾ ಮೀಸಲಾತಿ ಪ್ರಶ್ನೆ ಬಂದಾಗ ಅಲ್ಲಿಯೂ ಜಾತಿವಾರು ಮೀಸಲಾತಿ ಬೇಕು ಎಂಬ ವಾದ ಪ್ರಜಾಸತ್ತಾತ್ಮಕವಾಗಿದ್ದರೂ ತೃಣಮೂಲ ಕಾಂಗ್ರೆಸ್‌ನ ನಾಯಕಿ ಶ್ರೀಮತಿ ಮಮತಾ ಬ್ಯಾನರ್ಜಿ ವಿರೋಧಿಸಿದ್ದು ಅಪಾರ್ಥಕ್ಕೆಡೆ ಮಾಡಿತ್ತು. ಚರ್ಚೆ ಅಲ್ಲಿಗೆ ನೆನೆಗುದಿಗೆ ಬಿತ್ತು.

ರಾಜ್ಯಸಭೆಯಂತಹ ಸದನದಲ್ಲಿ ಮಹಿಳೆಯರ ಪ್ರವೇಶವೇ ಕಷ್ಟದಾಯಕವಾಗಿರುವಾಗ ಅದರ ಸಭಾಪತಿ ಅಥವಾ ಉಪಸಭಾಪತಿಯಾಗುವುದು ದೂರದ ಮಾತು. ಈ ಮಾತು ಹೇಳುತ್ತಿರುವಂತೆಯೇ ಡಾ. ನಜ್ಮಾ ಹೆಪ್ತುಲ್ಲಾ ಎಂಬ ಮಹಿಳೆ ರಾಜ್ಯಸಭೆಯ ಉಪ ಸಭಾಪತಿಯಾಗಿರುವುದು ನಮ್ಮ ಕಣ್ಮುಂದೆ ಬಂದು ನಿಲ್ಲುತ್ತದೆ. ಶ್ರೀಮತಿ ನಜ್ಮಾ ಹೆಪ್ತುಲ್ಲಾ ಆ ಸ್ಥಾನವನ್ನು ಹೊಂದಿರುವುದು ಕೂಡ ಆಕಸ್ಮಿಕವೆನಿಸದಿರದು, ಇದರ ಹಿಂದಿನ ಹಿನ್ನೆಲೆಗಳು ಆಕೆಯನ್ನು ಮಹಿಳೆ ಎನ್ನುವುದಕ್ಕಿಂತ ಕುಟುಂಬ, ವರ್ಗ, ಧರ್ಮ, ಜಾತಿ ಇತ್ಯಾದಿ ಅಂಶಗಳೇ ನಿರ್ಧಾರಕವಾಗಿರುತ್ತವೆ. ಇನ್ನು ಕರ್ನಾಟಕದಿಂದ ರಾಜ್ಯಸಭೆಗೆ (೧೨ ಜನ ಸದಸ್ಯರು) ಆಯ್ಕೆಯಾದವರಲ್ಲಿ ಬಳ್ಳಾರಿ ಜಿಲ್ಲೆಯಿಂದ ಯಾವೊಬ್ಬ ಮಹಿಳೆಯರೂ ಇಲ್ಲವೆಂದು ಹೇಳಬೇಕಾಗುತ್ತದೆ.

### ಆ. ಲೋಕಸಭೆ ಮತ್ತು ಮಹಿಳೆ

ಸಂಸತ್ತಿನ ಕೆಳಮನೆಯಾದ ಲೋಕಸಭೆಯು ಜನರಿಂದ ನೇರವಾಗಿ ಆಯ್ಕೆಯಾದ ಸದಸ್ಯರನ್ನು ಒಳಗೊಂಡಿರುತ್ತದೆ. ಸಾರ್ವತ್ರಿಕ ವಯಸ್ಕ ಮತದಾನದ ಪದ್ಧತಿಯ ಮೂಲಕ ಈ ಸದಸ್ಯರು ಆಯ್ಕೆಗೊಂಡಿರುತ್ತಾರೆ. ಇವರು ನಿಜವಾದ ಜನಪ್ರತಿನಿಧಿಗಳು. ಜನರಿಗೆ ರಾಷ್ಟ್ರಕ್ಕೆ ನೇರವಾಗಿ ಹೊಣೆಗಾರರಾಗಿರುತ್ತಾರೆ. ಸಂವಿಧಾನದ ಕಲಂ (೮೧)ರಡಿ ಲೋಕಸಭೆಯ ೫೩೦ ಸದಸ್ಯರು ರಾಜ್ಯಗಳ ಮತದಾರರ ಕ್ಷೇತ್ರಗಳಿಂದ ಪ್ರಜೆಗಳಿಂದ ನೇರವಾಗಿ

ಚುನಾವಣೆ ಮೂಲಕ ಆಯ್ಕೆಯಾದ ಸದಸ್ಯರು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಂದ ೨೦ ಸದಸ್ಯರು ಪ್ರತಿನಿಧಿಸಿರುತ್ತಾರೆ. ಜೊತೆಗೆ ಸಂವಿಧಾನ ೩೩೧ ಕಲಂನಡಿ Anglo- Indian Community ಸಮುದಾಯದಿಂದ ೨ ಸದಸ್ಯರು ಪ್ರತಿನಿಧಿಸುವಂತೆ ರಾಷ್ಟ್ರಪತಿಯವರು ನಾಮಕರಣ ಮಾಡುತ್ತಾರೆ. ಸಂಸತ್ತು ಎಂದರೆ ಸಾಮಾನ್ಯವಾಗಿ ಲೋಕಸಭೆ ಎಂದೇ ಕರೆಯಲಾಗುತ್ತದೆ. ಏಕೆಂದರೆ ಲೋಕಸಭೆಯು ಸಂವಿಧಾನದ ಪ್ರಕಾರ ಶಾಸನಗಳನ್ನು ರೂಪಿಸುವ, ತಿದ್ದುಪಡಿಮಾಡುವ, ಬದಲಿಸುವ ಅಥವಾ ತೆಗೆದುಹಾಕುವ ಅಧಿಕಾರವನ್ನು ಹೊಂದಿದೆ. ಇದು ಖಚಿತವಾಗಿ ಶಾಸನ ರೂಪಿಸುವ ಸದನವಾಗಿದೆ. ಆದರೆ ಇದು ಬ್ರಿಟನ್ನಿನ ಸಂಸತ್ತಿನಷ್ಟು ಪ್ರಬಲವಾದುದಲ್ಲ. ನಮ್ಮ ಸಂವಿಧಾನ ಲಿಖಿತವಾಗಿದ್ದು, ಅತ್ತ ಕಠಿಣವೂ ಅಲ್ಲದ ಸರಳವೂ ಅಲ್ಲದ ಸಂವಿಧಾನವಾಗಿದೆ. ಬ್ರಿಟನ್ ಸಂಸತ್ತು ಎಲ್ಲವನ್ನು ಮಾಡಬಲ್ಲದು ಅಂದರೆ ಬ್ರಿಟನ್ ಸಂಸತ್ತು ಗಂಡನ್ನು ಹೆಣ್ಣಾಗಿ, ಹೆಣ್ಣನ್ನು ಗಂಡಾಗಿ ಮಾಡುವುದು ಹೊರತುಪಡಿಸಿ ಉಳಿದೆಲ್ಲವನ್ನು ಮಾಡುತ್ತದೆ. ಆದರೆ ನಮ್ಮ ಸಂಸತ್ತಿನ ಕಾನೂನುಗಳನ್ನು ನ್ಯಾಯ ವಿಮರ್ಶೆಗೊಳಪಡಿಸುವ (Judicial Review) ಅವಕಾಶ ಸಂವಿಧಾನಬದ್ಧವಾಗಿ ನ್ಯಾಯಾಂಗಕ್ಕೆ ನೀಡಿರುವುದರಿಂದ ಕೇಂದ್ರ ಶಾಸಕಾಂಗವು ಸಂವಿಧಾನ ಬಾಹಿರವಾದ ಕಾನೂನು ರಚಿಸುವ ಅಧಿಕಾರವಿಲ್ಲ.

ಲೋಕಸಭೆಯ ಸದಸ್ಯರನ್ನು ಆರಿಸುವ ಚುನಾವಣೆಗಳಲ್ಲಿ ೧೮ ವರ್ಷ ವಯಸ್ಸಿನ ಪ್ರತಿ ಭಾರತೀಯ ಪೌರನು ತನ್ನ ಮತದಾನದ ಹಕ್ಕನ್ನು ಚಲಾಯಿಸಲು ಅವಕಾಶ ಹೊಂದಿದ್ದಾನೆ. ಈ ಸದನದ ಸದಸ್ಯನಾಗಬಯಸುವ ಅಭ್ಯರ್ಥಿಯು ೨೫ ವರ್ಷ ವಯಸ್ಸಿನವನಾಗಿರಬೇಕು. ಲೋಕಸಭೆಯಲ್ಲಿ ರಾಜ್ಯಗಳ ಮತ್ತು ಕೇಂದ್ರಾಡಳಿತ ಪ್ರದೇಶಗಳ ಸದಸ್ಯರಲ್ಲಿ ಮೀಸಲಾತಿಯನ್ವಯ ಸಂಖ್ಯೆಯನ್ನು ಕಾಯ್ದಿರಿಸಲಾಗುವುದು. ಇಲ್ಲಿ SC/ST ಗಳ ಮೀಸಲಾತಿ ಮಾತ್ರ ಸೇರಿಸಲಾಗಿದೆ. ಮಹಿಳಾ ಮೀಸಲಾತಿಯ ಧ್ವನಿ ಪಾರ್ಲಿಮೆಂಟಿನಲ್ಲಿ ಮೊಳಗಿದ್ದರೂ ಅದು ನೆನೆಗುದಿಗೆ ಬಿದ್ದಿದೆ. ಅಧಿಕಾರ ರಾಜಕಾರಣದ ಕೆಳಸ್ತರದ ಸಂಸ್ಥೆಗಳಲ್ಲಿ ಮಾತ್ರ ಮಹಿಳಾ ಮೀಸಲಾತಿ ಜಾರಿಯಿರುವುದನ್ನು ಗಮನಿಸಬಹುದು. ಅದಕ್ಕೆ ನೀಡುವ ಸಬೂಬು ಎಂದರೆ ಮಹಿಳೆ ಇನ್ನೂ ಇಂತಹ ಕೆಳಸ್ತರಗಳ ಸಂಸ್ಥೆಗಳಲ್ಲಿ ತರಬೇತಿ ಹೊಂದಿದರೆ ಮುಂದಿನ ದಾರಿ ಸುಗಮ ಎಂಬುದು ಪುರುಷ ನೆಲೆಯ ವಿಚಾರದ ಸಮರ್ಥನೆಯಾಗಿದೆ.

ಲೋಕಸಭೆಯ ಕ್ಷೇತ್ರಗಳ (ಸದಸ್ಯರ) ಮರುವಿಂಗಡನೆಗೆ ಅಥವಾ ಹೆಚ್ಚಳವನ್ನು ಸಂವಿಧಾನದ ೮೨ರ ಕಲಂ ಅನ್ವಯ ಪ್ರತಿ ಜನಗಣತಿಯ ನಂತರ ಸಂಸತ್ತಿನ ಶಾಸನನುಸಾರವಾಗಿ ಮಾಡಲು ಅವಕಾಶವಿದೆ. ಆದರೆ ಈ ಪ್ರಕ್ರಿಯೆ ಸಂಸತ್ತಿನ ವಿಸರ್ಜನೆಯ ನಂತರವಷ್ಟೇ ನಡೆಯತಕ್ಕದ್ದು. ಈ ಬಗ್ಗೆ ರಾಷ್ಟ್ರಪತಿಗಳು ಅಧಿಕೃತ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಕ್ಷೇತ್ರಗಳ ಮರುವಿಂಗಡಣೆ ಕಾರ್ಯ ಜರುಗಿಸಬೇಕು. ಸಂಸತ್ತಿನ ಅಧಿವೇಶನವಿದ್ದಾಗ ಇಂತಹ ಯಾವುದೇ ಕ್ರಮಗಳನ್ನು ನಡೆಸುವಂತಿಲ್ಲ. ಏಕೆಂದರೆ ಹಾಲಿ ಸಂಸತ್ ಸದಸ್ಯರ ಜವಾಬ್ದಾರಿಯುತ ಕೆಲಸ ನಿರ್ವಹಿಸುವಲ್ಲಿ ತಡೆಯನ್ನುಂಟು ಮಾಡಿದಂತಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳತಕ್ಕದ್ದು. ಬಳ್ಳಾರಿ ಜಿಲ್ಲೆಯ ಎರಡು ಏಕ ಸಂಸತ್ ಸದಸ್ಯರ ಕ್ಷೇತ್ರಗಳಾಗಿ ವಿಂಗಡಣೆಗೊಂಡಿದೆ.

(ಈಗಲೂ ಜಿಲ್ಲೆಯ ಕ್ಷೇತ್ರವಾರು ಎರಡು ಲೋಕಸಭೆ ಸದಸ್ಯರ ಕ್ಷೇತ್ರಗಳಾಗಿ ಹಂಚಿಕೆಯಾಗಿದೆ) ಬಳ್ಳಾರಿ ಲೋಕಸಭೆ ಹಾಗೂ ಕೊಪ್ಪಳ ಲೋಕಸಭೆ ಎಂದು ವಿಂಗಡಣೆಯಾಗಿ, ಆಗಿನ ಮೈಸೂರು ಶಾಸನಸಭೆಗೆ ಎಂಟು ಕ್ಷೇತ್ರಗಳನ್ನು ಸೂಚಿಸಲಾಗಿತ್ತು. Delimitation of Parliamentary and Assembly Constituencies order, ೧೯೫೬ರನ್ವಯ ಬಳ್ಳಾರಿ ಜಿಲ್ಲೆಯ ಪ್ರದೇಶವನ್ನು ಲೋಕಸಭೆ ಹಾಗೂ ವಿಧಾನಸಭೆಗೆ ವಿಂಗಡಿಸಿದ ಪ್ರದೇಶವಾರು ಪಟ್ಟಿಯನ್ನು ಗಮನಿಸೋಣ.

| ಕ್ರ.ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವ್ಯಾಪ್ತಿ | ಒಟ್ಟು ಸ್ಥಾನಗಳ ಸಂಖ್ಯೆ |
|---|---|---|---|
| | | **ಲೋಕಸಭೆ** | |
| ೧. | ಕೊಪ್ಪಳ | ರಾಯಚೂರು ಜಿಲ್ಲೆಯ ಕೊಪ್ಪಳ, ಯಲಬುರ್ಗಾ, ಕುಷ್ಟಗಿ, ಸಿಂಧನೂರು ಮತ್ತು ಗಂಗಾವತಿ ತಾಲೂಕು. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕು, ಮಲ್ಲಾಪುರಂ ಉಪ ತಾಲೂಕು, ಸಿರುಗುಪ್ಪ ತಾಲೂಕು ಮತ್ತು ಹೊಸಪೇಟೆ ತಾಲೂಕು (ಕಮಲಾಪುರ ಫಿರ್ಕಾವನ್ನು ಹೊರತುಪಡಿಸಿ) ಮತ್ತು ಕಂಪ್ಲಿ ಫಿರ್ಕಾದ ೧೦ ಗ್ರಾಮಗಳು (ಅನುಬಂಧದ (೧೬)ನೇ ಐಟಂನಲ್ಲಿ ಸೂಚಿಸಿದ) | ೧ |
| ೨. | ಬಳ್ಳಾರಿ | ಬಳ್ಳಾರಿ, ಸಂಡೂರು, ಹರಪನಹಳ್ಳಿ ಮತ್ತು ಕೂಡ್ಲಿಗಿ ತಾಲೂಕು ಮತ್ತು ಹೊಸಪೇಟೆ ತಾಲೂಕಿನ ಕಮಲಾಪುರ ಫಿರ್ಕಾ (ಕಂಪ್ಲಿ ಫಿರ್ಕಾದ ೧೦ ಗ್ರಾಮಗಳನ್ನು ಹೊರತುಪಡಿಸಿ. ಅನುಬಂಧದ (೧೬)ನೇ ಐಟಂನಲ್ಲಿ ಸೂಚಿಸಿದ) ಮತ್ತು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ಚಳ್ಳಕೆರೆ ಮತ್ತು ಜಗಳೂರು ತಾಲೂಕುಗಳು ಮತ್ತು ತುರುವನೂರು ಹೋಬಳಿ ಮತ್ತು ಚಿತ್ರದುರ್ಗ ತಾಲೂಕಿನ ಭರಮಸಾಗರ ಹೋಬಳಿಯ ಭರಮಸಾಗರ ಮತ್ತು ಯಲಗೋಡು ಕೇಂದ್ರಗಳು | ೧ |

## ವಿಧಾನಸಭೆ

| ಕ್ರ.ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವ್ಯಾಪ್ತಿ | ಒಟ್ಟು ಸ್ಥಾನಗಳ ಸಂಖ್ಯೆ |
|---|---|---|---|
| ೧. | ಹಡಗಲಿ | ಹಡಗಲಿ ತಾಲೂಕು ಮತ್ತು ಹೊಸಪೇಟೆ ತಾಲೂಕಿನ ಚಿಲಕನಹಟ್ಟಿ ಫಿರ್ಕಾ | ೧ |
| ೨. | ಹೊಸಪೇಟೆ | ಹೊಸಪೇಟೆ ತಾಲೂಕಿನ ಹೊಸಪೇಟೆ ಫಿರ್ಕಾ ಮತ್ತು ತುಂಗಭದ್ರಾ ಅಚ್ಚುಕಟ್ಟು ಪ್ರದೇಶದ ಟೌನಶಿಪ್ ಮತ್ತು ಮಲ್ಲಾಪುರಂ ಉಪತಾಲೂಕು. | ೧ |
| ೩. | ಶಿರುಗುಪ್ಪ | ಶಿರುಗುಪ್ಪ ತಾಲೂಕು; ಹೊಸಪೇಟೆ ತಾಲೂಕಿನ (ಅನುಬಂಧದ (೩೩)ನೇ ಐಟಂನಲ್ಲಿ ಸೂಚಿಸಿದೆ) ಕಂಪ್ಲಿ ಫಿರ್ಕಾದ ಹಳ್ಳಿಗಳು | ೧ |
| ೪. | ಕುರುಗೋಡು | ಬಳ್ಳಾರಿ ತಾಲೂಕಿನ ಕುರುಗೋಡು, ಕೋಳೂರು ಮತ್ತು ಮೋಕಾ ಫಿರ್ಕಾ; ಹೊಸಪೇಟೆ ತಾಲೂಕಿನ (ಅನುಬಂಧ (೩೩)ನೇ ಐಟಂನಲ್ಲಿ ಸೂಚಿಸಿದ ಹಳ್ಳಿಗಳನ್ನು ಹೊರತುಪಡಿಸಿ) ಕಂಪ್ಲಿ ಫಿರ್ಕಾ | ೧ |
| ೫. | ಬಳ್ಳಾರಿ | ಬಳ್ಳಾರಿ ತಾಲೂಕಿನ ಬಳ್ಳಾರಿ ಮತ್ತು ರೂಪನಗುಡಿ ಫಿರ್ಕಾಗಳು. | ೧ |
| ೬. | ಸಂಡೂರು | ಸಂಡೂರು ತಾಲೂಕು; ಕೂಡ್ಲಿಗಿ ತಾಲೂಕಿನ ಗುಡೇಕೋಟೆ ಫಿರ್ಕಾ; ಹೊಸಪೇಟೆ ತಾಲೂಕಿನ ಕಮಲಾಪುರಂ ಫಿರ್ಕಾ. | ೧ |
| ೭. | ಹರಪನಹಳ್ಳಿ | ಗುಡೇಕೋಟೆ ಫಿರ್ಕಾವನ್ನು ಹೊರತುಪಡಿಸಿ ಹರಪನಹಳ್ಳಿ ತಾಲೂಕು ಮತ್ತು ಕೂಡ್ಲಿಗಿ ತಾಲೂಕು | ೨ |

ಆಧಾರ : (ಮೈಸೂರು ಸ್ಟೇಟ್ ಗ್ಯಾಸಿಟಿಯರ್, ೧೯೭೨)

ಈ ಎಲ್ಲಾ ಕ್ಷೇತ್ರಗಳ ಪೈಕಿ ಹರಪನಹಳ್ಳಿ ಕ್ಷೇತ್ರ ಮಾತ್ರ ಇಬ್ಬರು ಸದಸ್ಯರನ್ನು ಹೊಂದಿತ್ತು. ಅದರಲ್ಲಿ ಒಂದನ್ನು ಪರಿಶಿಷ್ಟ ಜಾತಿ ಅಭ್ಯರ್ಥಿಗೆ ಮೀಸಲಾಗಿಸಿತ್ತು. ಆದರೆ ಈ ಕ್ಷೇತ್ರದ ಇಬ್ಬರು ಸದಸ್ಯರ ನಿಯಮಾವಳಿಯನ್ನು ೧೯೬೧ರಲ್ಲಿ ಚುನಾವಣಾ ಆಯೋಗವು ಬದಲಿಸಿತು. ಅದರಂತೆ Delimitation of Parliamentary and Assembly Constituencies order, ೧೯೬೧ (Deer-೧೯೬೧)ರಡಿ ಹರಪನಹಳ್ಳಿ ಕ್ಷೇತ್ರವನ್ನು ಎರಡು ಪ್ರತ್ಯೇಕ ಏಕಸದಸ್ಯ ಚುನಾವಣಾ ಕ್ಷೇತ್ರವಾಗಿ ವಿಭಜಿಸಿ, ಒಂದು ಕೂಡ್ಲಿಗಿ ಕ್ಷೇತ್ರವೆಂದು ಇನ್ನೊಂದು ಹರಪನಹಳ್ಳಿ ಕ್ಷೇತ್ರವಾಗಿ ಅಧಿಸೂಚನೆ ಹೊರಡಿಸಲಾಯಿತು. ಆ ನಂತರದಲ್ಲಿ ಕೂಡ್ಲಿಗಿ ಕ್ಷೇತ್ರವನ್ನು SC ಅಭ್ಯರ್ಥಿಗೆ ಕಾಯ್ದಿರಿಸಲಾಗಿತ್ತು. ಈ ಮೀಸಲಾತಿ ಕ್ಷೇತ್ರವನ್ನು ಪುನಃ ಕೂಡ್ಲಿಗಿಯಿಂದ ಅವಿಭಜಿತ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಗೆ ವರ್ಗಾಯಿಸಲಾಯಿತು. ಈವರೆಗೂ ೧೯೯೯ರ ಚುನಾವಣೆಗಳಲ್ಲಿ ಅದು ಪರಿಶಿಷ್ಟ ಜಾತಿಗೇ ಮೀಸಲಿರಿಸಿದೆ.

ಬಳ್ಳಾರಿ ಜಿಲ್ಲೆಯ ಲೋಕಸಭೆ ಹಾಗೂ ವಿಧಾನಸಭೆ ಕ್ಷೇತ್ರಗಳ ವಿಂಗಡಣೆಯನ್ನು ೧೯೬೧ರ Delimitation of Parliamentary and Assembly Constituencies oredrನಂತೆ ಹೀಗೆ ಗುರುತಿಸಲ್ಪಟಿತು.

**ಲೋಕಸಭಾ ಕ್ಷೇತ್ರಗಳು**

| ಕ್ರ.ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವ್ಯಾಪ್ತಿ |
|---|---|---|
| ೧. | ಕೊಪ್ಪಳ | ರಾಯಚೂರು ಜಿಲ್ಲೆಯ ಸಿಂಧನೂರು, ಕುಷ್ಟಗಿ, ಯಲಬುರ್ಗಾ, ಕೊಪ್ಪಳ ಮತ್ತು ಗಂಗಾವತಿ, ವಿಧಾನಸಭಾ ಕ್ಷೇತ್ರಗಳು; ಬಳ್ಳಾರಿ ಜಿಲ್ಲೆಯ ಹಡಗಲಿ, ಹೊಸಪೇಟೆ ಮತ್ತು ಶಿರುಗುಪ್ಪ ವಿಧಾನಸಭಾ ಕ್ಷೇತ್ರಗಳು |
| ೨. | ಬಳ್ಳಾರಿ | ಬಳ್ಳಾರಿ ಜಿಲ್ಲೆಯ ಕುರುಗೋಡು, ಬಳ್ಳಾರಿ ಸಂಡೂರು; ಹರಪನಹಳ್ಳಿ ಮತ್ತು ಕೂಡ್ಲಿಗಿ ವಿಧಾನಸಭಾ ಕ್ಷೇತ್ರಗಳು. |

**ವಿಧಾನಸಭಾ ಕ್ಷೇತ್ರಗಳು**

| ಕ್ರ.ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವ್ಯಾಪ್ತಿ |
|---|---|---|
| ೧. | ಹಡಗಲಿ | ಹಡಗಲಿ ತಾಲೂಕು; ಹೊಸಪೇಟೆ ತಾಲೂಕಿನ ಚಿಲಕನಹಟ್ಟಿ ಫಿರ್ಕಾ ಮತ್ತು ಮಲ್ಲಾಪುರಂ ತಾಲೂಕಿನ ಗಡ್ಡಿಕೇರಿ - ಕೋಡಿಹಳ್ಳಿ ಗ್ರಾಮಗಳು |
| ೨. | ಹೊಸಪೇಟೆ | ಹೊಸಪೇಟೆ ತಾಲೂಕಿನ ಹೊಸಪೇಟೆ ಫಿರ್ಕಾ ಮತ್ತು ತುಂಗಭದ್ರಾ ಅಚ್ಚುಕಟ್ಟು ಪ್ರದೇಶದ ಟೌನಶಿಪ್; ಮಲ್ಲಾಪುರಂ ತಾಲೂಕು (ಗುಡ್ಡಿಕೇರಿ - ಕೋಡಿಹಳ್ಳಿ ಗ್ರಾಮಗಳನ್ನು ಹೊರತುಪಡಿಸಿ) |
| ೩. | ಶಿರುಗುಪ್ಪ | ಶಿರುಗುಪ್ಪ ತಾಲೂಕು ಮತ್ತು ಹೊಸಪೇಟೆ ತಾಲೂಕಿನ ಕಂಪ್ಲಿ ಫಿರ್ಕಾದ ಗ್ರಾಮಗಳು (ಅನುಬಂಧದ (೩೮)ನೇ ಐಟಂನಲ್ಲಿ ಸೂಚಿಸಿದ ಹಳ್ಳಿಗಳು) |
| ೪. | ಕುರುಗೋಡು | ಬಳ್ಳಾರಿ ತಾಲೂಕಿನ ಕುರುಗೋಡು, ಕೋಳೂರು ಮತ್ತು ಮೋಕಾ ಫಿರ್ಕಾಗಳು; ಹೊಸಪೇಟೆ ತಾಲೂಕಿನ ಕಂಪ್ಲಿ ಫಿರ್ಕಾ (ಅನುಬಂಧದ (೩೮)ನೇ ಐಟಂನಲ್ಲಿ ಸೂಚಿಸಿದ ಗ್ರಾಮಗಳನ್ನು ಹೊರತುಪಡಿಸಿ) |
| ೫. | ಬಳ್ಳಾರಿ | ಬಳ್ಳಾರಿ ತಾಲೂಕಿನ ಬಳ್ಳಾರಿ ಮತ್ತು ರೂಪನಗುಡಿ ಫಿರ್ಕಾಗಳು |
| ೬. | ಸಂಡೂರು | ಸಂಡೂರು ತಾಲೂಕು; ಕೂಡ್ಲಿಗಿ ತಾಲೂಕಿನ ಗುಡೇಕೋಟೆ ಫಿರ್ಕಾ; ಮತ್ತು ಹೊಸಪೇಟೆ ತಾಲೂಕಿನ ಕಮಲಾಪುರ ಫಿರ್ಕಾ. |
| ೭. | ಹರಪನಹಳ್ಳಿ | ಹರಪನಹಳ್ಳಿ ತಾಲೂಕು |
| ೮. | ಕೂಡ್ಲಿಗಿ (SC) | ಗುಡೇಕೋಟೆ ಫಿರ್ಕಾ ಹೊರತುಪಡಿಸಿ ಕೂಡ್ಲಿಗಿ ತಾಲೂಕು. ಈ ಕ್ಷೇತ್ರವನ್ನು ಪರಿಶಿಷ್ಟ ಜಾತಿ ಅಭ್ಯರ್ಥಿಗೆ ಮೀಸಲಾಗಿರಿಸಿತ್ತು. |

ಆಧಾರ : (ಮೈಸೂರು ಸ್ಟೇಟ್ ಗ್ಯಾಸಿಟಿಯರ್, ೧೯೭೨)

ಹೀಗೆ ಹಲವು ವರ್ಷಗಳವರೆಗೆ ಮೇಲಿನ ಕ್ಷೇತ್ರಗಳಲ್ಲಿ ಯಾವುದೇ ಬದಲಾವಣೆಗಳು ಆಗಲಿಲ್ಲ. ೧೯೫೭ ಮತ್ತು ೧೯೬೨ರ (ಎರಡು ಮತ್ತು ಮೂರನೇ ಸಾರ್ವತ್ರಿಕ ಚುನಾವಣೆಗಳು) ಚುನಾವಣೆಗಳಲ್ಲಿ ಶಿರುಗುಪ್ಪ ತಾಲೂಕು ಕೊಪ್ಪಳ ಲೋಕಸಭಾಕ್ಷೇತ್ರದ ವ್ಯಾಪ್ತಿಗೊಳಪಟ್ಟಿತ್ತು. ಆದರೆ ೧೯೬೭ರಲ್ಲಿ ನಡೆದ ನಾಲ್ಕನೇ ಸಾರ್ವತ್ರಿಕ ಚುನಾವಣೆಯಲ್ಲಿ ಶಿರುಗುಪ್ಪ ತಾಲೂಕನ್ನು ಕೊಪ್ಪಳ ಕ್ಷೇತ್ರದಿಂದ ಬೇರ್ಪಡಿಸಿ ಬಳ್ಳಾರಿ ಲೋಕಸಭಾಕ್ಷೇತ್ರಕ್ಕೆ ಸೇರಿಸಲಾಗಿತ್ತು. ಈಗಲೂ (೧೯೯೯ರ ಚುನಾವಣೆ) ಅದೇ ಕ್ಷೇತ್ರದ ವ್ಯಾಪ್ತಿಗೊಳಪಟ್ಟಿದೆ.

ಆ ನಂತರದಲ್ಲಿ ಬಳ್ಳಾರಿ ಜಿಲ್ಲೆಯ ವಿಧಾನಸಭೆ ಕ್ಷೇತ್ರಗಳನ್ನು ಹೆಚ್ಚಿಸಲಾಯಿತು. (ಮಲ್ಲಾಪುರಂ ಉಪತಾಲೂಕನ್ನು ರದ್ದುಗೊಳಿಸಿ ಹಗರಿಬೊಮ್ಮನಹಳ್ಳಿ ತಾಲೂಕನ್ನು ರಚಿಸಲಾಗಿತ್ತು) ಕೊಟ್ಟೂರು ವಿಧಾನಸಭಾ ಕ್ಷೇತ್ರವನ್ನು ಕೂಡ್ಲಿಗಿಯಿಂದ ಪ್ರತ್ಯೇಕಿಸಿ ರಚಿಸಲಾಯಿತು. ಹೀಗಾಗಿ ಈ ಜಿಲ್ಲೆಯ ಒಟ್ಟು ವಿಧಾನಸಭಾ ಕ್ಷೇತ್ರಗಳು ೧೯೯೯ರ ಚುನಾವಣೆಯಲ್ಲಿದ್ದಂತೆ ಎಂಟು. ೧೯೯೭ರಲ್ಲಿ ಜಿಲ್ಲೆಗಳ ಮರುವಿಂಗಡಣೆಯಾಗಿ ಹರಪನಹಳ್ಳಿ ದಾವಣಗೆರೆ ಜಿಲ್ಲೆಗೆ ಸೇರಿದ್ದನ್ನು ಇಲ್ಲಿ ಗಮನಿಸಬಹುದು.

ಕರ್ನಾಟಕದಿಂದ ಈಗ ೧೯೯೯ರ ಚುನಾವಣೆಯಲ್ಲಿ ೨೮ ಜನ ಸದಸ್ಯರನ್ನು ಲೋಕಸಭೆಗೆ ಆರಿಸಿ ಕಳುಹಿಸಲಾಗಿದೆ. ಅತಿಹೆಚ್ಚು ಸದಸ್ಯರನ್ನು ಉತ್ತರಪ್ರದೇಶ (ಅವಿಭಜಿತ) ರಾಜ್ಯದಿಂದ ಆರಿಸಿ ಕಳಿಸಲಾಗಿದೆ. ಲೋಕಸಭೆ ಜನರ ಸಾಮಾನ್ಯ ಸದನವಾಗಿದೆ. ಏಕೆಂದರೆ ಇಲ್ಲಿನ ಸದಸ್ಯರು ಜನರಿಂದ ನೇರವಾಗಿ ಚುನಾವಣೆಯ ಮೂಲಕ ಆರಿಸಿ ಬಂದಿರುತ್ತಾರೆ. ಜನರಿಗೆ ನೇರವಾಗಿ ಈ ಸದಸ್ಯರು ಜವಾಬ್ದಾರರಾಗಿರುತ್ತಾರೆ. ಇಡೀ ರಾಷ್ಟ್ರದ ವಿವಿಧ ಸ್ತರದ ಜನಗಳ ಆಸೆ-ಆಕಾಂಕ್ಷೆಗಳ ಈಡೇರಿಕೆ, ಹಿತಾಸಕ್ತಿಗಳ ರಕ್ಷಣೆಗಾಗಿ ಪ್ರತಿನಿಧಿಸುವ ಶಾಸಕಾಂಗ ವಾಗಿರುತ್ತದೆ. ಲೋಕಸಭೆಯ ಕಾಲಾವಧಿ ಐದು ವರ್ಷಗಳು. ಇದರ ಅವಧಿಯನ್ನು ೧೯೭೬ರಲ್ಲಿ (ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನ ಮಂತ್ರಿಯಾಗಿರುವಾಗ) ೪೨ನೇ ಸಂವಿಧಾನ ತಿದ್ದುಪಡಿಯ ಮೂಲಕ ೬ ವರ್ಷಗಳವರೆಗೆ ಹೆಚ್ಚಿಸಲಾಗಿತ್ತು. ಆದರೆ ಜನತಾ ಸರಕಾರವು ೧೯೭೭ರಲ್ಲಿ ೪೪ನೇ ಸಂವಿಧಾನ ತಿದ್ದುಪಡಿಯ ಮೂಲಕ ಅದರ ಅವಧಿಯನ್ನು ಪುನಃ ೫ ವರ್ಷಗಳಿಗೆ ಇಳಿಸಿತು. ಈಗಲೂ ಐದು ವರ್ಷಗಳಿಗೆ ಸಭೆಯ ಅವಧಿ ನಿಗದಿಯಾದಂತೆ ವಿಸರ್ಜನೆಗೊಂಡು ಚುನಾವಣೆಗಳು ನಡೆಯುತ್ತವೆ. ಕೆಲವು ಸಮಯದಲ್ಲಿ ಲೋಕಸಭೆಯನ್ನು ಐದುವರ್ಷದ ಕಾಲಾವಧಿಗಿಂತ ಮುನ್ನವೇ ರಾಷ್ಟ್ರಪತಿಯು ವಿಸರ್ಜಿಸಬಹುದು. ಅಂದರೆ ಕೆಳಮನೆಯಲ್ಲಿ ಬಹುಮತ ಸಾಬೀತುಪಡಿಸಲು ಸರಕಾರ / ಪಕ್ಷವು ವಿಫಲವಾದಲ್ಲಿ (ಅವಿಶ್ವಾಸ ಗೊತ್ತುವಳಿಯಲ್ಲಿ) ಬಹುಮತವನ್ನು ಕಳೆದುಕೊಂಡಿದ್ದಲ್ಲಿ ಕೇಂದ್ರದಲ್ಲಿ ರಾಷ್ಟ್ರಪತಿಯು, ರಾಜ್ಯಗಳಲ್ಲಿ ರಾಜ್ಯಪಾಲರು ಅದೇ ಮಾದರಿಯ ಕಾರ್ಯವನ್ನು, ಕೆಳಮನೆಯನ್ನು ವಿಸರ್ಜಿಸುವ ಮೂಲಕ ನಿರ್ವಹಿಸುವರು.

ಲೋಕಸಭೆಯ ಸದನದ ಕಾರ್ಯ ಕಲಾಪಗಳನ್ನು ನಡೆಸಲು (ಸಭಾಪತಿ ಮತ್ತು ಉಪಸಭಾಪತಿಯನ್ನು) ಚುನಾವಣೆಗಳ ನಂತರ ಸದಸ್ಯರಲ್ಲಿಯೇ ಒಬ್ಬರನ್ನು ಸಭಾಪತಿಯೆಂದು, ಇನ್ನೊಬ್ಬರನ್ನು ಉಪಸಭಾಪತಿಯೆಂದು ಆಯ್ಕೆ ಮಾಡಲಾಗುತ್ತದೆ. ಸಭಾಪತಿಯು ಲೋಕಸಭೆಯ ಅಧಿವೇಶನದ ಅಧ್ಯಕ್ಷತೆ ವಹಿಸುವುದು,

ನಿಯಮಗಳಿಗನುಸಾರವಾಗಿ ಸದನದ ಕಾರ್ಯಕಲಾಪ ನಡೆಸುವುದು, ಕೋರಂ ನಿರ್ಧರಿಸುವುದು, ರೂಲಿಂಗ್ (ನಿರ್ಣಯ) ಕೊಡುವುದು, ಸದಸ್ಯರಿಗೆ ಮಾತನಾಡಲು (ಮಾತೃ ಭಾಷೆಯಲ್ಲಿ) ಅವಕಾಶ ನೀಡುವುದು ಇತ್ಯಾದಿ ಮಹತ್ವದ ಕರ್ತವ್ಯಗಳನ್ನು ನಿರ್ವಹಿಸುವರು. ಸಭಾಪತಿಗಳ ಗೈರು ಹಾಜರಿಯಲ್ಲಿ ಉಪ ಸಭಾಪತಿಗಳು ಕರ್ತವ್ಯಗಳನ್ನು ನಿರ್ವಹಿಸುವರು. ಸಭಾಪತಿ ಅಥವಾ ಸ್ಪೀಕರ್ ಸ್ಥಾನವು ಅತ್ಯಂತ ಗೌರವಾನ್ವಿತ ಸ್ಥಾನವಾಗಿದ್ದು, ಅದನ್ನು ಪ್ರತಿಯೊಬ್ಬನು ಗೌರವಿಸುವಂತಹದ್ದಾಗಿದೆ. Speaker is the Master of the House ಎಂದು ಹೇಳುತ್ತಾರೆ. ಕೆಲವು ಸಂದಿಗ್ಧ ಪ್ರಸಂಗಗಳಲ್ಲಿ Speaker ಪಾತ್ರವು ಅತ್ಯಂತ ನಿರ್ಣಾಯಕವಾಗಿರುತ್ತದೆ. ಆರಂಭದ ಸಂಸತ್ ಸಭೆಯ ವರ್ಷಗಳಲ್ಲಿದ್ದ Speaker ಸ್ಥಾನವು ಈಗ ಕಳೆಗುಂದಿದೆ. ಜಿ.ವಿ.ಮಾವಲ್ಲಂಕರ್, ಅನಂತ ಸಯನಂ ಅಯ್ಯಂಗಾರರಂತಹ ಸಭಾಪತಿಗಳಾಗಿದ್ದ ದಿನಗಳು ಈಗಿಲ್ಲ. ಬರುಬರುತ್ತಾ ಆಳುವ ಪಕ್ಷಗಳು ಸಭಾಪತಿಯವರನ್ನು ತಮ್ಮ ರಾಜಕೀಯ ದುರುದ್ದೇಶಗಳಿಗಾಗಿ ಬಳಸಿಕೊಂಡು, ಆ ಸ್ಥಾನಕ್ಕೆ ಅಗೌರವವನ್ನು ತಂದಿರುವ ವಿಚಾರ ದುರದೃಷ್ಟಕರ. ಬ್ರಿಟನ್ ಸಂಸತ್ತಿನಲ್ಲಿ ಒಮ್ಮೆ ಸಭಾಪತಿಯಾದರೆ ಯಾವಾಗಲೂ ಸಭಾಪತಿಯೇ ಎಂಬ ಸಂಪ್ರದಾಯದ ಉಕ್ತಿ ಭಾರತಕ್ಕೆ ಸಾಧ್ಯವಾಗಿಸಿಲ್ಲ. ಕಾರಣ ಇಂದು Speaker ಹುದ್ದೆಯ ಕಾರ್ಯ ವೈಖರಿ ಟೀಕೆಗೆ ಅಗೌರವಕ್ಕೆ ದಾರಿಮಾಡಿಕೊಟ್ಟಿದೆ.

ಈ ರಾಷ್ಟ್ರದ ಜನತೆಯ ನಿಜವಾದ ಜನಪ್ರತಿನಿಧಿ ಸದನವೆಂದರೆ ಲೋಕಸಭೆ. ಅದಕ್ಕಾಗಿಯೇ ಇದನ್ನು ಜನ ಸಾಮಾನ್ಯರ ಸದನ ಎನ್ನುತ್ತಾರೆ. ದೇಶ ಮತ್ತು ಜನತೆಯ ಹಿತಾಸಕ್ತಿಗಳಿಗನುಗುಣವಾಗಿ ಅಭಿವೃದ್ಧಿ ಹಾಗೂ ನಿರ್ಮಾಣದ ಕಾರ್ಯಕ್ಕೆ ಅಗತ್ಯ ಶಾಸನಗಳನ್ನು ರೂಪಿಸುವುದು ಈ ಸದನದ ಪರಮೋಚ್ಚ ಅಧಿಕಾರ ಎನ್ನುವುದಕ್ಕಿಂತ ಹೊಣೆಗಾರಿಕೆ ಹೌದು. ಒಂದು ಜನಾಂಗದ ಅಂದರೆ ನಮ್ಮಲ್ಲಿನ ಬಹು ಜನಾಂಗದ, ಬಹುಸಂಸ್ಕೃತಿಯ, ಬಹುಭಾಷಿಕರ ಅಭಿಪ್ರಾಯಗಳ ಪ್ರತಿರೂಪವೇ ಲೋಕಸಭೆ. ಸರ್ವರ ಒಳಿತಿನ, ಸರ್ವರ ಅಭಿಮತದ, ಭವಿಷ್ಯದ ಸಾಕಾರಗೊಳಿಸುವ ಸದನವೆಂದೇ, ಜನತಾವಾಣಿಯ ಪ್ರತಿಧ್ವನಿಯೆಂದೇ ಪ್ರಜಾಪ್ರಭುತ್ವದಲ್ಲಿ ಭಾವಿಸಲಾಗುತ್ತದೆ. ರಾಷ್ಟ್ರದ ಒಳ್ಳೆಯ ಕಾನೂನು ಒಳ್ಳೆಯ ಜನರಿಂದ ಒಳ್ಳೆಯ ಸದನದಲ್ಲಿ ಹುಟ್ಟುತ್ತದೆ. ಲೋಕಸಭೆ ದೇಶದ ಜನತೆಯ ಪ್ರತಿರೂಪ. ಈ ಕನ್ನಡಿಯ ಪ್ರತಿರೂಪಗಳಾಗಿ ಜನಪ್ರತಿನಿಧಿಗಳಿರುತ್ತಾರೆ.

ಭಾರತ ಸಂವಿಧಾನದ ಕಲಂ (೧೪) ರಡಿ ದೇಶದ ನಾಗರೀಕರೆಲ್ಲರೂ ಕಾನೂನಿಕ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಅಂದರೆ ಕಾನೂನು ಯಾರಿಗೂ ಭೇದ-ಭಾವ ಎಣಿಸುವಂತಿಲ್ಲ. ಯಾವುದೇ ಜಾತಿ, ಧರ್ಮ, ಲಿಂಗ, ಭಾಷೆ, ಪ್ರದೇಶದ ಆಧಾರದ ಮೇಲೆ ತಾರತಮ್ಯವನ್ನಾಗಲೀ, ಪಕ್ಷಪಾತವನ್ನಾಗಲೀ ಅಥವಾ ವಿಶೇಷ ಕಾಳಜಿಯನ್ನು ಮಾಡುವಂತಿಲ್ಲ. ಆದರೆ ಭಾರತದ ಸಂದರ್ಭದಲ್ಲಿ 'ಸಮಾನತೆ ಹಕ್ಕು' Right to Equalityಗೆ ಭಿನ್ನವಾದ ಮತ್ತು ನ್ಯಾಯಯುತವಾದ ಅರ್ಥವನ್ನು ಕೊಡಲಾಗಿದೆ. ಇಲ್ಲಿ ಕಾನೂನಿಗೆ ಸಮಾನರು ಎಂದು ಹೇಳುತ್ತಲೆ ಕಾನೂನಿನಡಿ ದುರ್ಬಲರಿಗೆ ಸೂಕ್ತ ರಕ್ಷಣೆಯನ್ನು ಒದಗಿಸಬೇಕಾದದ್ದು ರಾಷ್ಟ್ರದ ಕರ್ತವ್ಯ ಅರ್ಥಾತ್

ಸರಕಾರದ ಜವಾಬ್ದಾರಿ ಎಂಬುದಾಗಿದೆ. ನಮ್ಮ ಸಾಮಾಜಿಕ ಪರಿಸ್ಥಿತಿಗಳು, ಹಾಗೆಯೇ ರೂಪುಗೊಂಡ ವ್ಯವಸ್ಥೆಯಡಿ ಶತಶತಮಾನಗಳಿಂದ ಶೋಷಣೆಗೊಳಗಾದ ಜನ ಸಮುದಾಯಕ್ಕೆ ಕಾನೂನಿನಡಿ ರಕ್ಷಣೆ ಹಾಗೂ ನ್ಯಾಯ ಒದಗಿಸಬೇಕಾದದ್ದು ಸರ್ಕಾರಗಳ ಹೊಣೆಗಾರಿಕೆಯಾಗಿದೆ ಎಂಬ ನಮ್ಮ ಸಂವಿಧಾನದ ಆಶಯ ಪ್ರಶಂಸನೀಯವಾದದ್ದು. ಅಂತೆಯೇ ಭಾರತ ಮತ್ತು ಒಕ್ಕೂಟದ ರಾಜ್ಯಗಳು ಸಂವಿಧಾನದ "ಕಲಂ ೨೯ (೨) ಅಥವಾ ಈ ಕಲಂ ನಡಿ ತನ್ನ ಪ್ರಜೆಗಳಿಗೆ ಸಮಾನತೆಗಾಗಿ ಕೈಗೊಳ್ಳುವ ಯಾವುದೇ ಕಾರ್ಯಕ್ರಮಗಳನ್ನು, ಸುಧಾರಣೆಗಳನ್ನು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದವರಿಗಾಗಿ ಅಥವಾ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ ಸಮುದಾಯಕ್ಕಾಗಿ ವಿಶೇಷ ಸವಲತ್ತುಗಳನ್ನು ಒದಗಿಸುವ ಕೆಲಸಕ್ಕೆ ಅಡ್ಡಿಯಾಗದು" (The Constitution of India, J.C.Johari, Sterling Publishers Private Limitted, 1995, New Delhi, P.41).

ಈ ಹಿನ್ನೆಲೆಯಲ್ಲಿ ಲಿಂಗಧಾರಿತ ತಾರತಮ್ಯವಿಲ್ಲದೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಮುಕ್ತವಾಗಿ ಪಾಲ್ಗೊಳ್ಳಲು ಅವಕಾಶವಿದೆ. ಒಂದು ವೇಳೆ ಅಂತಹ ಅವಕಾಶಗಳು ಇರದಿದ್ದಲ್ಲಿ ಅನುಕೂಲಕರ ವಾತಾವರಣವನ್ನು ಕಲ್ಪಿಸಿ ರಾಜ್ಯಗಳು ಜಾರಿಗೊಳಿಸಬೇಕೆನ್ನುವುದು ಸಂವಿಧಾನದ ಆಶಯವಾಗಿದೆ. ಹೀಗಾಗಿ ರಾಜಕೀಯ ಕ್ಷೇತ್ರದಲ್ಲಿ ಮೀಸಲಾತಿಯ ಮೂಲಕ ದುರ್ಬಲ ವರ್ಗಗಳು ಅವಕಾಶ ಪಡೆದಿವೆ. ಆದರೆ ಈ ಅವಕಾಶಗಳು ಲಿಂಗಾಧಾರಿತವಾಗಿರಬಾರದೆಂದು ಹೇಳಿದ್ದರೂ ನಾವಿಲ್ಲಿ ಅಸಮಾನತೆಯನ್ನು, ತಾರತಮ್ಯವನ್ನು ಕಾಣುತ್ತೇವೆ. ಜಾತಿಯಾಧಾರಿತ ಮೀಸಲಾತಿಯ ವಿಶಾಲವಾದ ಅವಕಾಶ ಲಿಂಗಾಧಾರಿತ ಮೀಸಲಾತಿಯಲ್ಲಿ ಸಂಕುಚಿತವಾಗಿದೆ. ಮಹಿಳೆಯರು ಅಧಿಕಾರ ರಾಜಕಾರಣದಲ್ಲಿ ಪಾಲ್ಗೊಳ್ಳುವ ಅವಕಾಶ ಕೆಳಸ್ತರದಿಂದಲೇ ಪ್ರಾರಂಭವಾಗಿ ಅಲ್ಲಿಗೇ ನಿಂತಿದೆ. ಅದರ ಫಲವಾಗಿ ಇಂದು ಗ್ರಾಮಪಂಚಾಯತ್‌ನಿಂದ ಹಿಡಿದು ಜಿಲ್ಲಾ ಪಂಚಾಯತ್‌ವರೆಗೂ ಹಾಗೂ ನಗರ-ಪಟ್ಟಣ-ಪುರಸಭೆಗಳ ಸ್ಥಳೀಯ ಸಂಸ್ಥೆಗಳು ಮೀಸಲಾತಿಯನ್ನು ಮಹಿಳೆಯರಿಗೆ ನೀಡಲಾಗಿದೆ. ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಯನ್ವಯ (೧೯೯೨ರಲ್ಲಿ ಜಾರಿಗೊಳಿಸಲಾದ ಕಾಯಿದೆಯಂತೆ) ಪಂಚಾಯತ್‌ಗಳು ಮತ್ತು ನಗರಪಾಲಿಕೆಗಳಲ್ಲಿ ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯವನ್ನು ಅನುಕ್ರಮವಾಗಿ ನೀಡುವಂತೆ ಸೂಚಿಸಲಾಗಿದೆ. ಸಮಾಜದ ಅಂಚಿನಲ್ಲಿರುವ ದುರ್ಬಲ ವರ್ಗಗಳಿಗೆ, ಮಹಿಳೆಯರಿಗೆ ಹಾಗೂ ಪರಿಶಿಷ್ಟರಿಗೆ ಮೀಸಲಾತಿಯನ್ವಯ ಪಂಚಾಯತ್ ವ್ಯವಸ್ಥೆಯಲ್ಲಿ ಸದಸ್ಯತ್ವ ಮತ್ತು ಹುದ್ದೆಗಳನ್ನು ಕಾಯ್ದಿರಿಸಲಾಗಿದೆ. ಇತ್ತೀಚೆಗೆನ ೧೯೯೨ರ ಸಂವಿಧಾನದ ತಿದ್ದುಪಡಿಯಿಂದಾಗಿಯೇ ಪಂಚಾಯತ್ ರಾಜ್ ಸಂಸ್ಥೆಗಳು ಸಾಂವಿಧಾನಿಕ ಮನ್ನಣೆ ಪಡೆದಿರುವುದನ್ನು ಗಮನಿಸಬಹುದು.

ಮೇಲ್ಮಟ್ಟದ ರಾಜಕಾರಣದಲ್ಲಿ ಮಹಿಳೆಗೆ ಇನ್ನು ಅಧಿಕಾರ ಹಿಡಿಯುವ ಅವಕಾಶವಾಗಲಿ ಅಥವಾ ಅಧಿಕಾರ ಹಿಡಿದು ರಾಜಕಾರಣ ಮಾಡುವಂತಹ ಸ್ಥಾನವನ್ನು ಮಹಿಳೆಗೆ ಕಲ್ಪಿಸಲಾಗಿಲ್ಲವೆಂದರೆ, ಅದು ಪುರುಷ ಸಮಾಜದ ಏಕಸ್ವಾಮ್ಯತೆಯನ್ನು ಹಾಗೂ ಬಲವಾದ ಹಿಡಿತವನ್ನು ಹೊಂದಿರುವುದು ಸ್ಪಷ್ಟವಾಗಿ

ಅರ್ಥೈಸುವಂತಹದು. ಅಕಸ್ಮಾತ್ ಇಂತಹ ಹುದ್ದೆಗಳಿಗೇರಿದ ಮಹಿಳಾ ರಾಜಕಾರಣಿಗಳು ಕೂಡಾ ಏಕಾಏಕಿ ಪ್ರವೇಶ ಪಡೆದವರಲ್ಲ ಎಂಬುದನ್ನು ಗಂಭೀರವಾಗಿಯೇ ಚರ್ಚಿಸಬೇಕಾಗಿದೆ. ಉದಾಹರಣೆಗೆ ಕೇಂದ್ರದಲ್ಲಿ ೧೯೬೭ ರಿಂದ ೧೯೭೭ ಹಾಗೂ ೧೯೮೦ ರಿಂದ ೧೯೮೪ರ ವರೆಗಿನ ಸುಮಾರು ೧೬ ವರ್ಷಗಳ ಸುದೀರ್ಘ ಕಾಲ ಪ್ರಧಾನಿಯಾಗಿ ಅಧಿಕಾರ ನಡೆಸಿದ ದಿ.ಶ್ರೀಮತಿ ಇಂದಿರಾಗಾಂಧಿಗೆ ಮಹಿಳೆ ಎನ್ನುವ ಕಾರಣಕ್ಕಾಗಿ ನೀಡಿದ ಅವಕಾಶವಾಗಲೀ ಅಥವಾ ವಿನಾಯಿತಿ ಆಗಲಿ ಅಲ್ಲವೇ ಅಲ್ಲ. ಬದಲಿಗೆ ನೆಹರೂ ಕಾಲದಲ್ಲಿನ ಕಾಂಗ್ರೆಸ್ ಪಕ್ಷ ಹಾಗೂ ಸ್ವತಃ ತಂದೆಯಾದ ನೆಹರೂರವರ ವರ್ಚಸ್ಸಿನ ಪ್ರಭಾಗಳಿಂದಾಗಿ ದೇಶದ ನಾಯಕಿಯಾಗಿ ಬೆಳೆಯಲು ಇಂದಿರಾಗಾಂಧಿಗೆ ಸಾಧ್ಯವಾಗಿತ್ತು. ಮೇಲಾಗಿ ಇಂದಿರಾಗಾಂಧಿಯವರ ನಾಯಕತ್ವದ ಗುಣಗಳೂ ಕೆಲಮಟ್ಟಿಗೆ ರಾಜಕಾರಣದಲ್ಲಿ ಅವರ ವರ್ಚಸ್ಸು ಬೆಳೆಯಲು ಕಾರಣವಾಗಿರಬಹುದು. ಈ ಹಿನ್ನೆಲೆಗಳೆ ಇಂದಿರಾಗಾಂಧಿ ರಾಷ್ಟ್ರನಾಯಕಿಯಾಗಿ ರೂಪುಗೊಳ್ಳಲು, ಮಹಿಳೆ ಎನ್ನುವುದಕ್ಕಿಂತ ಇತರೇ ಹೆಚ್ಚಿನ ಪ್ರಭಾವಿ ಅಂಶಗಳು ನಿರ್ಣಾಯಕವಾಗಿದ್ದವು. ಅವರ ನಿಧನದನಂತರ ಯಾವ ರಾಜಕೀಯ ಪಕ್ಷಗಳೂ ಮಹಿಳೆಯರನ್ನು ನಾಯಕಿಯರಾಗಿ ರೂಪಿಸಲು ಸಾಧ್ಯವಾಗಿಲ್ಲ. ಅದೇ ಕಾಂಗ್ರೆಸ್ ಪಕ್ಷವು ಇಂದಿರಾಗಾಂಧಿ ಅವರ ಹೆಸರಿನ ಪ್ರಭಾವದ ಅಲೆ ಹಾಗೂ ಆ ಕುಟುಂಬದ ಕುಡಿ ದಿ. ರಾಜೀವ್ ಗಾಂಧಿಯವರ ಪತ್ನಿಯಾದ ಶ್ರೀಮತಿ ಸೋನಿಯಾ ಗಾಂಧಿಯವರನ್ನು ಅಧ್ಯಕ್ಷೆಯನ್ನಾಗಿಸಿ ಮುಂದುವರೆಸಿರುವ ರಾಜಕಾರಣದ ಫಲಿತಾಂಶಗಳನ್ನು ಕಾದು ನೋಡಬೇಕಾಗಿದೆ.

ಜನಪ್ರತಿನಿಧಿಗಳ ಶಾಸಕಾಂಗ - ಲೋಕಸಭೆಗೆ ಈವರೆಗೆ ನಡೆದ ೧೩ ಸಾರ್ವತ್ರಿಕ ಚುನಾವಣೆಗಳಲ್ಲಿ ಸ್ಪರ್ಧಿಸಿ ಗೆಲುವು ಸಾಧಿಸಿದ ಹಾಗೂ ಸರಕಾರ ರಚಿಸಿದ ಪಕ್ಷ ಮತ್ತು ನಾಯಕರನ್ನು ಗಮನಿಸಿದಲ್ಲಿ ಮಹಿಳಾ ನಾಯಕತ್ವದ ಅಂಶಗಳನ್ನು ವಿಶ್ಲೇಷಿಸಬಹುದು. ಇಲ್ಲಿನ ಕೋಷ್ಟಕವನ್ನು ಅವಲೋಕಿಸೋಣ.

ಲೋಕಸಭೆಯು ಈವರೆಗೆ (೧೯೯೯ರ ಚುನಾವಣೆಯವರೆಗೂ) ಒಟ್ಟು ೧೩ ಸಾರ್ವತ್ರಿಕ ಚುನಾವಣೆಗಳನ್ನು ಕಂಡಿದೆ. ಅವುಗಳ ಚುನಾವಣಾ ವಿವರಗಳು ಮುಂದಿನಂತಿವೆ. (ಸರಕಾರ ರಚಿಸಿದ ಪಕ್ಷಗಳು ಸೇರಿ)

| ಕ್ರ.ಸಂ. | ಚುನಾವಣಾ ವರ್ಷ | ರಾಜಕೀಯ ಪಕ್ಷ | ಸರಕಾರ ರಚಿಸಿದ ನಾಯಕ |
|---|---|---|---|
| ೧. | ೧೯೫೨ | ಕಾಂಗ್ರೆಸ್ | ನೆಹರೂ |
| ೨. | ೧೯೫೭ | ಕಾಂಗ್ರೆಸ್ | ನೆಹರೂ |
| ೩. | ೧೯೬೨ | ಕಾಂಗ್ರೆಸ್ | ನೆಹರೂ |
| ೪. | ೧೯೬೭ | ಕಾಂಗ್ರೆಸ್ | ಇಂದಿರಾಗಾಂಧಿ |
| ೫. | ೧೯೭೧ | ಕಾಂಗ್ರೆಸ್ | ಇಂದಿರಾಗಾಂಧಿ |
| ೬. | ೧೯೭೭ | ಜನತಾಪಕ್ಷ | ಮೊರಾರ್ಜಿ ದೇಸಾಯಿ |
| ೭. | ೧೯೮೦ | ಕಾಂಗ್ರೆಸ್ | ಇಂದಿರಾಗಾಂಧಿ |
| ೮. | ೧೯೮೪ | ಕಾಂಗ್ರೆಸ್ | ರಾಜೀವ್ ಗಾಂಧಿ |
| ೯. | ೧೯೮೯ | (ಬಿಜೆಪಿ + ಜನತಾದಳ) | |
| | ೧.೧೨.೮೯ ರಿಂದ ೨.೧೨.೧೯೯೦ | ಮೈತ್ರಿಕೂಟ | ವಿ.ಪಿ.ಸಿಂಗ್ |
| | ೧೦.೧೧.೯೦ ರಿಂದ ೨೧.೬.೯೧ | ಕಾಂಗ್ರೆಸ್ ಬೆಂಬಲಿತ ಸಮಾಜವಾದಿ ಜನತಾ ಪಾರ್ಟಿ | ಚಂದ್ರಶೇಖರ್ |
| ೧೦. | ೧೯೯೧ | ಕಾಂಗ್ರೆಸ್ (ಮಿತ್ರ ಪಕ್ಷಗಳೊಂದಿಗೆ) | ಪಿ.ವಿ.ನರಸಿಂಹರಾವ್ |
| ೧೧. | ೧೯೯೬ | ಬಿಜೆಪಿ ಮತ್ತು ಮಿತ್ರಪಕ್ಷಗಳು (೧೩ ದಿನಗಳು) | ಎ.ಬಿ.ವಾಜಪೇಯಿ |
| ೧೨. | ೧೯೯೬, ೯೭, ೯೮ | ಸಂಯುಕ್ತರಂಗ | ಎ.ಬಿ.ವಾಜಪೇಯಿ, ಎಚ್.ಡಿ.ದೇವೇಗೌಡ, ಐ.ಕೆ.ಗುಜ್ರಾಲ್ |
| ೧೩. | ೧೯೯೯ (ಸೆಪ್ಟೆಂಬರ್ ಮತ್ತು ಅಕ್ಟೋಬರ್) | ಎನ್ ಡಿಎ ಮೈತ್ರಿಕೂಟ (ಬಿಜೆಪಿ + ಸಮತಾಪಾರ್ಟಿ + ಶಿವಸೇನಾ + ಬಿಎಸ್‌ಪಿ + AIDMK + ತೃಣಮೂಲ ಕಾಂಗ್ರೆಸ್ + ಟಿಡಿಪಿ ಇತ್ಯಾದಿ) | ಎ.ಬಿ.ವಾಜಪೇಯಿ |

ಈ ಮೇಲಿನ ಚುನಾವಣಾ ಫಲಿತಾಂಶಗಳು ಕರ್ನಾಟಕ ರಾಜ್ಯ ರಾಜಕಾರಣ ಹಾಗೂ ಬಳ್ಳಾರಿ ಜಿಲ್ಲಾ ರಾಜಕಾರಣದ ಮೇಲೆ ಪ್ರಭಾವ ಬೀರದೇ ಇಲ್ಲ. ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ, ಇಂದಿರಾಗಾಂಧಿಯವರ ನಂತರ ಅಂತಹ ರಾಷ್ಟ್ರಮಟ್ಟದ ಮಹಿಳಾ ನಾಯಕಿಯರನ್ನು ರೂಪಿಸಲು ಸಾಧ್ಯವಾಗದೆ ಇರುವುದು, ಇದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದಂತೆ ಕೊನೆಗೆ ಅಲ್ಲಿ ಪುರುಷಪ್ರಧಾನ ಸಮಾಜದ ನಿಲುವುಗಳು ಅಪ್ರಜ್ಞಾಪೂರ್ವಕವಾಗಿಯೇ ಬೇರೊಬ್ಬ ಮಹಿಳೆಯನ್ನು ಪರ್ಯಾಯವಾಗಿ ಸೃಷ್ಟಿಸಲು ನಿರಾಕರಿಸಿರುವುದನ್ನು ಗುರುತಿಸಬಹುದು. ಇಂದಿರಾಗಾಂಧಿಯವರ ಏಕಪಕ್ಷೀಯ ವಿಚಾರ, ನಿರ್ಧಾರ ಹಾಗೂ

ಆಳ್ವಿಕೆಗಳು ದೌರ್ಬಲ್ಯಗಳೆಂದು ಭಾವಿಸುವ ಅವರ ನಿಲುವುಗಳನ್ನು ಆಗಿನ ಪುರುಷ ಪ್ರಧಾನದ ನಾಯಕರು ಮತ್ತೊಮ್ಮೆ ಇನ್ನೊಬ್ಬ ಮಹಿಳಾ ನಾಯಕಿಯಲ್ಲಿ ಹುಟ್ಟಬಹುದಾದ ಗುಣಗಳನ್ನು ವಿರೋಧಿಸುವ ಮನಸ್ಸುಗಳೂ ಕಾರಣವಾಗಿರಬಹುದು. ಈಗಿನ ರಾಜಕಾರಣದ ಎಲ್ಲ ಮಜಲುಗಳನ್ನು, ವರಸೆಗಳನ್ನು ಬಹು ಹಿಂದೆಯೇ ಇಂದಿರಾಗಾಂಧಿಯವರ ಕಾಲದಲ್ಲಿ ಆಗಿರುವುದನ್ನು ನೆನೆಪಿಸುವ ಪುರುಷ ರಾಜಕಾರಣ, ಇಂದು ನಡೆಯುವ ರಾಜಕಾರಣದ ಚಮತ್ಕಾರಗಳನ್ನು ಗೌಣವಾಗಿಸುವ ಹುನ್ನಾರು ನಡೆಸಿದೆ. ಚುನಾವಣೆಗಳಲ್ಲಿ ನಡೆಯುವ ಜಾತಿ ರಾಜಕೀಯ, ಹಣ, ಜನಬಲ, ದೌರ್ಜನ್ಯ, ಹೆಂಡ - ಸರಾಯಿಗಳ ಆಮಿಷ, ಅಧಿಕಾರದ ಲಾಲಸೆ, ಪಕ್ಷಾಂತರಕ್ಕೆ ಪ್ರಚೋದಿಸುವುದು, ಗೂಂಡಾಗಿರಿ, ಕಾಳಸಂತೆಕೋರರ, ಭೂಗತ ಚಟುವಟಿಕೆಗಳ ವ್ಯಕ್ತಿಗಳೊಂದಿಗೆ ಸಂಪರ್ಕವಿರಿಸಿಕೊಂಡು ಚುನಾವಣೆಯಲ್ಲಿ ಅಕ್ರಮವೆಸಗುವುದು ಇತ್ಯಾದಿ ಎಲ್ಲಾ ಪ್ರಜಾಸತ್ತೆಯ ವಿರೋಧಿ ಚಟುವಟಿಕೆಗಳು ನಡೆಯುತ್ತಿರುವುದು ಇಂದಿನ ರಾಜಕೀಯದ ದುರಂತವೆಂದೆ ಹೇಳಬೇಕು. ಈಗಾಗಲೇ ಚರ್ಚಿಸಿದಂತೆ ರಾಜಕೀಯವೆಂದರೆ ಪಕ್ಷಗಳ ಚುನಾವಣೆ, ಅಲ್ಲಿ ಗೆಲ್ಲುವುದೊಂದೇ ಗುರಿ. ಚುನಾವಣಾ ಕಣದಲ್ಲಿ ಗೆಲ್ಲುವ ಕುದುರೆಗಾಗಿ ಎಲ್ಲರ, ಎಲ್ಲಾ ರಾಜಕೀಯ ಪಕ್ಷಗಳ ಆಪೇಕ್ಷೆ. ಅದೊಂದು ಜೂಜಿನ - ಮೋಜಿನ - ಜಿದ್ದಿನ ಹಣಾಹಣಿ. ಹಣದ, ಹೆಂಡದ ಹೊಳೆಯೇ ಹರಿಯುತ್ತದೆ.

ಉತ್ತರ ಭಾರತದ ಬಿಹಾರ, ಉತ್ತರಪ್ರದೇಶ, ಪೂರ್ವ ಭಾರತದ ತಪ್ಪಲು ಪ್ರದೇಶಗಳ ಚುನಾವಣೆಗಳಲ್ಲಿ ನಡೆಯುವ ಗಲಭೆ, ಹಿಂಸೆಗಳು ಎಂಥಹವರನ್ನು ಮೈ ನಡುಗಿಸುವಂತೆ ಮಾಡುತ್ತವೆ. ಇಂತಹ ವಾತಾವರಣಗಳಲ್ಲಿ ಮಹಿಳೆಯರ ರಾಜಕಾರಣಕ್ಕೆ ಬರುವುದು ಅತ್ಯಂತ ದುಸ್ತರದ ಸಂಗತಿಯಾಗಿದೆ. ಅದರಲ್ಲೂ ಬಿಹಾರದ ರಾಜಕೀಯವನ್ನು ವಿಶೇಷವಾಗಿ ಕಾಣಬಹುದು. ಅಲ್ಲಿ ಮುಖ್ಯಮಂತ್ರಿಯಾಗಿ ಅಧಿಕಾರ ನಡೆಸಿ ಗದ್ದುಗೆಯಿಂದ ಇಳಿಯುವ ಪ್ರಸಂಗ ಬಂದಾಗ ಶ್ರೀ ಲಾಲುಪ್ರಸಾದ್ ಯಾದವ್ ಎಂಬ ವಾಕ್ಚಾತುರ ರಾಜಕಾರಣಿ ತನ್ನ ಪತ್ನಿಯನ್ನೇ ಪ್ರಜಾಪ್ರಭುತ್ವದ ವಂಶಪರಂಪರೆಯೆಂಬಂತೆ ಮುಖ್ಯಮಂತ್ರಿಯನ್ನಾಗಿ ಮಾಡಿದ್ದು ರಾಜಕಾರಣದ ಅಂತರ್‌ಮುಖಗಳನ್ನು ಹುನ್ನಾರವಾಗಿ ಸ್ವೀಕರಿಸಿ, ಮಹಿಳೆಯರನ್ನು ಪುರುಷ ಅಧಿಕಾರಶಾಹಿಗಳು ಕೈಗೊಂಬೆಯಂತೆ ಪರೋಕ್ಷವಾಗಿ ನಡೆಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇಂತಹ ರಾಜಕಾರಣದ ಮೂಲಕ ಮಹಿಳೆಯರನ್ನು ಉನ್ನತ ಸ್ಥಾನಗಳಿಗೆ ಕೂರಿಸಿ ಪಡೆಯುವ ಫಲ ಕೇವಲ ತಮ್ಮ ಕುಟುಂಬ ಮತ್ತು ಕೌಟುಂಬಿಕ ಪರಿವಾರದವರಿಗೆ ಮಾತ್ರ ಮೀಸಲಾಗುತ್ತದೆ. ಜಾತ್ಯಾತೀತ ರಾಜ್ಯದಲ್ಲಿ ಈ ಬಗೆಯ ದುಸ್ಥಿತಿಯನ್ನೇ ಮಹಿಳಾಪರ ಸಂಘಟನೆಗಳು ಬಹಿರಂಗವಾಗಿ ಟೀಕಿಸುತ್ತವೆ. ಆ ಮೂಲಕ ಸ್ತ್ರೀಗೆ ತನ್ನ ಸ್ವಯಂ ಆಯ್ಕೆಯ ಅವಕಾಶ ಕೊಡಬೇಕೆಂದು ವಾದಿಸುತ್ತಾರೆ. ಅದು ಮದುವೆ, ಉದ್ಯೋಗ, ಅಧಿಕಾರ ಇತ್ಯಾದಿ ಯಾವುದೇ ಇದ್ದರೂ ಅವಳಿಗೆ ಪೂರ್ಣ ಇಚ್ಛಾ ಸ್ವಾತಂತ್ರ್ಯ, ಅನುಭವಿಸುವ ಅವಕಾಶ ಅಥವಾ ಅಂತಹ ವಾತಾವರಣ ನಿರ್ಮಾಣ ಮಾಡಿಕೊಡುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಬೇಕಾಗಿದೆ. ಆಗ ನಿಜವಾದ ಸ್ತ್ರೀ ಸ್ವಾತಂತ್ರ್ಯ, ಲಿಂಗಾಧಾರಿತವಲ್ಲದ, ಸರ್ವರ ಸಮನ್ವಯ ಬದುಕಿನ ಸಮಾಜದ ನಿರ್ಮಾಣ ಸಾಧ್ಯ. ನಿಜ ಪ್ರಜಾಪ್ರಭುತ್ವ ರಾಷ್ಟ್ರವನ್ನು ಕಟ್ಟಲು ಸಾಧ್ಯವಾಗುತ್ತದೆ.

# ಬಳ್ಳಾರಿ ಲೋಕಸಭಾ ಚುನಾವಣೆ ಹಿನ್ನೋಟ

(೧೯೫೨ ರಿಂದ ೧೯೯೮ರ ವರೆಗೆ)

| ಕ್ರಮ ಸಂ. | ಚುನಾವಣೆ ನಡೆದ ವರ್ಷ | ಒಟ್ಟು ಮತದಾರರ ಸಂಖ್ಯೆ | ಚುನಾವಣೆ ಗೊಂಡ ಮತಗಳು | ಕ್ರಮಬದ್ಧ ಮತಗಳು | ತಿರಸ್ಕೃತ ಮತಗಳು | ಅಭ್ಯರ್ಥಿಗಳ ಹೆಸರು | ಪಕ್ಷ | ಪಡೆದ ಮತಗಳು | ಶೇಕಡಾ ಮತದಾನ | ಫಲಿತಾಂಶ |
|---|---|---|---|---|---|---|---|---|---|---|
| ೧. | ೧೯೫೨ | ೩೫೮೭೨೭ | | | | ಟ.ಸುಬ್ರಮಣ್ಯಂ | ಕಾಂಗ್ರೆಸ್ | ೧೨೪೯೭೬ | | ಆಯ್ಕೆ |
| | | | | | | ವೈ.ಮಹಾಬಳೇಶ್ವರಪ್ಪ | | ೯೪೬೧೫ | | ---- |
| ೨. | ೧೯೫೭ | ೪೨೬೬೯೪ | ೨೬೭೦೫೨ | | | ಟ.ಸುಬ್ರಮಣ್ಯಂ | ಭಾ.ರಾ.ಕಾ. | ೧೪೬೬೭೦ | ೫೪.೯೫ | ಆಯ್ಕೆ |
| | | | | | | ವೈ.ಮಹಾಬಳೇಶ್ವರಪ್ಪ | ಪಕ್ಷೇತರ | ೧೨೦೩೮೨ | ೪೫.೦೫ | ---- |
| ೩. | ೧೯೬೨ | ೪೮೧೯೩೫ | ೨೯೯೭೮೭ | ೨೮೬೨೧೩ | ೧೩೪೪೫ | ಟ.ಸುಬ್ರಮಣ್ಯಂ | ಭಾ.ರಾ.ಕಾ. | ೧೪೮೭೬೫ | ೫೧.೯೮ | ಆಯ್ಕೆ |
| | | | | | | ಜೆ.ಎಂ.ಇಮಾಯ | ಸ್ವತಂತ್ರ | ೧೩೭೪೪೮ | ೪೮.೦೫ | ---- |
| ೪. | ೧೯೬೭ | ೪೯೯೮೭೪ | ೩೩೭೩೯೧ | ೩೨೨೪೨೪ | ೧೪೯೬೭ | ಡಾ.ವಿ.ಕೆ.ಆರ್.ವಿ.ರಾವ್ | ಭಾ.ರಾ.ಕಾ. | ೧೭೩೪೦೨ | ೫೩.೭೮ | ಆಯ್ಕೆ |
| | | | | | | ವೈ.ಮಹಾಬಳೇಶ್ವರಪ್ಪ | ಸ್ವತಂತ್ರ | ೧೪೯೦೨೨ | ೪೬.೨೨ | ---- |
| ೫. | ೧೯೭೧ | ೫೩೦೪೭೩ | ೩೩೨೨೬೫ | ೩೧೭೬೩೭ | ೧೪೬೨೮ | ಡಾ.ವಿ.ಕೆ.ಆರ್.ವಿ.ರಾವ್ | ರಾ.ಇ.ಜೆ. | ೨೩೦೯೦೧ | ೭೨.೭೦ | ಆಯ್ಕೆ |
| | | | | | | ವೈ.ಮಹಾಬಳೇಶ್ವರಪ್ಪ | ಸ್ವತಂತ್ರ | ೭೮೦೪೧ | ೨೪.೫೭ | ---- |
| | | | | | | ಇಬ್ಬರು ಪಕ್ಷೇತರರು | | | | |
| ೬. | ೧೯೭೭ | ೫೯೩೬೮೭ | ೩೮೬೦೫೯ | ೩೭೧೬೩೪ | ೧೪೪೨೫ | ಕೆ.ಎಸ್.ವೀರಭದ್ರಪ್ಪ | ಭಾ.ರಾ.ಕಾ.(ಅ) | ೨೫೮೫೪೯ | ೬೯.೫೮ | ಆಯ್ಕೆ |
| | | | | | | ಎನ್.ತಿಪ್ಪಣ್ಣ | ಭಾ.ಲೋ.ದ. | ೧೧೩೦೪೫ | ೩೦.೪೨ | ---- |
| ೭. | ೧೯೮೦ | ೭೦೧೪೩೭ | ೩೮೦೪೯೫ | ೩೬೫೫೭೮ | ೧೪೯೧೭ | ಆರ್.ವೈ.ಘೋರ್ಪಡೆ | ಭಾ.ರಾ.ಕಾ.(ಅ) | ೨೩೪೭೯೨ | ೬೪.೨೨ | ಆಯ್ಕೆ |
| | | | | | | ಎಂ.ವೈ.ಘೋರ್ಪಡೆ | ಭಾ.ರಾ.ಕಾ. | ೯೮೭೫೫ | ೨೭.೦೧ | ---- |
| | | | | | | ಎನ್.ರಾಚಯ್ಯ | ಜನತಾಪಕ್ಷ | ೨೬೬೪೧ | ೭.೨೪ | ---- |
| | | | | | | ಇಬ್ಬರು ಪಕ್ಷೇತರರು | | | | |
| ೮. | ೧೯೮೪ | ೭೬೮೨೬೭ | ೫೧೦೨೨೪ | ೪೯೩೫೭೫ | ೧೬೬೬೯ | ಬಸವರಾಜೇಶ್ವರಿ | ಭಾ.ರಾ.ಕಾ. | ೨೭೬೬೪೦ | ೫೬.೦೪ | ಆಯ್ಕೆ |
| | | | | | | ಎಂ.ಪಿ.ಪ್ರಕಾಶ್ | ಜನತಾಪಕ್ಷ | ೨೦೪೩೫೪ | ೪೧.೪೦ | ---- |
| | | | | | | ಆರು ಜನ ಪಕ್ಷೇತರರು | | | | |
| ೯. | ೧೯೮೯ | ೧೧೩೦೮೮೧ | ೬೮೯೭೬೪ | ೬೪೭೭೭೫ | ೪೧೯೮೯ | ಬಸವರಾಜೇಶ್ವರಿ | ಭಾ.ರಾ.ಕಾ. | ೩೩೫೩೩೭ | ೫೧.೦೯ | ಆಯ್ಕೆ |
| | | | | | | ಎನ್.ತಿಪ್ಪಣ್ಣ | ಜ.ದ. | ೨೬೦೨೫೭ | ೪೦.೦೨ | ---- |
| | | | | | | ಕೊಟ್ರಯ್ಯ | ಜ.ಪ.ಜೆ.ಪಿ. | ೪೦೪೬೬ | ೬.೦೨ | ---- |
| ೧೦. | ೧೯೯೧ | ೧೦೩೬೨೦೨ | ೫೩೧೨೨೧ | ೫೧೧೩೧೨ | ೧೯೯೦೯ | ಬಸವರಾಜೇಶ್ವರಿ | ಭಾ.ರಾ.ಕಾ. | ೨೩೪೮೧೨ | ೪೫.೯೨ | ಆಯ್ಕೆ |
| | | | | | | ವೈ.ನೆಟ್ಟಕಲ್ಲಪ್ಪ | ಜ.ದ. | ೧೬೮೮೩೧ | ೩೩.೦೨ | ---- |
| | | | | | | ಕೆ.ನಾಗಭೂಷಣ | ಬಿ.ಜೆ.ಪಿ. | ೮೪೮೩೪ | ೧೬.೫೯ | ---- |
| | | | | | | ಹನ್ನೊಂದು ಜನ ಪಕ್ಷೇತರರು | | | | |
| ೧೧. | ೧೯೯೬ | ೧೧೫೫೬೧೩ | ೬೪೨೬೩೩ | ೬೨೩೩೯೮ | ೧೯೨೩೫ | ಕೆ.ಸಿ.ಕೊಂಡಯ್ಯ | ಭಾ.ರಾ.ಕಾ. | ೨೭೩೫೮೪ | ೪೩.೮೮ | ಆಯ್ಕೆ |
| | | | | | | ಎನ್.ತಿಪ್ಪಣ್ಣ | ಜ.ದ. | ೨೬೯೦೬೫ | ೪೩.೧೬ | ---- |
| | | | | | | ಇಂದೂಶೇಖರ | ಬಿ.ಜೆ.ಪಿ. | ೧೬೬೩೬ | ೦೨.೬೬ | ---- |
| | | | | | | ರವೀಂದ್ರನಾಥಬಾಬು | ಕೆ.ಸಿ.ಪಿ | ೪೩೨೮೬ | ೦೬.೯೪ | ---- |
| | | | | | | ಇಪ್ಪತ್ತೊಂದು ಜನ ಪಕ್ಷೇತರರು | | | | |
| ೧೨. | ೧೯೯೮ | ೧೧೭೯೭೧೧ | ೭೩೮೫೯೮ | ೭೧೬೫೭೬ | ೨೧೬೧೦ | ಕೆ.ಸಿ.ಕೊಂಡಯ್ಯ | ಭಾ.ರಾ.ಕಾ. | ೨೮೪೯೦೯ | ೩೯.೭೫ | ಆಯ್ಕೆ |
| | | | | | | ವೈ.ನೆಟ್ಟಕಲ್ಲಪ್ಪ | ಜ.ದ. | ೧೮೬೯೯೨ | ೨೬.೦೯ | ---- |
| | | | | | | ಎನ್.ತಿಪ್ಪಣ್ಣ | ಲೋಕಶಕ್ತಿ | ೨೨೧೧೭೧ | ೩೦.೮೬ | ---- |
| | | | | | | ಸುಧಾಕರ ಹಿರೇಮಠ | ಕ.ವಿ.ಪಾ. | ೧೦೪೯೮ | ೦೧.೪೬ | ---- |
| | | | | | | ನಾಲ್ಕು ಜನ ಪಕ್ಷೇತರರು | | | | |

ಭಾರತದ ರಾಜಕಾರಣದಲ್ಲಿ ಸಂಭವಿಸುವ ಎಲ್ಲಾ ಫಲಿತಾಂಶಗಳು ಕರ್ನಾಟಕ ರಾಜ್ಯ ರಾಜಕಾರಣ ಹಾಗೆಯೇ ಬಳ್ಳಾರಿ ಜಿಲ್ಲಾ ರಾಜಕಾರಣದ ಮೇಲೆ ಪರಿಣಾಮವನ್ನು ಬೀರಿವೆ. ಅದು ಲೋಕಸಭೆ, ವಿಧಾನಸಭೆ ಇರಬಹುದು, ಮಧ್ಯಂತರ ಚುನಾವಣೆಗಳು ಸರಕಾರದ ನಾಯಕರುಗಳ ಬದಲಾವಣೆ ಪಕ್ಷಗಳ ನಾಯಕರ ಬದಲಾವಣೆಯಾಗಿದ್ದರೂ ತನ್ನ ಪ್ರಭಾವವನ್ನು ಬೀರಿಯೇ ತೀರುತ್ತದೆ. ಹೀಗೆ ಆದಂತಹ ಲೋಕಸಭೆಯ ಚುನಾವಣಾ ಫಲಿತಾಂಶಗಳನ್ನು ಹಿಂದಿನ ಕೋಷ್ಟಕದಲ್ಲಿ ಗಮನಿಸಬಹುದು.

ಬಳ್ಳಾರಿ ಜಿಲ್ಲೆಯ ರಾಜಕಾರಣದಲ್ಲಿ ಲೋಕಸಭೆಗೆ ನಡೆದ ಆರಂಭಿಕ ಚುನಾವಣೆಗಳಲ್ಲಿ ಪ್ರಮುಖ ರಾಷ್ಟ್ರೀಯ ಪಕ್ಷಗಳ ಬಲಾಬಲ ಪ್ರದರ್ಶನಗಳು ಜರುಗಿದವು. ಅವುಗಳಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಪ್ರಜಾ ಸೋಶಲಿಸ್ಟ್ ಪಾರ್ಟಿ, ಸ್ವತಂತ್ರ ಪಾರ್ಟಿ, ೨ನೇ (೧೯೫೭), ೩ನೇ (೧೯೬೨), ೪ನೇ (೧೯೬೭) ಸಾರ್ವತ್ರಿಕ ಚುನಾವಣೆಗಳಲ್ಲಿ ಭಾಗವಹಿಸಿದ್ದವು. ಹಾಗೂ ೧೯೭೧ರಲ್ಲಿ ನಡೆದ ಮಧ್ಯಂತರ ಚುನಾವಣೆಗಳಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನೊಂದಿಗೆ ಸ್ವತಂತ್ರ ಪಾರ್ಟಿ ಮತ್ತು ಇಬ್ಬರು ಸ್ವತಂತ್ರ ಅಭ್ಯರ್ಥಿಗಳು ಚುನಾವಣಾ ಕಣದಲ್ಲಿದ್ದರು. ಆಗ ಶ್ರೀ ಬಾಬು ಜಗಜೀವನರಾಮ್ ನೇತೃತ್ವದಲ್ಲಿನ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಈ ಪಕ್ಷಗಳೊಂದಿಗೆ ಸ್ಪರ್ಧಿಸಿ ಭರ್ಜರಿ ಜಯ ಸಾಧಿಸಿದ್ದು ಒಂದು ದಾಖಲೆಯೇ ಆಗಿತ್ತು. ಶ್ರೀ. ಬಾಬು ಜಗಜೀವನರಾಮ್ ಅಧ್ಯಕ್ಷತೆಯ ಐಎನ್‌ಸಿ ಅಭ್ಯರ್ಥಿಯಾದ ಡಾ. ವಿ.ಕೆ.ಆರ್.ವಿ.ರಾವ್ ಅವರು ೨,೩೦,೯೦೧ ಅಥವಾ ಶೇ. ೬೯.೭ ರಷ್ಟು ಮತ ಪಡೆದು ಸಮೀಪದ ಪ್ರತಿಸ್ಪರ್ಧಿ ಸ್ವತಂತ್ರ ಪಾರ್ಟಿಯ ವೈ.ಮಹಾಬಳೇಶ್ವರಪ್ಪನವರನ್ನು ಭಾರೀ ಅಂತರದಿಂದ ಸೋಲಿಸಿದ್ದರು. ಬಹುಶಃ ಈ ಗೆಲುವೇ ಬಳ್ಳಾರಿ ಜಿಲ್ಲೆಯಲ್ಲಿ ಕಾಂಗ್ರೆಸ್ ಪಕ್ಷದ ಭದ್ರ ಬುನಾದಿಗೆ / ಅಡಿಪಾಯಕ್ಕೆ ನಾಂದಿಯಾಯಿತು. ಆ ಕಾಲದಲ್ಲಿ ಬಾಬು ಜಗಜೀವನರಾಮ್‌ರ ರಾಜಕೀಯ ವರ್ಚಸ್ಸು ಎಲ್ಲ ಕೊರೆಗಳನ್ನು, ದೌರ್ಬಲ್ಯಗಳನ್ನು ಮೀರಿದ್ದು ಈ ಪ್ರಪಂಡ ಯಶಸ್ಸಿಗೆ ಕಾರಣವಾಗಿತ್ತು. ಅವರೊಬ್ಬ ಜಾತ್ಯಾತೀತ ನಾಯಕರಾಗಿ ಕಾಂಗ್ರೆಸ್‌ನಲ್ಲಿದ್ದುದು ಎಲ್ಲರೂ ಬಲ್ಲರು. ಆ ನಂತರ ೬ನೇ ಸಾರ್ವತ್ರಿಕ ಚುನಾವಣೆಗಳಲ್ಲಿ ಹಾಗೂ ಮುಂದಿನ ಎಲ್ಲ ಚುನಾವಣೆಗಳಲ್ಲಿ ಜನತಾ ಪಾರ್ಟಿ, ಬಿಜೆಪಿ, ಲೋಕಶಕ್ತಿ, ಬಿಎಸ್‌ಪಿ (೧೯೯೯), ಜನತಾದಳ, ಕರ್ನಾಟಕ ವಿಕಾಸ ಪಾರ್ಟಿ, ಕರ್ನಾಟಕ ಕಾಂಗ್ರೆಸ್ ಪಾರ್ಟಿ ಸ್ಪರ್ಧೆಯಲ್ಲಿರುವುದನ್ನು ಕಾಣುತ್ತೇವೆ.

ರಾಷ್ಟ್ರ ಮತ್ತು ರಾಜ್ಯಗಳ ಚುನಾವಣೆಯಲ್ಲಿ ಸ್ಪರ್ಧಿಸುತ್ತಿರುವ ಪ್ರಮುಖ ರಾಜಕೀಯ ಪಕ್ಷಗಳು ಅಸ್ತಿತ್ವಕ್ಕೆ ಬಂದ ಅಥವಾ ಸ್ಥಾಪನೆಗೊಂಡ ವಿವರಗಳನ್ನು ಗಮನಿಸಬಹುದು.

| ಕ್ರ.ಸಂ. | ಪಕ್ಷ | ಸ್ಥಾಪನೆಯಾದ ವರ್ಷ |
|---|---|---|
| ೧. | ಅಕಾಲಿದಳ | ೧೯೨೧ |
| ೨. | ಅಖಿಲಭಾರತ ಹಿಂದೂ ಮಹಾಸಭಾ | ೧೯೫೧ |
| ೩. | AIDMK | ೧೯೭೨ |
| ೪. | All India Congerse Commettee (I) | ೧೯೭೮ |
| ೫. | All India Forward Block | ೧೯೪೦ |
| ೬. | Assam Gana Parishad | ೧೯೮೫ |
| ೭. | ಬಹುಜನ ಸಮಾಜ ಪಾರ್ಟಿ | ೧೯೮೪ |
| ೮. | BJP | ೧೯೮೦ |
| ೯. | CPI | ೧೯೨೫ |
| ೧೦. | CPI (Marxist) | ೧೯೬೪ |
| ೧೧. | DMK | ೧೯೪೯ |
| ೧೨. | ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ (S) | ೧೯೮೧ |
| ೧೩. | J & K National Conference | ೧೯೩೨ |
| ೧೪. | ಜನತಾದಳ | ೧೯೮೮ |
| ೧೫. | Peasants and Workers Praty of India | ೧೯೪೯ |
| ೧೬. | Republican Party of India | ------ |
| ೧೭. | Samajawadi Janata Party | ೧೯೯೧ |
| ೧೮. | Telugu Desham | ೧೯೮೨ |

(Government and Politics of Asian Countries, Virender Grover (Editor) Deep and Deep Publications Pvt. Ltd, New Delhi, 2000, P. 9)

ಈ ಹಿಂದಿನ ನ್ಯಾಷನಲ್ ಕಾಂಗ್ರೆಸ್, ಸ್ವಾತಂತ್ರ್ಯ ಬಂದ ನಂತರ ಅದನ್ನು ವಿಸರ್ಜಿಸಲು ಸೂಚಿಸಿದ ಗಾಂಧೀಜಿಯವರ ಒತ್ತಾಯದ ನಡುವೆಯೇ ಕಾಂಗ್ರೆಸ್ ಪಕ್ಷ ಸಕ್ರಿಯವಾಗಿ ರಾಷ್ಟ್ರ ಮತ್ತು ರಾಜ್ಯ ರಾಜಕಾರಣಗಳಲ್ಲಿ ಭಾಗವಹಿಸಿತ್ತು. ತನ್ನ ಅಸ್ತಿತ್ವವನ್ನು ಬಲಪಡಿಸಿಕೊಂಡಿತ್ತು. ನಂತರ ೧೯೭೮ರಲ್ಲಿ ಕಾಂಗ್ರೆಸ್ ಇಬ್ಭಾಗವಾಗಿ ಶ್ರೀಮತಿ ಇಂದಿರಾಗಾಂಧಿಯವರ ನೇತೃತ್ವದಲ್ಲಿ AICC (I) ಎಂದೂ ಇಂದಿರಾ ಕಾಂಗ್ರೆಸ್ ಎಂತಲೂ ದೇಶವ್ಯಾಪಿ ತನ್ನ ಶಾಖೆಗಳೊಂದಿಗೆ ಅಸ್ತಿತ್ವಕ್ಕೆ ಬಂತು. ಈಗಲೂ ಅದೇ ಹೆಸರಿನಲ್ಲಿ ಪಕ್ಷವು ರಾಜಕಾರಣದಲ್ಲಿ ಸಕ್ರಿಯವಾಗಿದೆ. ಹೀಗೆ ಕಾಂಗ್ರೆಸ್‌ನಿಂದ ಹೊರಬಂದ ಕೆಲ ನಾಯಕರು ಜಯಪ್ರಕಾಶ್ ನಾರಾಯಣ ಅವರ ನಾಯಕತ್ವದಲ್ಲಿ ಜನತಾಪಾರ್ಟಿಯನ್ನು ಕಟ್ಟಿದರು. ಕೇಂದ್ರದಲ್ಲಿ ೧೯೭೭ ರಿಂದ ೧೯೮೦ ರವರೆಗೆ ಈ ಪಕ್ಷ ಕಾಂಗ್ರೆಸ್‌ನ್ನು ಹೀನಾಯವಾಗಿ ಸೋಲಿಸಿ ಅಧಿಕಾರ ಹಿಡಿದಿತ್ತು. ನಂತರ ಜನತಾಪಾರ್ಟಿಯಲ್ಲಿನ

ಭಿನ್ನಾಭಿಪ್ರಾಯಗಳಿಂದ ಹೊರಬಂದವರೆಲ್ಲಾ ಬೇರೆ ಬೇರೆ ಪಕ್ಷಗಳಲ್ಲಿ ವಿಲೀನಗೊಂಡರು ಕೆಲವರು ಹೊಸಪಕ್ಷವೊಂದನ್ನು ಕಟ್ಟಿದರು. ಅವುಗಳಲ್ಲಿ ಲೋಕದಳ, ಬಿ.ಜೆ.ಪಿ.ಗಳು ಪ್ರಮುಖವು. ನಂತರ ಕೆಲ ಸಮಾನ ಮನಸ್ಕ ಪಕ್ಷಗಳು, ನಾಯಕರು ಜತೆಗೂಡಿ ಜನತಾದಳ ಪಕ್ಷವನ್ನು ಹುಟ್ಟುಹಾಕಿದರು. ಕೆಲವು ವರ್ಷಗಳ ತರುವಾಯ ಇದೂ ಇಬ್ಭಾಗವಾಯಿತು. ಈ ಮಧ್ಯೆ ಕೆಲವು ರಾಜ್ಯಗಳಲ್ಲಿ ಪ್ರಾದೇಶಿಕ ಪಕ್ಷಗಳು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಲೇ ರಾಜ್ಯ ರಾಜಕಾರಣದ ಅಧಿಕಾರವನ್ನು ಹಿಡಿದರು. ಬಹುತೇಕ ಪ್ರಾದೇಶಿಕ ಪಕ್ಷಗಳು ಭಾಷೆ, ನಾಡು, ನುಡಿ, ಸಂಸ್ಕೃತಿ ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡಂತಹವು. ಆದರೆ ಈ ಪಕ್ಷಗಳೇ ಇಂದು ತ್ರಿಶಂಕು ಸಂಸತ್ತನ್ನು ನಿವಾರಿಸುವಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತಿರುವುದು ರಾಜಕಾರಣದ ಲೆಕ್ಕಾಚಾರಗಳಲ್ಲಿ ವಿಸ್ಮಯವನ್ನುಂಟುಮಾಡುತ್ತವೆ. ಈಗಿನ ಕೇಂದ್ರ ರಾಜಕಾರಣದ ಅಧಿಕಾರ ಕಾರ್ಯೋನ್ಮುಖವಾಗಿರುವುದೇ (ಎನ್‌ಡಿಎ ಹೆಸರಿನಲ್ಲಿ) ಉತ್ತಮ ಉದಾಹರಣೆಯಾಗಿದೆ.

ಹೀಗೆ ದೇಶ ರಾಜಕಾರಣ ಮತ್ತು ಕರ್ನಾಟಕ ರಾಜ್ಯ ರಾಜಕಾರಣ ಒಂದಕ್ಕೊಂದು ಮುಖಾಮುಖಿಯಾಗುವ ಪ್ರಸಂಗವೇ ಅಧಿಕ. ೧೯೮೩ ರಿಂದಲೂ ಈ ಪ್ರಕ್ರಿಯೆ ಘಟಿಸುತ್ತಿದೆ. ರಾಜ್ಯದಲ್ಲಿರುವ ಸರಕಾರ ನಡೆಸುವ ರಾಜಕೀಯ ಪಕ್ಷ, ಕೇಂದ್ರದ ಅಧಿಕಾರದಲ್ಲಿರುವ ರಾಜಕೀಯ ಪಕ್ಷಗಳು ಒಂದೇ ಆಗಿಲ್ಲ. ರಾಜ್ಯದಲ್ಲಿ ಜನತಾಪಕ್ಷ (೧೯೮೩) ವಿದ್ದಾಗ ಕೇಂದ್ರದಲ್ಲಿ ಕಾಂಗ್ರೆಸ್; ರಾಜ್ಯದಲ್ಲಿ ಕಾಂಗ್ರೆಸ್ ಇದ್ದಾಗ ಕೇಂದ್ರದಲ್ಲಿ ಕಾಂಗ್ರೆಸ್ಸೇತರ ಸರಕಾರಗಳು ಇರುತ್ತವೆ. ಇಲ್ಲಿ ನಾವು ಒಂದು ಅಂಶವನ್ನು ಗಮನಿಸಬಹುದು. ಕಾಕತಾಳೀಯವೆಂಬಂತೆ ನಮ್ಮ ರಾಜ್ಯ ರಾಜಕಾರಣವನ್ನು ನಾವೇ ಮಾಡಿಕೊಂಡು ಕೇಂದ್ರಕ್ಕೆ ಯಾವತ್ತೂ ಬೇರೆ ಸರಕಾರವನ್ನು ರಚಿಸುವ ಅವಕಾಶ ಮಾಡಿಕೊಡುತ್ತಿರುವುದು.

ಭಾರತ ರಾಜಕೀಯದ ಚುನಾವಣಾ ಫಲಿತಾಂಶ ಕರ್ನಾಟಕ ರಾಜ್ಯ ರಾಜಕಾರಣ ಹಾಗೂ ಬಳ್ಳಾರಿ ಜಿಲ್ಲಾ ರಾಜಕಾರಣದಲ್ಲಿಯೂ ಪರಿಣಾಮ ಬೀರಿದೆ. ೧೯೫೨ ರಿಂದ ೧೯೮೦ ರವರೆಗೆ ಸುಮಾರು ೩೦ ವರ್ಷಗಳು ಅಂದರೆ ಕೇಂದ್ರದಲ್ಲಿ ಇಂದಿರಾ ಕಾಂಗ್ರೆಸ್ ಇರುವವರೆಗೂ ರಾಜ್ಯ ರಾಜಕಾರಣವು ಅಬಾಧಿತವಾಗಿ ಕಾಂಗ್ರೆಸ್ ಪಕ್ಷದಿಂದಲೇ ಕ್ರಿಯಾಶೀಲವಾಗಿರುವುದನ್ನು ಕಾಣಬಹುದು. ಹಾಗೆಯೇ ಬಳ್ಳಾರಿ ಜಿಲ್ಲಾ ರಾಜಕಾರಣವು ಲೋಕಸಭಾ ಹಾಗೂ ವಿಧಾನಸಭಾಗಳೆರಡರಲ್ಲೂ ಬಹುತೇಕ ಕಾಂಗ್ರೆಸ್ ಪಕ್ಷವು ಹೆಚ್ಚು ವಿಜಯಿಯಾಗಿರುವುದನ್ನು ಚುನಾವಣಾ ಅಂಕಿ-ಅಂಶಗಳು ಸ್ಪಷ್ಟಪಡಿಸುತ್ತವೆ. ಬಳ್ಳಾರಿಯ ಲೋಕಸಭಾ ಕ್ಷೇತ್ರವನ್ನು ಅಭ್ಯರ್ಥಿಯಾಗಿ ಮಹಿಳೆ ಶ್ರೀಮತಿ ಬಸವರಾಜೇಶ್ವರಿಯವರು ಸತತ ಮೂರುಬಾರಿ ಕಾಂಗ್ರೆಸ್ ಪಕ್ಷದಿಂದ ೧೯೮೪, ೧೯೮೯ ಮತ್ತು ೧೯೯೧ರ ಚುನಾವಣೆಗಳಲ್ಲಿ ಸ್ಪರ್ಧಿಸಿ ಪ್ರತಿನಿಧಿಸಿದ್ದಾರೆ. ಇವರ ಸಮೀಪ ಪ್ರತಿಸ್ಪರ್ಧಿಗಳು ಜನತಾ (ದಳ) ಪಕ್ಷದ ಪುರುಷ ಅಭ್ಯರ್ಥಿಗಳು ಎನ್ನುವುದನ್ನು ಈ ಕೆಳಗಿನ ಕೋಷ್ಟಕದಿಂದ ಗಮನಿಸಬಹುದು.

| ಚುನಾವಣಾ ವರ್ಷ | ಅಭ್ಯರ್ಥಿಗಳು | ಪಕ್ಷ | ಪಡೆದ ಶೇಕಡಾವಾರು ಮತದಾನ | ಫಲಿತಾಂಶ |
|---|---|---|---|---|
| ೧೯೮೪ | ಶ್ರೀಮತಿ ಬಸವರಾಜೇಶ್ವರಿ<br>ಶ್ರೀ ಎಂ.ಪಿ.ಪ್ರಕಾಶ್<br>(ಇದಲ್ಲದೇ ೬ ಜನ ಪಕ್ಷೇತರರು) | ಕಾಂಗ್ರೆಸ್<br>ಜನತಾಪಕ್ಷ | ೫೬.೦೪<br>೪೧.೪೦ | ಆಯ್ಕೆ<br>- |
| ೧೯೮೯ | ಶ್ರೀಮತಿ ಬಸವರಾಜೇಶ್ವರಿ<br>ಎನ್.ತಿಪ್ಪಣ್ಣ<br>ಕೊಟ್ರಯ್ಯ | ಕಾಂಗ್ರೆಸ್<br>ಜನತಾದಳ<br>ಜನತಾಪಾರ್ಟಿ (JP) | ೫೧.೦೯<br>೪೦.೦೨<br>೬.೦೨ | ಆಯ್ಕೆ<br>-<br>- |
| ೧೯೯೧ | ಶ್ರೀಮತಿ ಬಸವರಾಜೇಶ್ವರಿ<br>ವೈ.ನೆಟ್ಟಕಲ್ಲಪ್ಪ<br>ಕೆ.ನಾಗಭೂಷಣ<br>(ಇದಲ್ಲದೆ ೧೧ ಜನ ಪಕ್ಷೇತರರು) | ಕಾಂಗ್ರೆಸ್<br>ಜನತಾದಳ<br>ಬಿ.ಜೆ.ಪಿ. | ೪೫.೯೨<br>೩೩.೦೨<br>೧೬.೫೯ | ಆಯ್ಕೆ<br>-<br>- |
| ಆಧಾರ : ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿಗಳು, ಬಳ್ಳಾರಿ | | | | |

ಈ ಮೂರು ಲೋಕಸಭಾ ಚುನಾವಣೆಗಳಲ್ಲಿ ವಿಜಯೀ ಅಭ್ಯರ್ಥಿಯು ಪಡೆದ ಶೇಕಡವಾರು ಮತದಾನ ಚುನಾವಣೆಯಿಂದ ಚುನಾವಣೆಗೆ ಇಳಿಮುಖವಾಗಿದೆ. ಇದಕ್ಕೆ ಕಾರಣ ಆಯಾ ಚುನಾವಣಾ ವರ್ಷಗಳಲ್ಲಿ ಆಯ್ಕೆ ಬಯಸಿ ಸ್ಪರ್ಧೆಗೆ ನಿಂತ ವಿವಿಧ ಪಕ್ಷಗಳ ಅಭ್ಯರ್ಥಿಗಳು ಹೆಚ್ಚಾಗಿರುವುದು. ಹೀಗೆ ಬಹುಮುಖ ಸ್ಪರ್ಧೆ ಸಂದರ್ಭದಲ್ಲಿ ಜನರ ಮತಗಳು ಹಂಚಿಕೆಯಾಗುವುದು ಅಥವಾ ಮತಗಳು ತಿರಸ್ಕೃತಗೊಳ್ಳುವುದು ಇತ್ಯಾದಿಗಳಿಂದ ಶೇಕಡಾವಾರು ಮತದಾನ ಪಡೆಯುವಲ್ಲಿ ಇಳಿಮುಖ ಕಾಣುತ್ತೇವೆ. ೧೯೮೪ ಮತ್ತು ೧೯೮೯ರ ಚುನಾವಣೆಗಳಲ್ಲಿ ಶೇಕಡವಾರು ಮತದಾನದ ವ್ಯತ್ಯಾಸ ಶೇ. ೪.೯೫ ಇದ್ದುದು, ೧೯೯೧ ರ ಚುನಾವಣೆಯಲ್ಲಿ ಅದರ ಪ್ರಮಾಣ ೫.೧೭ ಆಗಿತ್ತು. ಅಂದರೆ ಹಿಂದಿನ ಚುನಾವಣೆಯ ೧೯೮೯ರ ಶೇಕಡವಾರು ಮತದಾನಕ್ಕಿಂತ ೧೯೯೧ರ ಚುನಾವಣೆಯಲ್ಲಿ ಇಳಿಕೆ ಕಂಡಿದ್ದು ಒಟ್ಟು ಶೇಕಡಾ ಮತದಾನ ವ್ಯತ್ಯಾಸ ೦.೨೨ ಇದೆ. ಹಾಗೆಯೇ ಮುಂದಿನ ಚುಣಾವಣೆಗಳಲ್ಲಿ ಈ ವ್ಯತ್ಯಾಸ ಇಳಿಮುಖವನ್ನು ಕಾಣುತ್ತೇವೆ. ಬಳ್ಳಾರಿಯ ಲೋಕಸಭಾ ಚುನಾವಣೆಯಲ್ಲಿ ಅತಿ ಹೆಚ್ಚು ಶೇಕಡವಾರು ೭೨.೭೦ ಮತದಾನ ಪಡೆದು ವಿಜಯಿಯಾದ ಅಭ್ಯರ್ಥಿ ಕಾಂಗ್ರೆಸ್ ಪಕ್ಷದ ಡಾ. ವಿ.ಕೆ.ಆರ್.ವಿ.ರಾವ್ (೧೯೭೧ ರಲ್ಲಿ). ಡಾ. ವಿ.ಕೆ.ಆರ್.ವಿ.ರಾವ್ ಅವರು ಈ ಹಿಂದಿನ ೧೯೬೭ರ ಚುನಾವಣೆಯಲ್ಲಿ ಪಡೆದ ಶೇಕಡವಾರು ಮತದಾನ ೫೩.೭೮ ರಷ್ಟಿದ್ದು, ೧೯೭೧ ರಲ್ಲಿ ೭೨.೭೦ಕ್ಕೆ ಹೆಚ್ಚಿದೆ. ೧೯೭೭ರ ಚುನಾವಣೆ ಸಂದರ್ಭದಲ್ಲಿ ಭಾರತದ ಬಹುತೇಕ ರಾಜ್ಯಗಳಲ್ಲಿ ಕಾಂಗ್ರೆಸ್ ವಿರೋಧಿ ಅಲೆ ಇದ್ದಂತಹ ಪರಿಸ್ಥಿತಿಯಲ್ಲಿ (ಆಗ ಜಯಪ್ರಕಾಶ್ ನಾರಾಯಣ್ ಅವರ ಜನತಾಪಕ್ಷ ಹೆಚ್ಚು ಪ್ರಚಾರದಲ್ಲಿತ್ತು) ಬಳ್ಳಾರಿ ಲೋಕಸಭಾ ಕ್ಷೇತ್ರವು ಕಾಂಗ್ರೆಸ್‌ನ ಭದ್ರಕೋಟೆಯಾಗಿತ್ತು ಎನ್ನುವುದನ್ನು ವಿಶೇಷವಾಗಿ ಗಮನಿಸಬಹುದು ಮತ್ತು ಅದೇ ಚುನಾವಣೆಯಲ್ಲಿಯೇ ವಿಜಯಿ ಅಭ್ಯರ್ಥಿ ಕೆ.ಎಸ್.ವೀರಭದ್ರಪ್ಪ ಅತಿಹೆಚ್ಚು ಶೇಕಡವಾರು ಮತದಾನ ೬೯.೫೮ ಪಡೆದಿದ್ದರು. ೧೯೮೦ ರಿಂದೀಚೆಗಿನ ಎಲ್ಲಾ ಲೋಕಸಭಾ ಚುನಾವಣೆಗಳಲ್ಲಿ (೧೯೯೮ ರವರೆಗೆ) ಗೆದ್ದ ಅಭ್ಯರ್ಥಿಯು ಪಡೆದ ಶೇಕಡವಾರು ಮತದಾನ ಇಳಿಮುಖವಾಗಿಯೇ ಇದೆ. ೧೯೯೧ರ ಲೋಕಸಭಾ ಚುನಾವಣೆ ಕಣದಲ್ಲಿ ಬಳ್ಳಾರಿ ಲೋಕಸಭೆ ಕ್ಷೇತ್ರಕ್ಕೆ ಬಹುಮುಖ ಸ್ಪರ್ಧೆ ಏರ್ಪಟ್ಟಿತ್ತು. ವಿಜಯಿ

ಅಭ್ಯರ್ಥಿಯಾದ ಶ್ರೀಮತಿ ಬಸವರಾಜೇಶ್ವರಿ ಇವರೊಂದಿಗೆ ಜನತಾದಳ, ಬಿ.ಜೆ.ಪಿ. ಪಕ್ಷಗಳಲ್ಲದೆ, ಇನ್ನೂ ೧೧ ಜನ ಪಕ್ಷೇತರರು ಅಭ್ಯರ್ಥಿಗಳಾಗಿ ಚುನಾವಣೆಗೆ ನಿಂತಿದ್ದರು. ೧೯೯೬ರ ಚುನಾವಣೆಯಲ್ಲಿ ಪ್ರಮುಖ ವಿಜಯೀ ಪಕ್ಷವಾದ ಕಾಂಗ್ರೆಸ್‌ನೊಂದಿಗೆ ಜನತಾದಳ, ಬಿ.ಜೆ.ಪಿ, ಕೆ.ಸಿ.ಪಿ. ಪಕ್ಷಗಳು ಹಾಗೂ ಅತಿ ಹೆಚ್ಚು ಅಂದರೆ ೨೧ ಜನ ಪಕ್ಷೇತರ ಅಭ್ಯರ್ಥಿಗಳು ಕಣದಲ್ಲಿ ಇಳಿದಿದ್ದರು. ಈ ಚುನಾವಣೆಯಲ್ಲಿ ಶ್ರೀ ಕೆ.ಸಿ.ಕೊಂಡಯ್ಯ ಗೆದ್ದರು. ಅವರು ಪಡೆದ ಶೇಕಡಾವಾರು ಮತದಾನ ೪೩.೮೮ ಮತ್ತು ೧೯೯೮ರ ಚುನಾವಣೆಯಲ್ಲಿ ಶ್ರೀಯುತರೇ ಗೆದ್ದು ಪಡೆದ ಶೇಕಡವಾರು ಮತದಾನ ಹಿಂದಿನಕ್ಕಿಂತ ಕಡಿಮೆಯಾಗಿತ್ತು. ಅವರು ಒಟ್ಟು ಶೇ. ೩೯.೭೫ ರಷ್ಟು ಮತದಾನ ಪಡೆದಿದ್ದರು.

ಬಳ್ಳಾರಿ ಲೋಕಸಭೆ ೧೯೯೯ರ ಚುನಾವಣಾ ಕಣವು ಅತ್ಯಂತ ಮಹತ್ವದ್ದಾಗಿತ್ತು. ದೇಶ-ವಿದೇಶಗಳ ರಾಜನೀತಿ ಪಂಡಿತರ ನಾಯಕರುಗಳ ಗಮನ ಸೆಳೆದ ಸಂದರ್ಭ ಅದಾಗಿತ್ತು. ಪ್ರಮುಖವಾಗಿ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳ ನಡುವಿನ ಹೋರಾಟವಾಗಿತ್ತು. ಕಾಂಗ್ರೆಸ್ ಅಧ್ಯಕ್ಷೆ ಶ್ರೀಮತಿ ಸೋನಿಯಾಗಾಂಧಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಮತ್ತು ಬಿಜೆಪಿಯ ಗೆಲುವಿನ ಕುದುರೆ ಎಂದೆನಿಸಿದ ಶ್ರೀಮತಿ ಸುಷ್ಮಾಸ್ವರಾಜ್ ಇವರೀರ್ವರ ನಡುವೆ ಚುನಾವಣಾ ಹಣಾಹಣಿ ನಡೆದಿತ್ತು. ಎರಡೂ ಪಕ್ಷಗಳಿಗೂ ಬಳ್ಳಾರಿ ಲೋಕಸಭೆ ಕ್ಷೇತ್ರ ಪ್ರತಿಷ್ಠೆಯ ಕಣವಾಗಿಯೇ ಇತ್ತು. ಅಂತಿಮವಾಗಿ ಕಾಂಗ್ರೆಸ್‌ನ ಉಕ್ಕಿನ ಕೋಟೆ ಎಂದು ಪ್ರಸಿದ್ಧಿ ಹೊಂದಿದ ಬಳ್ಳಾರಿ ಲೋಕಸಭೆ ಕ್ಷೇತ್ರದ ಜನತೆ ಸೋನಿಯಾ ಪರ ತೀರ್ಪು ಕೊಟ್ಟರು. ಸುಷ್ಮಾಸ್ವರಾಜ್ ಅವರು ೩,೫೮,೫೫೦ ಮತಗಳನ್ನು ಪಡೆದರೆ, ಸೋನಿಯಾಗಾಂಧಿ ಅವರು ೪,೧೪,೬೫೦ ಮತಗಳನ್ನು ಪಡೆದರು. ೫೬,೧೦೦ ಮತಗಳ ಅಂತರದಿಂದ ಸುಷ್ಮಾ ಅವರು ಸೋಲನ್ನೊಪ್ಪಿಕೊಂಡರು.

ಶ್ರೀಮತಿ ಸೋನಿಯಾಗಾಂಧಿಯವರು ತಮ್ಮ ಪತಿ ದಿ. ರಾಜೀವ್ ಗಾಂಧಿ ಅವರ ಕ್ಷೇತ್ರ ಅಮೇಥಿಯಿಂದ ಸ್ಪರ್ಧಿಸಿ ಗೆದ್ದ ನಂತರ ಬಳ್ಳಾರಿ ಲೋಕಸಭಾ ಕ್ಷೇತ್ರಕ್ಕೆ ರಾಜೀನಾಮೆ ಸಲ್ಲಿಸಿದರು. ತೆರವಾದ ಈ ಸ್ಥಾನಕ್ಕೆ ಅದೇ ಪಕ್ಷದ ಶ್ರೀ ಕೊಳೂರು ಬಸವನಗೌಡ ಅವರು ಚುನಾವಣೆಗೆ ಸ್ಪರ್ಧಿಸಿ ಸಂಸತ್ ಸದಸ್ಯರಾಗಿ ಆಯ್ಕೆಗೊಂಡರು. ಈ ಚುನಾವಣಾ ಅಂಕಿ ಅಂಶಗಳನ್ನು ಪರಿಶೀಲಿಸಲಾಗಿ ಬಳ್ಳಾರಿ ಲೋಕಸಭಾ ರಾಜಕಾರಣವಾಗಲೀ ಅಥವಾ ಜಿಲ್ಲಾ ರಾಜಕಾರಣವಾಗಲೀ (ವಿಧಾನಸಭೆಯೂ ಸೇರಿ) ಕಾಂಗ್ರೆಸ್ ಪಕ್ಷಕ್ಕೆ ಬಲವಾದ ಹಿಡಿತವಿರುವುದನ್ನು ಕಾಣುತ್ತೇವೆ. ೧೯೫೨ ರಿಂದ ೧೯೯೯ರ ವರೆಗಿನ ಎಲ್ಲ ಲೋಕಸಭಾ ಚುನಾವಣೆಗಳಲ್ಲಿ ಬಳ್ಳಾರಿಯು ಕಾಂಗ್ರೆಸ್ ಪಕ್ಷದ ಅತ್ಯಂತ ಮಹತ್ವದ ಹಾಗೂ ಭದ್ರ ಕೋಟೆಯೆಂದು ಸಾಬೀತುಪಡಿಸಿದೆ. ೧೯೭೮ರವರೆಗೆ ವಿಧಾನಸಭಾ ಚುನಾವಣೆಗಳಲ್ಲೂ ಬಹುತೇಕ ಕಾಂಗ್ರೆಸ್ ಪಕ್ಷ ತನ್ನ ಪ್ರಾಬಲ್ಯವನ್ನು ಹೊಂದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಭಾರತದ ರಾಜಕಾರಣ ಸಂದರ್ಭದಲ್ಲಿ ಮಹಿಳೆಯರು ಅಧಿಕಾರ ರಾಜಕೀಯವನ್ನು ಸಂಪೂರ್ಣವಾಗಿ ಯಲ್ಲದಿದ್ದರೂ ಕನಿಷ್ಠ ಮಟ್ಟದ ಪ್ರಾತಿನಿಧ್ಯವನ್ನು ಸಹ ಹೊಂದಿಲ್ಲದಿರುವುದು ಕೆಲ ಅಂಕಿ ಅಂಶಗಳ

ವರದಿಯಿಂದ ತಿಳಿದುಬರುತ್ತದೆ. ವಿಶ್ವಸಂಸ್ಥೆಯ ಸೆಕ್ರೆಟರಿ ಜನರಲ್‌ರ ವರದಿಯ ಪ್ರಕಾರ (6th conference of common wealth Ministers Responsible for Women's Affairs, the 84th constitutional amendment finds a mention under 'good practice') ಮಹಿಳೆಯ ರಾಜಕೀಯ ಪಾಲ್ಗೊಳ್ಳುವಿಕೆ ಕುರಿತಂತೆ ಹತ್ತು ರಾಷ್ಟ್ರಗಳ ಮುಂಚೂಣಿ ಪಟ್ಟಿಯಲ್ಲಿ ಭಾರತ ಇಲ್ಲದಿರುವುದು ಮಹಿಳೆಯ ರಾಜಕಾರಣದ ಮಿತಿಯನ್ನು ಸೂಚಿಸುತ್ತದೆ. ಅದರ ಪ್ರಕಾರ ರಾಜಕೀಯ ಪ್ರಾತಿನಿಧ್ಯವನ್ನು ಮಹಿಳೆಯರು ಕೇಂದ್ರ ಕಾರ್ಯಾಂಗ ಅಥವಾ ನ್ಯಾಯಾಂಗ ಸಚಿವ ಸಂಪುಟ ಮತ್ತು ಸಂಸತ್ತಿನಲ್ಲಿ ಹೊಂದಿರುವುದು ನ್ಯೂಜಿಲ್ಯಾಂಡ್ ದೇಶದಲ್ಲಿ. ಈ ದೇಶ ಮಹತ್ವದ ಸ್ಥಾನವನ್ನು ಹೊಂದಿದೆ. ಈಗ ನ್ಯೂಜಿಲ್ಯಾಂಡ್ ತನ್ನ ರಾಷ್ಟ್ರೀಯ ಅಸೆಂಬ್ಲಿಯಲ್ಲಿ ಶೇ. ೩೦ ರಷ್ಟು ಸದಸ್ಯರ ಪ್ರಾತಿನಿಧ್ಯವನ್ನು ಹೊಂದಿದೆ. ವಿಶ್ವದ ಮಾತೃ ಸಂಸತ್ತೆಂದೇ ಹೆಗ್ಗಳಿಕೆಗೆ ಪಾತ್ರವಾದ ಯುನೈಟೆಡ್ ಕಿಂಗ್‌ಡಂ ನಂತಹ ದೇಶದಲ್ಲಿ ಅತೀ ಕಡಿಮೆ ಅಂದರೆ ಶೇ.೧೮ ರಷ್ಟು ಮಹಿಳಾ ಸದಸ್ಯರ ಪ್ರಾತಿನಿಧ್ಯವನ್ನು ಸಂಸತ್ತು ಹೊಂದಿರುವದು ಹತ್ತು ರಾಷ್ಟ್ರಗಳ ಪಟ್ಟಿಯಲ್ಲಿ ಕೊನೆಯದಾಗಿದೆ. ಎಲ್ಲಕ್ಕಿಂತ ಮೊದಲು ಜಾಂಬಿಯಾ ದೇಶದಲ್ಲಿ ಮಹಿಳೆಯರು ಶೇ. ೩೦.೮ ರಷ್ಟು ಸ್ಥಾನವನ್ನು ಅಲ್ಲಿನ ಸಚಿವ ಸಂಪುಟಗಳಲ್ಲಿ ಪಡೆದಿದ್ದಾರೆಂದರೆ ಮಹಿಳೆಯು ನೀತಿ-ನಿರೂಪಣೆ ಹಾಗೂ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಂತದಲ್ಲಿನ ಅವರ ಪಾತ್ರವನ್ನು ಗಮನಿಸುವಂಥದ್ದು. ಆದರೆ ಭಾರತದ ಸಂಸತ್ತಿನಲ್ಲಿ ಮಹಿಳಾ ಪ್ರಾತಿನಿಧ್ಯ ಶೇ.೭.ಅನ್ನು ದಾಟಿಲ್ಲ. ಹಾಗೇ ಸಚಿವ ಸಂಪುಟದಲ್ಲಿ ಪ್ರಾತಿನಿಧ್ಯ ಶೇ. ೮.೫೭ ಮಾತ್ರ. ಭಾರತಕ್ಕಿಂತ ಮೊದಲೇ ಹತ್ತು ರಾಷ್ಟ್ರಗಳ ಮುಂಚೂಣಿ ಪಟ್ಟಿಯಲ್ಲಿ ಆ್ಯಂಟಿಗುವಾ ಮತ್ತು ಬರ್ಬುಡಾಗಳು ಮಹಿಳೆಯರಿಗೆ ಸಚಿವ ಸಂಪುಟಗಳಲ್ಲಿ ಶೇ. ೧೭.೬ ರಷ್ಟು ಸ್ಥಾನವನ್ನು ನೀಡಿವೆ. (Indian Adult Education Association, News letter Vol. 22, p.2, No.2, May 2000, IAEA, New Delhi)

ಒಟ್ಟಾರೆ ಸಂಸತ್ತಿಗೆ ಸದಸ್ಯರಾಗಿ ಆಯ್ಕೆಗೊಂಡ ಮಹಿಳೆಯರ ಪ್ರಮಾಣ ಅಷ್ಟೇನೂ ತೃಪ್ತಿದಾಯಕ ವಾಗಿಲ್ಲ. ಎಲ್ಲ ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ಮಹಿಳೆಯರನ್ನು ಉದ್ಧಾರಮಾಡಲು ರಾಜಕೀಯ ಅಧಿಕಾರ ಕೊಡುವುದರ ಮೂಲಕವೇ ಸಾಧ್ಯ ಎಂಬುದಾಗಿ ಹುಸಿ ಭರವಸೆಗಳನ್ನು ನೀಡುತ್ತಿರುವುದು ಸತ್ಯಕ್ಕೆ ದೂರವಾದ್ದೇನಲ್ಲ. ಚುನಾವಣೆಯಲ್ಲಿ ಭಾಗವಹಿಸಿ, ಸದಸ್ಯ ಅಭ್ಯರ್ಥಿಯಾಗಿ ಚುನಾವಣೆಗೆ ನಿಂತರೇ ಅವಳ ವಿರುದ್ಧ ಮಹಿಳೆಯನ್ನು ನಿಲ್ಲಿಸುವುದರ ಮೂಲಕ ಅವಳಿಗೆ ದಕ್ಕಬೇಕಾದ ಬೇರೊಂದು ಸ್ಥಾನ ಇಂತಹ ಪುರುಷ ಹುನ್ನಾರದಿಂದ ಕೈತಪ್ಪಿ ಹೋಗುತ್ತದೆ. ಮಹಿಳೆಗೆ ಮಹಿಳೆಯನ್ನೇ ಎದುರಾಳಿಯಾಗಿ ನಿಲ್ಲಿಸುವುದರ ಹಿಂದಿನ ತಂತ್ರ ಪುರುಷ ತನ್ನ ಹೊರ ಸ್ಥಾನವನ್ನು ಭದ್ರವಾಗಿ ಕಾಯ್ದಿಟ್ಟುಕೊಳ್ಳುವುದು ಅವನ ರಾಜಕೀಯ ಲೆಕ್ಕಾಚಾರವೂ ಹೌದು. ೧೯೫೨ರ ಲೋಕಸಭೆಯಲ್ಲಿ ೪೯೪ರ ಪೈಕಿ ೪೫ ಜನ ಮಹಿಳಾ ಸದಸ್ಯರಿದ್ದರು. ಆದರೆ ೧೯೯೬ರ ಲೋಕಸಭೆಗೆ ೫೪೩ರ ನಡುವೆ ೩೯ ಜನ ಮಹಿಳೆಯರು ಸಂಸತ್ತಿಗೆ ಆಯ್ಕೆಯಾಗಿದ್ದಾರೆ. ಅಂದರೆ ೪೫ ವರ್ಷಗಳ ಅಂತರದಲ್ಲಿಯೇ ಈ ಅಸಮಾನ ಮಹಿಳಾ ರಾಜಕೀಯ ಪಾಲ್ಗೊಳ್ಳುವಿಕೆ ಕ್ರಮೇಣ ಇಳಿಮುಖವಾಗಿದೆ. ಇಲ್ಲಿ ಪಾಲ್ಗೊಳ್ಳುವಿಕೆಗಿಂತ ಅವಳ ರಾಜಕೀಯವನ್ನು ಒಪ್ಪುವಲ್ಲಿ ಪುರುಷ ಸಮಾಜ ನಿರಾಕರಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

## ೪. ವಿಧಾನಸಭೆ ಮತ್ತು ಮಹಿಳೆ

ಕೇಂದ್ರ ಶಾಸಕಾಂಗದ ಮಾದರಿಯಲ್ಲೇ, ರಾಜ್ಯ ಶಾಸಕಾಂಗಗಳು ರಚನೆಗೊಂಡಿರುವುದನ್ನು ಭಾರತ ಸಂವಿಧಾನದ ಕಲಂ ೧೭೦ ರಡಿಯಲ್ಲಿ ವಿವರಿಸಲಾಗಿದೆ. ಮೇಲ್ಮನೆಯನ್ನು ವಿಧಾನಪರಿಷತ್ ಎಂತಲೂ, ಕೆಳಮನೆಯನ್ನು ವಿಧಾನಸಭೆಯೆಂತಲೂ ಕರೆಯಲಾಗುತ್ತದೆ. ವಿಧಾನಪರಿಷತ್ ಹಿರಿಯರ ಸದನವಾಗಿದ್ದು, ವಿಧಾನಸಭೆಯಂತೆ ವಿಸರ್ಜನೆಗೊಳಪಡುವುದಿಲ್ಲ. ಮೇಲ್ಮನೆಯು ಶಾಶ್ವತ ಸದನವಾಗಿದ್ದು, ಅದರ ಸದಸ್ಯರ ಅವಧಿ ಆರು ವರ್ಷಗಳು. ಪ್ರತಿ ೨ ವರ್ಷಗಳಿಗೊಮ್ಮೆ ಸದನದ ೧/೩ ರಷ್ಟು ಸದಸ್ಯರು ನಿವೃತ್ತಿ ಹೊಂದುವರು. ಆ ಸ್ಥಾನಗಳಿಗೆ ಪುನಃ ಚುನಾವಣೆಗಳ ಮೂಲಕ ಪರೋಕ್ಷವಾಗಿ ಸದಸ್ಯರು ಆಯ್ಕೆ ಹೊಂದುತ್ತಾರೆ.

ರಾಜ್ಯಪಾಲರು, ರಾಜ್ಯಶಾಸಕಾಂಗ ಅಂದರೆ ಮೇಲ್ಮನೆ ಹಾಗೂ ಕೆಳಮನೆಗಳ ಕೇಂದ್ರಬಿಂದುವಾಗಿರುತ್ತಾರೆ. ಕೇಂದ್ರದಲ್ಲಿದ್ದಂತೆ ರಾಜ್ಯಪಾಲರು ಉಭಯ ಸದನಗಳ ಜಂಟಿ ಅಧಿವೇಶನ ಕರೆಯುವ ಮಸೂದೆಗಳನ್ನು ಅಂಕಿತದೊಂದಿಗೆ ಅನುಮೋದಿಸಲು ಅಧಿಕಾರವುಳ್ಳವರಾಗಿರುತ್ತಾರೆ. ಕಾಲಕಾಲಕ್ಕೆ ರಾಜ್ಯಾಡಳಿತವು ಸಂವಿಧಾನಕ್ಕನುಗುಣವಾಗಿ ನಡೆಯುತ್ತಿದೆಯೇ ಇಲ್ಲವೇ ಎಂಬುದನ್ನು ರಾಷ್ಟ್ರಪತಿಗಳಿಗೆ ಮಾಹಿತಿಯನ್ನು ತಿಳಿಸುತ್ತವೆ. ರಾಜ್ಯದಲ್ಲಿ ಸಂವಿಧಾನ ಬಾಹಿರ ಆಡಳಿತ ನಡೆಸುತ್ತಿದ್ದಲ್ಲಿ ಸರಕಾರವನ್ನು ವಿಸರ್ಜಿಸುವಂತೆ ರಾಷ್ಟ್ರಪತಿಗಳಿಗೆ ಶಿಫಾರಸ್ಸು ಮಾಡುತ್ತಾರೆ. ಶಾಸಕಾಂಗದ ನಾಯಕ ಅಥವಾ ಮುಖ್ಯಮಂತ್ರಿ ಸರಕಾರದ ಮುಖ್ಯಸ್ಥನಾದರೆ, ರಾಜ್ಯಪಾಲರು ರಾಜ್ಯದ ಮುಖ್ಯಸ್ಥರಾಗಿರುತ್ತಾರೆ. ಪ್ರತಿಯೊಂದು ಮಸೂದೆಯು (B II) ರಾಜ್ಯಪಾಲರ ಅದೇಶ, ಅನುಮೋದನೆಯಿಲ್ಲದೇ ಯಾವುದೂ ಕಾನೂನಾಗಿ ಜಾರಿಗೊಳಿಸಲು ಸಾಧ್ಯವಿಲ್ಲ.

ರಾಜ್ಯ ಶಾಸಕಾಂಗವನ್ನು ಅಂದರೆ (ಕೆಳಮನೆಯನ್ನು) ವಿಧಾನಸಭೆಯನ್ನು ಜನರ ಸದನವೆನ್ನುತ್ತಾರೆ. ಈ ಸದನವು ಜನರಿಂದ ನೇರವಾಗಿ ಚುನಾಯಿತಗೊಂಡ ಪ್ರತಿನಿಧಿಗಳನ್ನು ಹೊಂದಿರುತ್ತದೆ. ಹಾಗಾಗಿ ಸದಸ್ಯರು ಜನರಿಗೆ ನೇರವಾಗಿ ಹೊಣೆಗಾರರಾಗಿರುತ್ತಾರೆ. ಜನರ ಆಸೆ-ಆಕಾಂಕ್ಷೆಗಳನ್ನು ಈಡೇರಿಸುವ ನಿಟ್ಟಿನಲ್ಲಿ ಪ್ರತಿನಿಧಿಗಳು ಸ್ಪಂದಿಸಬೇಕಾಗುತ್ತದೆ. ಮೇಲ್ಮನೆಯಲ್ಲಿನ ಸದಸ್ಯರಿಗಿಂತ (೬೬) ಕೆಳಮನೆಯಲ್ಲಿನ ಸದಸ್ಯರು ಅಧಿಕವಾಗಿರುತ್ತಾರೆ. ಈಗ ೧೯೯೯ರ ಚುನಾವಣೆಯಲ್ಲಿದ್ದಂತೆ ವಿಧಾನಸಭೆಯ ಸದಸ್ಯರು ೨೨೪ ಈ ಎರಡೂ ಸದನಗಳ ಕಾರ್ಯಕಲಾಪಗಳನ್ನು ನಡೆಸಲು Speaker ಏನೋ Deputy Speakerನ್ನು ಕೆಳಮನೆಯ ಸದಸ್ಯರು, Chairman ಮತ್ತು Deputy Chairmanನ್ನು ಮೇಲ್ಮನೆಯ ಸದಸ್ಯರು ತಮ್ಮಲ್ಲಿಯೇ ಇವರನ್ನು ಅನುಕ್ರಮವಾಗಿ ಚುನಾಯಿಸುತ್ತಾರೆ. ಇವರು ಸದನದ ದೈನಂದಿನ ಅಧಿವೇಶನದ ಕಾರ್ಯಕಲಾಪಗಳನ್ನು ಸಂವಿಧಾನಕ್ಕನುಗುಣವಾಗಿ ಸುಗಮವಾಗಿ ನಡೆಯುವಂತೆ ನೋಡಿಕೊಳ್ಳುತ್ತಾರೆ.

ಈ ಹಿಂದಿನ ಚರ್ಚೆಯಲ್ಲಿ ಗಮನಿಸಿದಂತೆ ರಾಷ್ಟ್ರಮಟ್ಟದ ರಾಜಕಾರಣದಲ್ಲಿನ ಲಿಂಗತಾರತಮ್ಯದ ಯಥಾ ಸ್ಥಿತಿಯೇ ಇಲ್ಲಿದೆ ಅಥವಾ ಮುಂದುವರಿದಿದೆ ಎನ್ನಬಹುದು. ವಿಧಾನಸಭೆ ಕೆಳಮನೆಯಾಗಿದ್ದು, ಜನರ

ನೇರ ಸಂಪರ್ಕವಿರುವ ಸದನ ರಾಜ್ಯದ ಕಲ್ಯಾಣಕ್ಕಾಗಿ, ಜನರ ಹಿತಾಸಕ್ತಿಗಳಿಗನುಗುಣವಾಗಿ ಕಾನೂನು, ನಿಯಮಾವಳಿಗಳನ್ನು ರಚಿಸುವ ಸಭೆ. ಇದು ಜನ ವಿರೋಧಿ ಕಾನೂನುಗಳನ್ನು ರದ್ದುಪಡಿಸುವ, ಹೊಸದಾಗಿ ಕಾಯಿದೆಗಳನ್ನು ರಚಿಸುವ ಅಥವಾ ತಿದ್ದುಪಡಿಮಾಡುವ ಅಧಿಕಾರವನ್ನು ಸಂವಿಧಾನಬದ್ಧವಾಗಿ ಸದಸ್ಯರಿಂದ ಚಲಾಯಿಸಲ್ಪಟ್ಟಿರುತ್ತದೆ. ಅಷ್ಟೇ ಅಲ್ಲ ವಿಧಾನಸಭೆಯಲ್ಲಿ ಆಳುವ ಪಕ್ಷದ ಸಚಿವರ ಉಸ್ತುವಾರಿಯಲ್ಲಿ ಕಾನೂನು ಅನುಷ್ಠಾನದ ಹೊಣೆಗಾರಿಕೆಯನ್ನು ಕಾರ್ಯಾಂಗದ ಮೂಲಕ ನಿರ್ವಹಿಸುತ್ತಾರೆ. ಹೀಗೆ ಸಂವಿಧಾನ ಬದ್ಧವಾಗಿ ವಿಧಾನಸಭೆಯು ಅಂದರೆ ಶಾಸಕಾಂಗವು ಎರಡು ರೀತಿಯ ಜವಾಬ್ದಾರಿಗಳನ್ನು ಹೊತ್ತುಕೊಂಡು ರಾಜ್ಯಾಡಳಿತವನ್ನು ನಡೆಸುತ್ತದೆ.

ರಾಜ್ಯ ಶಾಸಕಾಂಗಕ್ಕೆ (ವಿಧಾನ ಸಭೆಗೆ) ಆಯ್ಕೆಯಾಗಿರುವ ಈಗಿನ ೨೨೮ ಸದಸ್ಯರಲ್ಲಿಯೂ ಲಿಂಗಾಧಾರಿತ ಅಸಮಾನತೆಯನ್ನು ಕಾಣುತ್ತೇವೆ. ಹಾಗೆಯೇ ಸಚಿವ ಸಂಪುಟದಲ್ಲಿಯೂ ಹೇಳಿಕೊಳ್ಳುವಂತಹ ಸ್ಥಿತಿಯಲ್ಲಿ ಮಹಿಳೆಯರಿಲ್ಲ. ಕೆಲವು ರಾಜ್ಯ ಶಾಸಕಾಂಗಗಳಲ್ಲಿ ಮಹಿಳೆಯರು ಬಹುಮತ ಪಡೆದ ಪಕ್ಷದ ನಾಯಕಿಯರಾಗಿ ಸರಕಾರವನ್ನು ರಚಿಸಿದ ಮುಖ್ಯಮಂತ್ರಿಗಳಾಗಿ ಅಧಿಕಾರ ನಡೆಸುತ್ತಿರುವುದನ್ನು ಕಾಣಬಹುದು. ಅವರೆಂದರೆ ತಮಿಳುನಾಡಿನ ಎ.ಐ.ಡಿ.ಎಂ.ಕೆ. ಪಕ್ಷದ ಜಯಲಲಿತಾ, ಉತ್ತರ ಪ್ರದೇಶದಲ್ಲಿ BSP ಪಕ್ಷ ಇತರೇ ಮಿತ್ರ ಪಕ್ಷಗಳಾದ BJP ಯೊಂದಿಗೆ ಸರಕಾರ ರಚಿಸಿ ಮುಖ್ಯಮಂತ್ರಿಯಾಗಿರುವ ಕು.ಮಾಯಾವತಿ ಪ್ರಮುಖರು. ಹಾಗೆಯೇ ಕೆಲವು ರಾಜ್ಯ ಶಾಸಕಾಂಗಗಳಲ್ಲಿ ಸದನದ ಕಾರ್ಯ ಕಲಾಪಗಳನ್ನು ನಡೆಸಿಕೊಡುವ 'ಸಭಾಪತಿ' Speaker ಆಗಿ (ಆಂಧ್ರ ಪ್ರದೇಶದ ವಿಧಾನಸಭೆಯಲ್ಲಿ) ಜವಾಬ್ದಾರಿಗಳನ್ನು ನಿಭಾಯಿಸುತ್ತಿದ್ದಾರೆ. ಆದರೆ ಈ ಪ್ರಮಾಣ ಪ್ರಜಾತಾಂತ್ರಿಕವಾಗಿರದೇ, ಲಿಂಗ ತಾರತಮ್ಯದಿಂದ ಕೂಡಿದೆ ಎಂದೆನ್ನಬಹುದು. ಒಟ್ಟು ಜನ ಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರಿಗಿರುವ ರಾಜಕೀಯ ಪ್ರಾತಿನಿಧ್ಯ ತೀರಾ ನಗಣ್ಯವಾಗಿದೆ ಎಂದೇ ಹೇಳಬಹುದು. ಬಳ್ಳಾರಿ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳಲ್ಲಿ ಮಹಿಳಾ ಮತದಾರರು ಪುರುಷರಿಗಿಂತ ಅಧಿಕವಾಗಿದ್ದರೂ, ಚುನಾವಣೆಗೆ ಸ್ಪರ್ಧಿಸುವ ಅಥವಾ ಮತ ಚಲಾಯಿಸುವಾಗ ಸ್ವಯಂ ನಿರ್ಧಾರ ತೆಗೆದುಕೊಳ್ಳುವಲ್ಲಿನ ದೌರ್ಬಲ್ಯವನ್ನು ಪುರುಷ ರಾಜಕಾರಣ ಹೇಗೆ ಬಳಸಿಕೊಂಡಿದೆ ಎಂಬುದು ಗೊತ್ತಾಗುತ್ತದೆ.

ರಾಜ್ಯ ಶಾಸಕಾಂಗವು ಕಾನೂನುಗಳನ್ನು ರಚಿಸುವ ನೀತಿ-ನಿರ್ಧಾರಗಳನ್ನು ರೂಪಿಸುವ ಹೊಣೆಗಾರಿಕೆಯಿಂದ ಅವುಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಸಚಿವಾಲಯದ ಕಾರ್ಯಾಂಗದ ಮೂಲಕ ನಿರ್ವಹಿಸಲಾಗುತ್ತದೆ. ಕರ್ನಾಟಕದಲ್ಲಿ ಆರಂಭದ ಚುಣಾವಣೆಯಿಂದ ಈವರೆಗೆ ಶಾಸಕಾಂಗದ ನಾಯಕರಾಗಿ ಪಕ್ಷ ರಾಜಕಾರಣ ನಡೆಸಿದ ಚುನಾವಣೆ ಮಾಹಿತಿಗಳನ್ನು ಗಮನಿಸೋಣ.

ರಾಜ್ಯದ ಮೊಟ್ಟಮೊದಲ ಮುಖ್ಯಮಂತ್ರಿಯಾಗಿ ಕೆ.ಸಿ.ರೆಡ್ಡಿಯವರು ಶಾಸಕಾಂಗದ ನಾಯಕರಾಗಿ ೧೯೪೭ ರಿಂದ ೧೯೫೨ ರವರೆಗೆ ಅಧಿಕಾರ ನಿರ್ವಹಿಸಿದರು.

| ಕ್ರ.ಸಂ. | ಸಾರ್ವತ್ರಿಕ ಚುನಾವಣೆ ನಡೆದ ವರ್ಷ | ಅವಧಿ | ಪಕ್ಷ ರಾಜಕಾರಣ / ನಾಯಕ |
|---|---|---|---|
| ೧. | ೧೯೫೨ | (೧೯೫೨-೫೬) | ಕಾಂಗ್ರೆಸ್ - ಕೆ.ಹನುಮಂತಯ್ಯ |
| | | ೧೯.೮.೫೬ - ೩೧.೧೦.೫೬ | ಕಾಂಗ್ರೆಸ್ - ಕಡಿದಾಳ ಮಂಜಪ್ಪ |
| ೨. | ೧೯೫೭ | ೧೯೫೬-೫೮ | ಕಾಂಗ್ರೆಸ್ - ಎಸ್. ನಿಜಲಿಂಗಪ್ಪ |
| | | ೧೯೫೮-೬೨ | ಕಾಂಗ್ರೆಸ್ - ಬಿ.ಡಿ. ಜತ್ತಿ. |
| ೩. | | ೧೯೬೨ ಮಾರ್ಚ್‌ನಿಂದ ಜೂನ್ | ಕಾಂಗ್ರೆಸ್ - ಎಸ್.ಆರ್. ಕಂಠಿ |
| ೪. | ೧೯೬೨ | ೧೯೬೨-೬೮ | ಕಾಂಗ್ರೆಸ್ - ಎಸ್. ನಿಜಲಿಂಗಪ್ಪ |
| ೫. | | ೧೯೬೮-೭೧ | ಕಾಂಗ್ರೆಸ್ - ವೀರೇಂದ್ರ ಪಾಟೀಲ್ |
| ೬. | ೧೯೭೨ | ೧೯೭೨-೭೭ | ಕಾಂಗ್ರೆಸ್ (R) - ಡಿ. ದೇವರಾಜ ಅರಸು |
| ೭. | ೧೯೭೮ | ೧೯೭೮-೮೦ | ಕಾಂಗ್ರೆಸ್ - ಡಿ. ದೇವರಾಜ ಅರಸು |
| | | ೧೯೮೦-೮೩ | ಕಾಂಗ್ರೆಸ್ - ಆರ್. ಗುಂಡುರಾವ್ |
| ೮. | ೧೯೮೩ | ೧೯೮೩-೮೮ | ಜನತಾ - ರಾಮಕೃಷ್ಣ ಹೆಗಡೆ |
| ೯. | ೧೯೮೯-೯೦ | ೧೯೮೮-೮೯ | ಜನತಾ - ಎಸ್.ಆರ್. ಬೊಮ್ಮಾಯಿ |
| ೧೦. | | ೩೧.೧೧.೮೯-೧೦.೧೦.೯೦ | ಕಾಂಗ್ರೆಸ್ - ವೀರೇಂದ್ರಪಾಟೀಲ್ |
| ೧೧. | | ೧೯೯೦-೯೨ | ಕಾಂಗ್ರೆಸ್ - ಎಸ್. ಬಂಗಾರಪ್ಪ |
| ೧೨. | | ೧೯೯೨-೯೪ | ಕಾಂಗ್ರೆಸ್ - ವೀರಪ್ಪ ಮೊಯಿಲಿ |
| ೧೩. | ೧೯೯೪ | ೧೯೯೪-೯೬ | ಜನತಾದಳ - ಎಚ್.ಡಿ. ದೇವೇಗೌಡ |
| ೧೪. | | ೩೧.೫.೯೬-೯೯ | ಜನತಾದಳ - ಜೆ.ಎಚ್. ಪಟೇಲ್ |
| ೧೫. | ೧೯೯೯ | ೧೧.೧೦.೯೯ ರಿಂದ | ಕಾಂಗ್ರೆಸ್ - ಎಸ್.ಎಂ. ಕೃಷ್ಣ |

ಈ ಮೇಲಿನ ಚುನಾವಣಾ ಫಲಿತಾಂಶಗಳಿಂದ ರಾಜ್ಯದ ಪಕ್ಷ ರಾಜಕಾರಣದಲ್ಲಿನ ಏಳು-ಬೀಳುಗಳನ್ನು ಗುರುತಿಸಬಹುದು. ೧೯೫೨ ರಿಂದ ೧೯೭೮ ರವರೆಗೆ ನಡೆದ ಸಾರ್ವತ್ರಿಕ ಚುನಾವಣೆ ಫಲಿತಾಂಶಗಳು ಕಾಂಗ್ರೆಸ್ ಪರವಾಗಿರುವುದು ಕಂಡುಬರುತ್ತದೆ. ೧೯೮೩ರ ಚುನಾವಣೆಗಳಿಂದ ಕಾಂಗ್ರೆಸ್ ಪರ ಅಲೆ ಕ್ರಮೇಣ ಕುಂಠಿತವಾಗಿದೆ. ಅಲ್ಲಿಂದ ಪ್ರತಿ ಸಾರ್ವತ್ರಿಕ ಚುನಾವಣೆಗಳಲ್ಲಿ ಒಮ್ಮೆ ಕಾಂಗ್ರೆಸ್‌ಗೆ ಅಧಿಕಾರ ನೀಡಿದರೆ ಮತ್ತೊಮ್ಮೆ ಕಾಂಗ್ರೆಸ್ಸೇತರ ಅಂದರೆ ಜನತಾಪಕ್ಷ / ಜನತಾದಳಗಳಿಗೆ ಸರಕಾರ ರಚಿಸಲು ಇಲ್ಲಿನ ಮತದಾರರು ಅಧಿಕಾರ ನೀಡಿರುವುದು ಸ್ಪಷ್ಟವಾಗಿ ಕಂಡುಬಂದಿದೆ. ಇದೇ ಸ್ಥಿತಿ ಬಳ್ಳಾರಿ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳಲ್ಲಿ ಚುನಾವಣಾ ಫಲಿತಾಂಶಗಳು ಬಿಂಬಿಸುತ್ತವೆ. ಈಗಾಗಲೇ ಚರ್ಚಿಸಿದಂತೆ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳು ಅವಿಭಜಿತ ಬಳ್ಳಾರಿ ಜಿಲ್ಲೆಯಲ್ಲಿ ೧೯೫೨ ರಿಂದ ೧೯೭೨ ರವರೆಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿದ್ದಂತಹ ಒಟ್ಟು ಕ್ಷೇತ್ರಗಳು ಎಂಟು, ಅವೆಂದರೆ ಶಿರುಗುಪ್ಪ, ಕುರುಗೋಡು, ಬಳ್ಳಾರಿ, ಹಡಗಲಿ, ಹೊಸಪೇಟೆ, ಕೂಡ್ಲಿಗಿ,

ಸಂಡೂರು ಮತ್ತು ಹರಪನಹಳ್ಳಿ ವಿಧಾನಸಭಾ ಕ್ಷೇತ್ರಗಳು. ೧೯೬೨ರ ಸಾರ್ವತ್ರಿಕ ಚುನಾವಣೆ ಕೂಡ್ಲಿಗಿ ವಿಧಾನಸಭಾ ಕ್ಷೇತ್ರವನ್ನು ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಗೆ ಮೀಸಲಿರಿಸಿತ್ತು. ನಂತರ ಅದನ್ನು ಹರಪನಹಳ್ಳಿ ಕ್ಷೇತ್ರಕ್ಕೆ ಮೀಸಲಾತಿ ವಿಸ್ತರಿಸಲಾಯಿತು. ವಿಧಾನಸಭಾ ಕ್ಷೇತ್ರಗಳ ವಿಂಗಡಣೆ ಸಂದರ್ಭದಲ್ಲಿ (೧೯೭೮ರ ಸಾರ್ವತ್ರಿಕ ಚುನಾವಣೆಯಲ್ಲಿ) ಕೊಟ್ಟೂರು ಕ್ಷೇತ್ರವನ್ನು ಕೂಡ್ಲಿಗಿಯಿಂದ ಪ್ರತ್ಯೇಕಿಸಿ ರಚಿಸಲಾಯಿತು. ಆಗಿನ ವಿಧಾನಸಭಾ ಕ್ಷೇತ್ರಗಳ ಸಂಖ್ಯೆ ಒಟ್ಟು ಒಂಬತ್ತು ಇದ್ದವು. ೧೯೯೯ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳ ಸಂದರ್ಭದಲ್ಲಿ ಹರಪನಹಳ್ಳಿ ತಾಲೂಕನ್ನು ಜಿಲ್ಲೆಗಳ ಪುನರ್‌ವಿಂಗಡಣೆಯಲ್ಲಿ ದಾವಣಗೆರೆ ಜಿಲ್ಲೆಗೆ ಸೇರಿಸಲಾಯಿತು. ಹೀಗಾಗಿ ಹಾಲಿ (೧೯೯೯ಕ್ಕೆ) ಜಿಲ್ಲೆಯಲ್ಲಿರುವ ವಿಧಾನಸಭಾ ಕ್ಷೇತ್ರಗಳು ಒಟ್ಟು ಎಂಟು ಇದ್ದಂತಾಗಿದೆ.

ಜಿಲ್ಲೆಯು (ವಿಧಾನಸಭಾ) ಶಾಸಕಾಂಗದಲ್ಲಿ ತನ್ನ ಪ್ರತಿನಿಧಿಗಳನ್ನು ೧೯೫೨ ರಿಂದಲೂ ಚುನಾವಣೆ ಮೂಲಕ ಕಳಿಸುತ್ತಲೇ ಸಕ್ರಿಯ ರಾಜಕಾರಣದ ಹಿರಿಮೆಯನ್ನು ಮೆರೆದಿದೆ. ಪ್ರಪ್ರಥಮವಾಗಿ ಜಿಲ್ಲೆಯಿಂದ ಮಹಿಳಾ ಅಭ್ಯರ್ಥಿಯೊಬ್ಬರನ್ನು MLA ಆಗಿ ಆರಿಸಿ ಕಳಿಸಿರುವುದು. ಅವರೇ ಶ್ರೀಮತಿ ಅಲ್ಲಂ ಸುಮಂಗಳಮ್ಮ (ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಿಂದ) ೧೯೫೭ರ ಸಾರ್ವತ್ರಿಕ ಚುಣಾವಣೆಯಲ್ಲಿ ವಿಜಯಿಯಾದರು. ಈಗಾಗಲೇ ಚರ್ಚಿಸಿದಂತೆ ಸುಮಂಗಳಮ್ಮನವರ ಆಯ್ಕೆ, ಆ ಸಂದರ್ಭಗಳನ್ನು ಜಿಲ್ಲೆಯ ಜನತೆ ಮಹಿಳಾಪರ ರಾಜಕಾರಣವನ್ನು ಪುರಸ್ಕರಿಸಿದ ರೀತಿ ಇತ್ಯಾದಿಗಳೆಲ್ಲವೂ ರಾಜಕಾರಣದಲ್ಲಿ ಮಹಿಳೆ ಗಟ್ಟಿ ನೆಲೆ ಕಂಡುಕೊಳ್ಳಲು ಸಾಧ್ಯವಾಯಿತೆನ್ನಬಹುದು. ಇದು ಎಷ್ಟರಮಟ್ಟಿಗೆ ಪ್ರಭಾವಶಾಲಿಯಾಗಿತ್ತೆಂದರೆ ಶ್ರೀಮತಿ ಅಲ್ಲಂ ಸುಮಂಗಳಮ್ಮನವರು ಪ್ರತಿನಿಧಿಸಿದ್ದ ಕುರುಗೋಡು ಕ್ಷೇತ್ರ ಅವರ ನಂತರ ಪತಿ ಅಲ್ಲಂ ಕರಿಬಸಪ್ಪನವರನ್ನು ಪ್ರತಿನಿಧಿಸುವಂತೆ ಮಾಡಿತು. ಹೀಗಾಗಿ ಸಮಂಗಳಮ್ಮನವರ ವರ್ಚಸ್ಸು ಹಾಗೂ ಪ್ರಭಾವದ ಪರಿಣಾಮವಾಗಿ ಅಲ್ಲಂ ಕರಿಬಸಪ್ಪನವರು ೧೯೬೨ ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿ ಆಯ್ಕೆಯಾದರು. ಪುನಃ ೧೯೬೭ ರಲ್ಲಿಯೂ ಅದೇ ಪಕ್ಷದಿಂದ MLA ಆದರು. ಇಷ್ಟಕ್ಕೆ ಮುಗಿಯದೇ ಸುಮಂಗಳಮ್ಮನವರ ಪ್ರಭಾವ ೧೯೮೫, ೧೯೯೪ ಮತ್ತು ೧೯೯೯ರಲ್ಲಿ ನಡೆದ ಎಲ್ಲ ಚುನಾವಣೆಗಳಲ್ಲಿ ಅದೇ ಕುಟುಂಬದ ಅಲ್ಲಂ ವೀರಭದ್ರಪ್ಪನವರು ಕಾಂಗ್ರೆಸ್ ಪಕ್ಷದಿಂದ ಸತತವಾಗಿ MLA ಆಗಿ ಆಯ್ಕೆಯಾಗುವವರೆಗೂ ಮುಂದುವರೆದಿದೆ.

ಶ್ರೀಮತಿ ಅಲ್ಲಂ ಸುಮಂಗಳಮ್ಮನವರ ನಂತರವೂ ಬಳ್ಳಾರಿ ಜಿಲ್ಲೆಯ ರಾಜಕಾರಣದಲ್ಲಿ ಮಹಿಳೆಯರ ಭಾಗವಹಿಸುವಿಕೆ ನಿರಂತರವಾಗಿದೆ. ೧೯೬೨ರಲ್ಲಿ ಜರುಗಿದ ಹೊಸಪೇಟೆ ವಿಧಾನಸಭಾ ಕ್ಷೇತ್ರದಿಂದ ಶ್ರೀಮತಿ ಮುರಾರಿ ಕಮಲ ಅವರು ಪ್ರಜಾ ಸೋಷಲಿಸ್ಟ್ ಪಾರ್ಟಿಯಿಂದ ಆಯ್ಕೆಯಾಗಿ ರಾಜ್ಯ ವಿಧಾನಸಭೆ ಪ್ರವೇಶಿಸಿದರು. ಕಮಲ ಅವರು ತಮ್ಮ ಪ್ರತಿಸ್ಪರ್ಧಿ ಆರ್. ನಾಗನಗೌಡ (ಭಾರತ ರಾಷ್ಟ್ರೀಯ ಕಾಂಗ್ರೆಸ್) ರನ್ನು ಸುಮಾರು ೧೦,೭೬೦ ಮತಗಳ ಅಂತರದಿಂದ ಸೋಲಿಸಿದ್ದು ಮಹತ್ವದ್ದಾಗಿತ್ತು. ಅಖಂಡ ಭಾರತದಲ್ಲಿ ಕಾಂಗ್ರೆಸ್ ಪಕ್ಷದ ಅತ್ಯಂತ ಸುವರ್ಣಕಾಲವಿದ್ದಂತಹ ಸಂದರ್ಭದಲ್ಲಿ ಶ್ರೀಮತಿ ಮುರಾರಿ ಕಮಲರ ಆಯ್ಕೆ ಮತದಾರರ

ಸ್ವಾತಂತ್ರ್ಯವನ್ನು, ಸ್ವಾಭಿಮಾನವನ್ನು ಸೂಚಿಸುತ್ತಿತ್ತು. ಇದೇ ಅವಧಿಯಲ್ಲಿ ಚುನಾವಣೆ ನಡೆದ ಕೂಡ್ಲಿಗಿ ವಿಧಾನಸಭಾ ಮೀಸಲು ಕ್ಷೇತ್ರಕ್ಕೆ ಬಸವ್ವ ಅವರು ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದ್ದರು. ಪಕ್ಷೇತರ ಅಭ್ಯರ್ಥಿ ವಿ.ನಾಗಪ್ಪ ಅವರಿಂದ ೬೯೮೩ ಮತಗಳ ಅಂತರದಿಂದ ಪರಾಭವಗೊಂಡಿದ್ದು ಅಂದಿನ ರಾಜಕೀಯ ಲೆಕ್ಕಾಚಾರಗಳ ತಿರುವು ಮುರುವುಗಳನ್ನು ಸೂಚಿಸುತ್ತಿತ್ತು. ಹಾಗೆಯೇ ಬಳ್ಳಾರಿ ವಿಧಾನಸಭಾ ಕ್ಷೇತ್ರಕ್ಕೆ ಜರುಗಿದ ೧೯೮೫ರ ಚುನಾವಣೆಯಲ್ಲಿ ಶಾರದಾ ಮಳೆ ಬೆನ್ನೂರು ಸಿ.ಪಿ.ಐ. ಪಕ್ಷದಿಂದ ಪೈಪೋಟಿಯಾಗಿ ನಿಂತಿದ್ದರು. ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಎಂ.ರಾಮಪ್ಪ ಅವರಿಂದ ಕೇವಲ ೨೬೩೩ ಮತಗಳ ಅಂತರದಿಂದ ಸೋಲಬೇಕಾಯಿತು. ಆಗ ಕಣದಲ್ಲಿದ್ದ ಒಂಬತ್ತು ಅಭ್ಯರ್ಥಿಗಳ ಪೈಕಿ ಶಾರದಾ ಅವರೊಬ್ಬರೇ ಮಹಿಳಾ ಅಭ್ಯರ್ಥಿಯಾಗಿ ನಿಂತಿದ್ದರು.

ಇದೇ ರೀತಿಯಾಗಿ ಕೊಟ್ಟೂರು ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ.ಟಿ. ಮರುಳಸಿದ್ಧನಗೌಡರ ನಿಧನದಿಂದಾಗಿ ತೆರವಾದ ಸ್ಥಾನಕ್ಕೆ ೧೯೯೮ರಲ್ಲಿ ಉಪಚುನಾವಣೆ ನಡೆದು ಅವರ ಪತ್ನಿ ಟಿ. ಭಾಗೀರಥಿ ಮರುಳಸಿದ್ಧನಗೌಡ ಆಯ್ಕೆಗೊಂಡರು. ಶ್ರೀಮತಿ ಟಿ. ಭಾಗೀರಥಿಯವರು ಭಾರತ ರಾಷ್ಟ್ರೀಯ ಕಾಂಗ್ರೆಸ್‌ನಿಂದ ಸ್ಪರ್ಧಿಸಿದ್ದು, ತಮ್ಮ ಸಮೀಪದ ಪ್ರತಿಸ್ಪರ್ಧಿ ಲೋಕಶಕ್ತಿಯ ಶ್ರೀ ಎಂ.ಎಂ.ಜೆ. ಸ್ವರೂಪಾನಂದ ಅವರನ್ನು ೯೮೦೦ ಮತಗಳ ಅಂತರದಿಂದ ಸೋಲಿಸಿದ್ದರು. ಈ ಚುನಾವಣೆಯಲ್ಲಿ ಬಹುಶಃ ಮತದಾರರು ಅನುಕಂಪದ ಅಲೆಯಲ್ಲಿ ಭಾಗೀರಥಿಯವರಿಗೆ ಚುನಾಯಿಸಿದರೆ ರಾಜಕೀಯ ಲೆಕ್ಕಚಾರವಾಗಿತ್ತು. ಆದರೆ ೧೯೯೯ರಲ್ಲಿ ನಡೆದ ಚುನಾವಣೆಯಲ್ಲಿ ಪುನಃ ಶ್ರೀಮತಿ ಟಿ.ಭಾಗೀರಥಿಯವರು ೯೬೩೪ ಮತಗಳ ಅಂತರದಿಂದ J D (U)ನ ಅಭ್ಯರ್ಥಿಯನ್ನು ಸೋಲಿಸಿದರು. ಈ ಗೆಲುವು ಅನುಕಂಪದ ಅಲೆಯಲ್ಲಿ ಅಲ್ಲವೆಂಬುದು ಸ್ಪಷ್ಟವಾದಂತಿತ್ತು. ಹೀಗೆ ಜಿಲ್ಲೆಯಲ್ಲಿ ಮಹಿಳಾ ರಾಜಕಾರಣದ ಸಕ್ರಿಯ ಪಾಲ್ಗೊಳ್ಳುವಿಕೆ ಮೇಲ್ಮಟ್ಟದಲ್ಲಿಯೂ ಕ್ರಿಯಾಶಾಲಿ ಯಾಗಿರುವುದು ವಿಶೇಷವಾಗಿದೆ.

ಹೊಸಪೇಟೆ ವಿಧಾನಸಭಾ ಕ್ಷೇತ್ರವೂ ಸಹ ಮತ್ತೊಮ್ಮೆ ಶ್ರೀಮತಿ ಮುರಾರಿ ಕಮಲರ ನಂತರ ೧೯೯೯ರ ಚುನಾವಣೆಯಲ್ಲಿ ಮಹಿಳಾ ಅಭ್ಯರ್ಥಿ ಶ್ರೀಮತಿ ಗುಜ್ಜಲ ಜಯಲಕ್ಷ್ಮಿಯವರನ್ನು ಭಾರತ ರಾಷ್ಟ್ರೀಯ ಕಾಂಗ್ರೆಸ್ ಮೂಲಕ ಆರಿಸಿ ಜನತೆ ಸ್ತ್ರೀ ರಾಜಕಾರಣವನ್ನು ಪುರಸ್ಕರಿಸಿದ್ದಾರೆ. ಬಹುಮುಖ ಸ್ಪರ್ಧೆಯಿದ್ದದ್ದು ಅದು ತ್ರಿಕೋನ ಸ್ಪರ್ಧೆಯಾಗಿತ್ತು. ಶ್ರೀಮತಿ ಗುಜ್ಜಲ ಜಯಲಕ್ಷ್ಮಿಯವರು ಜನತಾದಳ ಮತ್ತು ಬಿಜೆಪಿ ಅಭ್ಯರ್ಥಿಯೊಂದಿಗೆ ಸ್ಪರ್ಧಿಸಿ ಭಾರಿ ಬಹುಮತದಿಂದ ವಿಜಯಿಯಾದರು.

೧೯೯೯ರ ಚುನಾವಣೆಯ ಅಂಕಿ ಅಂಶಗಳನ್ನು ಗಮನಿಸಿದರೆ, ಜಿಲ್ಲೆಯ ಅರ್ಧದಷ್ಟು ವಿಧಾನಸಭಾ ಕ್ಷೇತ್ರಗಳಲ್ಲಿ ಮಹಿಳಾ ಮತದಾರರೇ ಪುರುಷರಿಗಿಂತ ಹೆಚ್ಚಾಗಿರುವುದು ವಾಸ್ತವದ ಸಂಗತಿ. ಜಿಲ್ಲೆಯ ಮಹಿಳಾ ಮತದಾರರ ಪ್ರಮಾಣವನ್ನು ಕೆಳಕಂಡ ಕೋಷ್ಟಕದಿಂದ ತಿಳಿಯಬಹುದು.

| ವಿಧಾನಸಭಾ ಕ್ಷೇತ್ರ | ಪುರುಷ | ಮಹಿಳೆ | ಒಟ್ಟು ಮತದಾರರು | ಪುರುಷ | ಮಹಿಳೆ | ಒಟ್ಟುಮತ ಚಲಾಯಿಸಿದವರು |
|---|---|---|---|---|---|---|
| ಶಿರುಗುಪ್ಪ | ೯೧೦೮೬ | ೯೩೩೦೧ | ೧,೮೪,೩೮೭ | ೬೫೧೪೧ | ೫೭೭೫೩ | ೧೨೨೮೯೪ |
| ಕೂಡ್ಲಿಗಿ | ೭೧೬೦೭ | ೭೨೩೪೬ | ೧೪೩೯೫೩ | ೫೩೯೨೦ | ೪೯೫೬೪ | ೧೦೩೪೮೪ |
| ಕೊಟ್ಟೂರು | ೬೮೫೬೦ | ೬೯೮೩೦ | ೧,೩೮,೩೯೦ | ೫೩೦೨೭ | ೪೭೪೯೨ | ೧೦೦೫೧೯ |
| ಹಡಗಲಿ | ೭೧೧೩೮ | ೭೧೭೨೫ | ೧೪೨೮೬೩ | ೫೫೩೮೭ | ೫೦೬೯೩ | ೧೦೬೦೮೦ |

ಜಿಲ್ಲೆಯ ಎಂಟು ವಿಧಾನಸಭಾ ಕ್ಷೇತ್ರಗಳ ಪೈಕಿ ಕುರುಗೋಡು, ಬಳ್ಳಾರಿ, ಹೊಸಪೇಟೆ ಮತ್ತು ಸಂಡೂರುಗಳನ್ನು ಹೊರತುಪಡಿಸಿ ಮೇಲಿನ ಕೋಷ್ಟಕದಲ್ಲಿನ ಕ್ಷೇತ್ರಗಳು ಅತಿ ಹೆಚ್ಚು ಮಹಿಳಾ ಮತದಾರರನ್ನು ಹೊಂದಿದ್ದರೂ ಕೂಡ ಯಾವುದೇ ನಿರ್ಣಾಯಕ ಪಾತ್ರವನ್ನು ವಹಿಸುವಲ್ಲಿ ವಿಫಲರಾಗಿದ್ದಾರೆ. ಕಾರಣ ಮಹಿಳಾ ಮತದಾರರು ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಳ್ಳದೇ ಇರುವುದು. ಹೀಗಾಗಿ ಅವರು ಮತಚಲಾಯಿಸುವುದು ರಾಷ್ಟ್ರೀಯ ಕರ್ತವ್ಯವೆಂಬುದನ್ನು ಮರೆಯುತ್ತಾರೆ. ಬಂದಿರುವ ಅವಕಾಶಗಳನ್ನು ಕಳೆದುಕೊಳ್ಳುತ್ತಾರೆ. ಎಲ್ಲಾ ೪ ಕ್ಷೇತ್ರಗಳಲ್ಲಿ ಒಟ್ಟು ಮತ ಚಲಾಯಿಸಿದವರು ಪುರುಷರೇ ಮಹಿಳೆರಿಗಿಂತ ಅಧಿಕವಾಗಿರುವುದು ಮಹಿಳೆಯರ ರಾಜಕೀಯ ಪ್ರಜ್ಞೆ ಇಲ್ಲಿ ಕಡಿಮೆಯಾಗಿರುವುನ್ನು ಗಮನಿಸಬಹುದು.

ಪ್ರಜಾಪ್ರಭುತ್ವದ ನಿರ್ಣಾಯಕರು, ನೀತಿ - ನಿರೂಪಕರೆಂದರೆ ಜನತೆ, ಅವರೇ ಮತದಾರರು. ಮತದಾನದ ಮೂಲಕ ತಮ್ಮ ಅಭಿಪ್ರಾಯವನ್ನು ಕ್ರೂಢೀಕರಿಸಿ ಅನೇಕ ಕಲ್ಯಾಣ ಕಾರ್ಯಕ್ರಮಗಳನ್ನು ಮಾಡಲು ಇರುವ ಸುವರ್ಣಾವಕಾಶ ಇದಾಗಿದೆ. ಇಂತಹ ಅಂಶ ಮಹಿಳಾ ಮತದಾರರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸಲು ಸಾಧ್ಯ. ಆ ಮೂಲಕ ಮಹಿಳೆಯರು ತಮ್ಮ ಅನಿಸಿಕೆಗಳನ್ನು ನಿರ್ಭಯವಾಗಿ ಹೇಳಲು, ಸಮಸ್ಯೆಗಳ ನಿವಾರಿಸಲು ಒಂದು ವೇದಿಕೆಯನ್ನು ಪಡೆದುಕೊಳ್ಳಬಹುದು. ರಾಜಕೀಯ ಪಕ್ಷಗಳ ವೇದಿಕೆಗಳೊಂದಿಗೆ ಜನಾಭಿಪ್ರಾಯವನ್ನು ಸಂಗ್ರಹಿಸಿ, ಅಧಿಕಾರ ರಾಜಕಾರಣದ ಚುಕ್ಕಾಣಿ ಹಿಡಿಯಲು ಸನ್ನದ್ಧರಾಗಿರುವುದು ಇದು ಪ್ರಜಾಪ್ರಭುತ್ವದಲ್ಲಿ ಮಾತ್ರ ಸಂಭವಿಸುವಂತಹದ್ದು.

ಹೀಗೆ ಜಾಗೃತಗೊಂಡ ಮಹಿಳಾ ಮತದಾರರು ಒಂದೇ ವೇದಿಕೆಯ ಅಥವಾ ಹಲವು ಹಿನ್ನೆಲೆಗಳಿಂದಾದರೂ ರಾಜಕಾರಣದಲ್ಲಿ ಪ್ರವೇಶಿಸಿದಲ್ಲಿ ಖಂಡಿತವಾಗಿ Vote Bankನ ಮೂಲಕ ಅಧಿಕಾರ ಹೊಂದುವರು. ಶಿರುಗುಪ್ಪ, ಕೂಡ್ಲಿಗಿ, ಹಡಗಲಿ ಮತ್ತು ಕೊಟ್ಟೂರು ಕ್ಷೇತ್ರಗಳು ಹೆಚ್ಚು ಮಹಿಳಾ ಮತಗಳನ್ನು ಹೊಂದಿದ್ದರೂ ಅಲ್ಲಿ ಲಿಂಗಪ್ರಜ್ಞೆ ಜಾತಿ ಏಜೆನ್ಸಿಯಂತೆ ಕೆಲಸ ಮಾಡಿಲ್ಲ. ಕೊಟ್ಟೂರು ಕ್ಷೇತ್ರ ಮಾತ್ರ ಮಹಿಳಾ ಶಾಸಕಿಯನ್ನು ಹೊಂದಿರುವುದು. ಸ್ತ್ರೀ ಮತದಾರರು ಹೆಚ್ಚಾಗಿರುವರು ಸಮಾನಾಂತರವಾಗಿದೆ. ಆದರೆ ಇಲ್ಲಿ ಗಮನಿಸಬೇಕಾದದ್ದು ಈ ಕ್ಷೇತ್ರಗಳಲ್ಲಿ ಮಹಿಳಾ ಮತದಾರರು ಹೆಚ್ಚಿದ್ದರೂ, ಅವರಲ್ಲಿ ಮತ ಚಲಾಯಿಸುವವರು ಪುರುಷರಿಗಿಂತ ಕಡಿಮೆಯಿರುವರು. ಸ್ತ್ರೀ ರಾಜಕಾರಣದ ಹಿನ್ನಡೆಗೆ ಕಾರಣವೋ ಅಥವಾ ಮಹಿಳಾ ಮತದಾನದಲ್ಲಿನ ತಾರತಮ್ಯಗಳು ಕಾರಣವೋ ವಿಶ್ಲೇಷಿಸಬೇಕಾಗಿದೆ.

## ೫. ನಗರಸಭೆ ಮತ್ತು ಮಹಿಳೆ

ಬ್ರಿಟೀಷ್ ಭಾರತದ ಕರ್ನಾಟಕದಲ್ಲಿ ೧೮೯೧ ರಿಂದ ಸ್ಥಾನಿಕ ಸಂಸ್ಥೆಗಳ ರಚನೆಗೆ ಪ್ರಯತ್ನ ನಡೆದಿರುವುದು ಕಂಡುಬರುತ್ತದೆ. ಈ ಫಲವಾಗಿ ೧೯೦೩ರಲ್ಲಿ ೮ ಜಿಲ್ಲಾ ಬೋರ್ಡ್ ೭೭ ತಾಲೂಕು ಬೋರ್ಡ್ ಮತ್ತು ೩೮೦ ಯೂನಿಯನ್‌ಗಳನ್ನು ಸ್ಥಾಪಿಸಲಾಯಿತು. ಆಂಗ್ಲರ ಆಳ್ವಿಕೆಗೊಳಪಟ್ಟ ಕರ್ನಾಟಕದ ಬಹುಭಾಗವೆಲ್ಲ ವಿವಿಧ ಪ್ರಾಂತ್ಯಗಳಾಗಿ ವಿಂಗಡಿಸಲ್ಪಟ್ಟಿತ್ತು. ಆಗಿನ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಬಳ್ಳಾರಿ ಜಿಲ್ಲೆಯಲ್ಲಿ ನಗರಸಭೆ ಮುನ್ಸಿಪಾಲಿಟಿಗಳು ಅಸ್ತಿತ್ವಕ್ಕೆ ಬಂದಿದ್ದೂ India Act of XXVI ೧೮೫೦ರ ಕಾಯಿದೆ ಜಾರಿಯಿಂದಲೇ. ಇದರಡಿ ಪಟ್ಟಣ / ನಗರಗಳ ನಿವಾಸಿಗಳು ತಮ್ಮ ಊರಿನ ಅಭಿವೃದ್ಧಿಗಾಗಿ ಮೂಲಭೂತ ಅವಶ್ಯಕತೆಗಳ ಪೂರೈಕೆಗಾಗಿ, ನಗರದ ನೈರ್ಮಲ್ಯಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲು ಮುನ್ಸಿಪಾಲಿಟಿಗಳಿಗೆ ಅವಕಾಶ ಕಲ್ಪಿಸಲಾಗಿತ್ತು. ಅದೇಕೋ ಈ ಯೋಜನೆಯು ಜನರ ಸಕ್ರಿಯ ಹಾಗೂ ಸ್ವಯಂ ಪ್ರೇರಣೆಯಿಂದ ಕೂಡಿದ ಪ್ರವೇಶವಿಲ್ಲದೆ ಯಾವುದೇ ಸಾಫಲ್ಯವನ್ನು ಕಾಣಲಿಲ್ಲ.

ಆ ನಂತರದಲ್ಲಿ Madras Towns Improvement Act X ೧೮೭೫, The Town Improvement Act of ೧೮೭೧ ಕಾಯಿದೆಗಳು ಮುನಿಸಿಪಾಲಿಟಿಗಳ ಕುರಿತು ಜಾರಿಗೊಳಿಸಲ್ಪಟ್ಟವು. Madras District Muncipalities Act IV of ೧೮೮೪ ಕಾಯಿದೆ ಜಾರಿಗೊಳ್ಳುವುದರ ಮೂಲಕ ಪ್ರಥಮ ಬಾರಿಗೆ 'ಮುನ್ಸಿಪಾಲಿಟಿ' ಶಬ್ಧವನ್ನು ಅಧಿಕೃತವಾಗಿ ಪರಿಚಯಿಸಲಾಯಿತು. ಈ ಕಾಯಿದೆಯಡಿ ೧೨ ಜನಕ್ಕಿಂತ ಕಡಿಮೆಯಿರದ ಸದಸ್ಯರನ್ನೊಳಗೊಂಡ ಮುನ್ಸಿಪಾಲಿಟಿಯು ೩ ವರ್ಷಗಳ ಅವಧಿಗೆ ಅಧಿಕಾರವನ್ನು ಹೊಂದಿರುತ್ತಿತ್ತು. ಆಗಿನ ಕಂದಾಯ ಅಧಿಕಾರಿ ಅಥವಾ ರೆವಿನ್ಯೂ ಆಫೀಸರ್ ಜಿಲ್ಲೆಯ ಎಲ್ಲಾ ಮುನ್ಸಿಪಾಲಿಟಿಗಳ ಪ್ರಭಾರಿ ಅಧಿಕಾರಿಯಾಗಿದ್ದು, ಪದನಿಮಿತ್ತ ಸದಸ್ಯನಾಗಿರುತ್ತಿದ್ದನು. ಉಳಿದ ಸದಸ್ಯರು ಸರಕಾರದಿಂದ ನೇಮಕಗೊಂಡವರು ಅಥವಾ ೩/೪ ರಷ್ಟು ಸದಸ್ಯರು ತಮ್ಮೊಳಗೆ ತೆರಿಗೆದಾರರಿಂದ ಚುನಾಯಿತಗೊಂಡು ನೇಮಕಗೊಳ್ಳುತ್ತಿದ್ದರು. ಜಿಲ್ಲಾಧಿಕಾರಿಯು ಎಲ್ಲಾ ಮುನ್ಸಿಪಾಲಿಟಿಗಳ ಮುಖ್ಯ ಅಧಿಕಾರಿಯಾಗಿರುತ್ತಿದ್ದ. ಮುನ್ಸಿಪಾಲಿಟಿಗಳು ಸ್ವಯಂ ಆಡಳಿತದೊಂದಿಗೆ ತಮ್ಮ ಆದಾಯದ ಮೂಲಗಳನ್ನು ಭೂಮಿ, ಕೃಷಿ, ನೀರು, ಮನೆಗಳ, ಜಾನುವಾರುಗಳ ಮೇಲಿನ ತೆರಿಗೆಯಿಂದ ಹುಡುಕಿಕೊಳ್ಳುತ್ತಿದ್ದವು. ಊರೊಳಗೆ ಅಂದರೆ ಮುನ್ಸಿಪಾಲಿಟಿ ವ್ಯಾಪ್ತಿಯೊಳಗೆ ಬರುವ ಹೋಗುವ ವಾಹನಗಳಿಗೆ, ಸರಕು ಸಾಗಣಿಕೆಗಳ ಮೇಲೆ, ವಾಹನ ಪರವಾನಿಗೆಗೆ ತೆರಿಗೆಯನ್ನು ವಿಧಿಸಿ ಆದಾಯವನ್ನು ಹೆಚ್ಚಿಸಿಕೊಳ್ಳುತ್ತಿದ್ದವು.

ಸ್ವತಂತ್ರ ಭಾರತದ ಕರ್ನಾಟಕವು ಆರಂಭದಲ್ಲಿ ಮೈಸೂರು ರಾಜ್ಯವಾಗಿ ರೂಪುಗೊಂಡಿತ್ತು. ೧೯೫೩ರ ೧ನೇ ಅಕ್ಟೋಬರ್ ರಂದು ಬಳ್ಳಾರಿ ಜಿಲ್ಲೆಯನ್ನು ಮದ್ರಾಸ್ ಪ್ರೆಸಿಡೆನ್ಸಿಯಿಂದ ಆಗಿನ ಹಳೇ ಮೈಸೂರು ಪ್ರಾಂತ್ಯಕ್ಕೆ ಸೇರಿಸಲಾಯಿತು. ಆಡಳಿತದ ದೃಷ್ಟಿಯಿಂದ ಜಿಲ್ಲೆಗಳಲ್ಲಿನ ನಗರಗಳ ಆಡಳಿತದ ವ್ಯವಸ್ಥೆಯನ್ನು ಸಿಟಿ ಮುನ್ಸಿಪಾಲಿಟಿಗಳು ಅಥವಾ ನಗರಸಭೆಗಳ ಮತ್ತು ಪಟ್ಟಣ ಪಂಚಾಯತ್‌ಗಳ ರಚನೆಯಂತೆ ವಿಭಾಗಿಸಲಾಗಿತ್ತು. ಆಗಿನ ನಗರಸಭೆ ಹಾಗೂ ಪಟ್ಟಣ ಪಂಚಾಯತ್‌ಗಳು ಹೀಗಿದ್ದವು.

| ನಗರಸಭೆಗಳು | ಸ್ಥಾಪನೆ ವರ್ಷ |
|---|---|
| ೧. ಬಳ್ಳಾರಿ | ೧೮೬೫ |
| ೨. ಹೊಸಪೇಟೆ | ೧೯೧೩ |
| **ಪಟ್ಟಣಪಂಚಾಯತ್‌ಗಳು** | **ಸ್ಥಾಪನೆ ವರ್ಷ** |
| ೧. ಕಮಲಾಪುರ | ೧೮೯೬ |
| ೨. ಹರಪನಹಳ್ಳಿ | ೧೮೯೬ |
| ೩. ಶಿರುಗುಪ್ಪ | ೧೯೫೦ |
| ೪. ಕೊಟ್ಟೂರು | ೧೯೫೯ |
| ೫. ಸಂಡೂರು | ೧೯೫೦ |
| ೬. ಹಡಗಲಿ | ೧೯೭೦ |
| ೭. ಕಂಪ್ಲಿ | ೧೮೯೬ |
| ಆಧಾರ : Mysore State Gazetteer of India, Bellary District, 1972 | |

ಇತ್ತೀಚೆಗೆ ತೆಕ್ಕಲಕೋಟೆ ಪಟ್ಟಣ ಪಂಚಾಯತಿಯು ರಚನೆಗೊಂಡಿರುವುದನ್ನು ಗಮನಿಸಬಹುದು. ಬಳ್ಳಾರಿಯು ಆಗಿನ ಮದ್ರಾಸ್ ಪ್ರಾಂತ್ಯದ ಪ್ರಥಮ ದೊಡ್ಡ ನಗರಗಳಲ್ಲಿ ಒಂದಾಗಿತ್ತು. ಆ ಕಾರಣಕ್ಕಾಗಿ ಮುನ್ಸಿಪಾಲಿಟಿ ಆಡಳಿತ ಸಂಸ್ಥೆಯನ್ನು / ಸರಕಾರವನ್ನು ರಚಿಸಲು ಸಾಧ್ಯವಾಗಿತ್ತು.

## ಬಳ್ಳಾರಿ ನಗರಸಭೆ

ಬಳ್ಳಾರಿ ನಗರಸಭೆಯು ೨೪ನೇ ಅಕ್ಟೋಬರ್ ೧೯೫೫ ರಿಂದ The Mysore Town Muncipalities Act of ೧೯೫೧ ಕಾಯಿದೆಯ ವ್ಯಾಪ್ತಿಗೊಳಪಟ್ಟಿತ್ತು. ಹೀಗೆ ಬಳ್ಳಾರಿ ಮುನ್ಸಿಪಾಲಿಟಿಯು ಕಾಲ ಕಾಲಕ್ಕೆ ವಿಕಾಸಗೊಳ್ಳುತ್ತ ಅನೇಕ ಬದಲಾವಣೆಗೊಳಪಟ್ಟಿತ್ತು. ೧೯೫೭ರ ನವೆಂಬರ್ ೧ ರಂದು ಮುನ್ಸಿಪಾಲಿಟಿಯನ್ನು ಪುನರ್‌ರಚಿಸಲಾಯಿತು. ೧೯೫೭ರಲ್ಲಿ ಒಟ್ಟು ೩೨ ಕೌನ್ಸಿಲರ್‌ಗಳನ್ನು ಬಳ್ಳಾರಿ ನಗರಸಭೆಯು ಒಳಗೊಂಡಿತ್ತು. ೧೯೫೯ರಲ್ಲಿ ನಡೆದ ೮ನೆಯ ಡಿವಿಜನ್ ಉಪಚುನಾವಣೆಯಲ್ಲಿ ತೆರವಾದ ೩ ಸ್ಥಾನಗಳಿಗೆ ಸರ್ಕಾರದ ಸದಸ್ಯರು ಆಯ್ಕೆಯಾಗಿದ್ದರು. ಅಧ್ಯಕ್ಷ ಮತ್ತು ಉಪಾಧ್ಯಾಕ್ಷರಿಬ್ಬರೂ ಸರ್ಕಾರೇತರ ಸದಸ್ಯರಾಗಿದ್ದರು.

ಇತ್ತೀಚೆಗೆ ನಡೆದ ದಿನಾಂಕ ೩.೫.೨೦೦೧ನೇ ಚುನಾವಣೆಯಲ್ಲಿದ್ದಂತಹ ಹಾಲಿ ನಗರಸಭೆ ಸದಸ್ಯರು ೩೫ ಇದ್ದರೆ, ಅದರಲ್ಲಿ ಪುರುಷರು ೨೧, ಮಹಿಳಾ ಸದಸ್ಯರು ೧೪ ಜನರಿದ್ದಾರೆ. ಇವರಲ್ಲಿ ೨ ಪ.ಜಾ, ೧ ಪ.ಪಂ. ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿದ್ದಾರೆ.

# ಬಳ್ಳಾರಿ ನಗರಸಭೆ ಸದಸ್ಯರ ವಿವರ

| ಕ್ರ.ಸಂ. | ಶ್ರೀಯುತರು | ಜಾತಿ |
|---|---|---|
| ೧. | ಜಿ. ಪದ್ಮಾವತಿ | ಹಿಂದುಳಿದ ವರ್ಗ(ಅ), ಮಹಿಳೆ |
| ೨. | ಜಿ. ಸೋಮಶೇಖರ ರೆಡ್ಡಿ | ಸಾಮಾನ್ಯ ಅಭ್ಯರ್ಥಿ |
| ೩. | ಕೆ. ಹನುಮಂತಪ್ಪ | ಹಿಂದುಳಿದ ವರ್ಗ (ಅ) |
| ೪. | ಮಹಮ್ಮದ್ ಗೌಸ್ | ಸಾಮಾನ್ಯ ಅಭ್ಯರ್ಥಿ |
| ೫. | ಕೆ. ಚಂದ್ರಪ್ಪ | ಸಾಮಾನ್ಯ ಅಭ್ಯರ್ಥಿ |
| ೬. | ಪಿ. ವಲಿಸಾಬ್ | ಹಿಂದುಳಿದ ವರ್ಗ (ಅ) |
| ೭. | ಕೆ. ನಾಗರತ್ನಮ್ಮ | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೮. | ಬಿ. ವೆಂಕಟೇಶ | ಸಾಮಾನ್ಯ ಅಭ್ಯರ್ಥಿ |
| ೯. | ಈರಮ್ಮ | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೧೦. | ತಿಮ್ಮಪ್ಪ | ಹಿಂದುಳಿದ ವರ್ಗ (ಅ) |
| ೧೧. | ಕೆ. ವೆಂಕಟರಾವು | ಸಾಮಾನ್ಯ ಅಭ್ಯರ್ಥಿ |
| ೧೨. | ಶೇಕ್ ಮೋಹಿನುದ್ದೀನ್ | ಸಾಮಾನ್ಯ ಅಭ್ಯರ್ಥಿ |
| ೧೩. | ಡಿ. ರೆಡ್ಡಿ ಪ್ರಕಾಶ | ಹಿಂದುಳಿದ ವರ್ಗ (ಬಿ) |
| ೧೪. | ಕೆ. ವಿಶಾಲಾಕ್ಷಿ | ಹಿಂದುಳಿದ ವರ್ಗ (ಅ), ಮಹಿಳೆ |
| ೧೫. | ಎಂ. ಮಸ್ತಾನ್ | ಸಾಮಾನ್ಯ ಅಭ್ಯರ್ಥಿ |
| ೧೬. | ಎಂ. ರಾಘುವೇಂದ್ರ | ಸಾಮಾನ್ಯ ಅಭ್ಯರ್ಥಿ |
| ೧೭. | ಕೆ. ಜ್ಯೋತಿ | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೧೮. | ವಿ. ನಾಗಭೂಷಣ | S.C. |
| ೧೯. | ಲಕ್ಷ್ಮಿದೇವಿ | S.C. (ಮಹಿಳೆ) |
| ೨೦. | ವಿ. ಲಕ್ಷ್ಮಮ್ಮ | S.C. (ಮಹಿಳೆ) |
| ೨೧. | ಶಿವರಾಮು | ಹಿಂದುಳಿದ ವರ್ಗ (ಅ) |
| ೨೨. | ಎಸ್. ಸುರೇಖಾಗೌಡ | ಹಿಂದುಳಿದ ವರ್ಗ (ಬಿ), ಮಹಿಳೆ |
| ೨೩. | ಕುಮಾರಸ್ವಾಮಿ | ಸಾಮಾನ್ಯ ಅಭ್ಯರ್ಥಿ |
| ೨೪. | ರೇಣುಕಮ್ಮ | ಹಿಂದುಳಿದ ವರ್ಗ (ಅ), ಮಹಿಳೆ |
| ೨೫. | ಡಿ. ಗಾಯಿತ್ರಿ | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೨೬. | ಹುಮಾಯೂಸೆ ನಾಸೀರುಖಾನ್ | ಹಿಂದುಳಿದ ವರ್ಗ |
| ೨೭. | ಹೆಚ್.ಎಸ್. ರಾಜಕುಮಾರ | ಪರಿಶಿಷ್ಟ ಜಾತಿ |
| ೨೮. | ಎನ್. ಜಯಣ್ಣ | ಪರಿಶಿಷ್ಟ ಜಾತಿ |
| ೨೯. | ಇಸ್ಮಾಯಿಲ್ ಸಾಬ್ | ಹಿಂದುಳಿದ ವರ್ಗ (ಅ) |
| ೩೦. | ಪರ್ವಿನಭಾನು | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೩೧. | ಟಿ. ಮೀನಾಕ್ಷಿ | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೩೨. | ಲೋಕೇಶ್ | ಹಿಂದುಳಿದ ವರ್ಗ (ಅ) |
| ೩೩. | ಸುಂದರಮ್ಮ | ಸಾಮಾನ್ಯ ಅಭ್ಯರ್ಥಿ, ಮಹಿಳೆ |
| ೩೪. | ಎನ್. ಅಲ್ಲಾಬಕ್ಷಿ | ಸಾಮಾನ್ಯ ಅಭ್ಯರ್ಥಿ |
| ೩೫. | ಟಿ. ಜಯಲಕ್ಷ್ಮಿ | ಪರಿಶಿಷ್ಟ ಪಂಗಡ, ಮಹಿಳೆ |

| | |
|---|---|
| ಪುರುಷ ಅಭ್ಯರ್ಥಿ | ೨೧ |
| ಮಹಿಳಾ ಅಭ್ಯರ್ಥಿ | ೧೪ |
| ಒಟ್ಟು ಸ್ಥಾನಗಳು | ೩೫ |

**ಮಹಿಳಾ ಸದಸ್ಯರ ವಿವರ**

| | | |
|---|---|---|
| ಹಿಂದುಳಿದ ವರ್ಗ (ಅ) ಮಹಿಳೆ | ೩ | |
| ಹಿಂದುಳಿದ ವರ್ಗ (ಬಿ) ಮಹಿಳೆ | ೧ | |
| ಸಾಮಾನ್ಯ ಅಭ್ಯರ್ಥಿ | ೭ | (೨) ಪ.ಜಾ. ಅಭ್ಯರ್ಥಿಗಳು ಗೆದ್ದಿದ್ದಾರೆ |
| ಪರಿಶಿಷ್ಟ ಜಾತಿ | ೨ | |
| ಪರಿಶಿಷ್ಟ ಪಂಗಡ | ೧ | |
| ಒಟ್ಟು ಮಹಿಳೆ | ೧೪ | |

ಬಳ್ಳಾರಿ ನಗರಸಭೆಯು ನಿವಾಸಿಗಳ ದೈನಂದಿನ ಅವಶ್ಯಕತೆಗಳನ್ನು ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸುವಲ್ಲಿ ಶ್ರಮಿಸುತ್ತ ಬಂದಿದೆ. ಅದರ ಪ್ರಮುಖ ನಾಗರೀಕ ಸೇವೆಗಳೆಂದರೆ ಕುಡಿವ ನೀರು ಸರಬರಾಜು, ನಗರಯೋಜನೆ ಸಿದ್ಧಪಡಿಸುವುದು, ಕೊಳಚೆ ಪ್ರದೇಶಗಳ ನೈರ್ಮಲ್ಯೀಕರಣ, ಗೃಹನಿರ್ಮಾಣ, ಚರಂಡಿ ವ್ಯವಸ್ಥೆ, ಉದ್ಯಾನವನಗಳ ನಿರ್ಮಾಣ ಮತ್ತು ನಿರ್ವಹಣೆ (ಮುನ್ಸಿಪಾಲಿಟಿಯಿಂದ ನಿರ್ವಹಿಸಲ್ಪಡುವ), ಪ್ರವಾಸಿ ಮಂದಿರಗಳ ನಿರ್ವಹಣೆ, ಆಹಾರ ಸಂಸ್ಕರಣೆ (As per The Central Food Administration Act), ಆರೋಗ್ಯಸೇವೆ, ಮಲೇರಿಯಾ ರೋಗ ನಿರ್ಮೂಲನೆ, ನಾಗರೀಕರ ಜನನ ಮತ್ತು ಮರಣಗಳ ನೊಂದಣಿ ಮಾಡಿಸುವುದು, ಮಾರುಕಟ್ಟೆಗಳ ಮೇಲ್ವಿಚಾರಣೆಯಂತಹ ಕಾರ್ಯಗಳನ್ನು ಮಾಡುತ್ತದೆ. ಅದಲ್ಲದೆ ಸಾರ್ವಜನಿಕ ಆಸ್ತಿ-ಪಾಸ್ತಿ ರಕ್ಷಣೆ, ಬೆಳಕು ಒದಗಿಸುವುದು, ಶಿಕ್ಷಣವನ್ನು ಕಲಿಸುವುದು, ರಸ್ತೆಗಳ ನಿರ್ಮಾಣ ಹಾಗೂ ನಗರದಲ್ಲಿ ಜರುಗುವ ಹಬ್ಬ ಮತ್ತು ಉತ್ಸವಗಳನ್ನು ನೋಡಿಕೊಳ್ಳುತ್ತದೆ. ಎಲ್ಲಾ ಜನರ ವರ್ಗದ ಭಾಷೆಯ ಹಿತಾಸಕ್ತಿಗಳನ್ನು ಕಾಪಾಡಿಕೊಂಡು ಬಂದಿದೆ.

ಬಳ್ಳಾರಿ ಜಿಲ್ಲೆ ದ್ವಿಭಾಷಿಕ ಪ್ರದೇಶವಾಗಿದ್ದರಿಂದ "ಇದನ್ನು ಮೈಸೂರು ರಾಜ್ಯದ ಪೂರ್ವದ ಬಾಗಿಲು (Eastern Gateway of Mysore) ಎಂದೂ ಕರೆಯಲಾಗುತ್ತಿತ್ತು. ಇದು ಮದ್ರಾಸ್ ಪ್ರೆಸಿಡೆನ್ಸಿಯ ಪ್ರಮುಖ ನಗರವಾಗಿತ್ತು. ಬ್ರಿಟಿಷ್ ಕಾಲದ ಆರಂಭದ ದಿನಗಳಲ್ಲಿ Air Mail Service ನ್ನು ದೇಶದಲ್ಲಿಯೇ ಮೊಟ್ಟಮೊದಲ ಬಾರಿಗೆ ಜಾರಿಗೊಳಿಸಲು ಆರಿಸಲ್ಪಟ್ಟ ನಗರಗಳೆಂದರೆ, ಬಾಂಬೆ ಪ್ರೆಸಿಡೆನ್ಸಿಯ ಕರಾಚಿ ಮತ್ತು ಮದ್ರಾಸ್ ಪ್ರೆಸಿಡೆನ್ಸಿಯ ಬಳ್ಳಾರಿ. ಕಾಸ್ಮೋಪಾಲಿಟನ್ ನಗರವಾಗಿ ಬಳ್ಳಾರಿ ಬೆಳೆಯಲು ಕಾರಣ ಬಿಜಾಪುರ ಸುಲ್ತಾನರ ಆಳ್ವಿಕೆ ಹಾಗೂ ಹೈದರಾಬಾದಿನ ನಿಜಾಮರ ಆಳ್ವಿಕೆಯ ಪ್ರಭಾವ. ಹೀಗಾಗಿ ಮುಸ್ಲಿಂ ಜನಾಂಗದ

ಪಾತ್ರವು ಪ್ರಮುಖವಾಗಿಯೂ, ನಿರ್ಣಯಕವಾಗಿಯೂ ಇರಲು ಸಾಧ್ಯವಾಗಿದೆ" (Gazetteer of India, Mysore State Bellary District, Govt. Press, Bangalore, 1972, p. 515).

**ಹೊಸಪೇಟೆ ನಗರಸಭೆ**

ಹೊಸಪೇಟೆ ನಗರಸಭೆಯು ಬಳ್ಳಾರಿ ನಗರಸಭೆಯ ವ್ಯಾಪ್ತಿ ಮತ್ತು ಪ್ರಾಮುಖ್ಯತೆಯಲ್ಲಿ ನಂತರದ ಸ್ಥಾನವನ್ನು ಪಡೆದಿದೆ. ೧೯೧೩ ಏಪ್ರಿಲ್ ೧ ರಂದು ಹೊಸಪೇಟೆ ನಗರಸಭೆಗೆ ಡಿ.ಜಿ.ಬ್ಲೆಸ್ ಸಬ್‌ಕಲೆಕ್ಟರ್ ಇವರು ಮೊಟ್ಟಮೊದಲ ಅಧಿಕೃತ ಚೇರಮನ್‌ರಾಗುವುದರೊಂದಿಗೆ ಅಸ್ತಿತ್ವಕ್ಕೆ ಬಂತು. ಇನ್ನುಳಿದ ನಾಮಕರಣಗೊಂಡ ಸರ್ಕಾರೇತರ ಕೌನ್ಸಿಲರುಗಳೆಂದರೆ ವಿಠಲ್ ಪಂತ್ ಜೋಶಿ, ಬಂಡಿ ನಾಗಲಿಂಗಪ್ಪ ಮತ್ತು ಉಳ್ಳಾಗಡ್ಡಿ ಕಲ್ಮಟೆಪ್ಪನವರು. ಹಾಗೆಯೇ ಜಿಲ್ಲೆಯ ವಿವಿಧ ಇಲಾಖೆಗಳ ಮುಖ್ಯಸ್ಥರನ್ನು ಸರ್ಕಾರಿ ಕೌನ್ಸಿಲರ್‌ಗಳಾಗಿ ನಿಯುಕ್ತಿಗೊಳಿಸಲ್ಪಟ್ಟಿದ್ದರು. ೧೯೧೮ರಲ್ಲಿ ಹೊಸಪೇಟೆ ಮುನ್ಸಿಪಲ್ ಕೌನ್ಸಿಲ್‌ಗೆ ನಗರದ ನಿವಾಸಿ ಅಥವಾ ನಾಗರೀಕನಿಗೆ ಅಧ್ಯಕ್ಷನಾಗುವ ಅವಕಾಶವನ್ನು ಬ್ರಿಟಿಷ್ ಸರಕಾರ ಕಲ್ಪಿಸಿತ್ತು. ಕಾಲಾನುಕ್ರಮದಲ್ಲಿ ಮುನ್ಸಿಪಾಲಿಟಿ ವ್ಯವಸ್ಥೆಯಲ್ಲಿ ಬದಲಾವಣೆಗಳಾದವು. ನಗರದಲ್ಲಿ ಅನೇಕ ವಾರ್ಡುಗಳನ್ನು ರಚಿಸಲಾಯಿತು. ಪ್ರತಿಯೊಂದು ವಾರ್ಡಿನ ಮತದಾರರು ತನ್ನ ಪ್ರತಿನಿಧಿಯನ್ನು ಮುನ್ಸಿಪಾಲ್ಟಿಗೆ ಕಳಿಸುತ್ತಿದ್ದರು. ಈ ಕೌನ್ಸಿಲರ್‌ಗಳ ಪೈಕಿ ೧೯೨೫ರಲ್ಲಿ ಒಂದನ್ನು ಪರಿಶಿಷ್ಟ ಜಾತಿಗೆ ಮೀಸಲಿಡುವ ಪರಿಪಾಠ ಆರಂಭಗೊಂಡಿತ್ತು. ನಗರವನ್ನು ೫ ಪ್ರಾದೇಶಿಕ ವಿಭಾಗಗಳಾಗಿ ವಿಂಗಡಿಸಿ ೫ರಲ್ಲಿ ಒಂದು ವಿಭಾಗ ಪರಿಶಿಷ್ಟ ಜಾತಿ ಸದಸ್ಯರಿಗೆ ಕಾಯ್ದಿರಿಸಲಾಗಿತ್ತು. ಆದರೆ ಮಹಿಳೆಯರಿಗೆ ಇಲ್ಲಿ ಯಾವುದೇ ಸ್ಥಾನವನ್ನು ಕಾಯ್ದಿರಿಸಿರಲಿಲ್ಲ ಎಂಬುದು ಅವಳ ಬಗೆಗಿನ ಧೋರಣೆಯನ್ನು ಅರ್ಥೈಸುತ್ತದೆ. ಮೈಸೂರು ಭಾರತ ಸ್ವಾತಂತ್ರ್ಯ ನಂತರದಲ್ಲಿ ಆದ ಬೆಳವಣಿಗೆಗಳ ಪರಿಣಾಮವಾಗಿ ೧ನೇ ಏಪ್ರಿಲ್ ೧೯೬೫ರಂದು ಮೈಸೂರು ರಾಜ್ಯಸರಕಾರವು ಹೊಸಪೇಟೆ ಟೌನ್ ಮುನ್ಸಿಪಾಲಿಟಿಯನ್ನು ಸಿಟಿ ಮುನ್ಸಿಪಾಲ್ಟಿಯ ಮೇಲ್ದರ್ಜೆ(ನಗರ ಸಭೆ)ಗೆ ಏರಿಸಲು ಆದೇಶ ಹೊರಡಿಸಿತು. ಹೀಗಾಗಿ ಹೊಸಪೇಟೆ ನಗರಸಭೆಯನ್ನು ಒಟ್ಟು ಎಂಟು ವಿಭಾಗಗಳಾಗಿ ವಿಂಗಡಿಸಲಾಗಿದ್ದು, ನಗರಸಭೆಯ ರಚನೆಯು ಅಧ್ಯಕ್ಷರನ್ನೊಳಗೊಂಡಂತೆ ೨೦ ವಾರ್ಡ್‌ಗಳಿಂದ ಆರಿಸಲ್ಪಟ್ಟ ೩೧ ಸದಸ್ಯರನ್ನು ಹೊಂದಿತ್ತು. ಅವುಗಳಲ್ಲಿ ತಲಾ ಎರಡು ಸ್ಥಾನ ಮಹಿಳೆ ಹಾಗೂ ಪರಿಶಿಷ್ಟರಿಗೆ ಮೀಸಲಾಗಿರಿಸಿದ್ದವು. ೧೮ನೇ ಜನವರಿ ೧೯೬೬ರಂದು ಈ ಪೂರ್ಣಪ್ರಮಾಣದ ಪ್ರಜಾಸತ್ತೆ ಮಾದರಿಯ ನಗರಸಭೆಯ ರಚನೆಗೊಂಡು ಕಾರ್ಯಾರಂಭ ಮಾಡಿತು. ಅಂದಿನಿಂದ ಕ್ರಮೇಣ ನಗರಸಭೆ ಕರ್ನಾಟಕ ಸರ್ಕಾರದ ಆದೇಶಗಳಿನುಗುಣವಾಗಿ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದೆ.

೩.೫.೨೦೦೧ ರಂದು ನಡೆದ ಚುನಾವಣೆಯಂತೆ ಈಗಿನ ನಗರಸಭಾ ಸದಸ್ಯರು ಒಟ್ಟು ೩೫. ಇದರಲ್ಲಿ ೧೩ಜನ ಮಹಿಳಾ ಸದಸ್ಯರು. ವಿವರಗಳನ್ನು ಮುಂದಿನ ಕೋಷ್ಟಕದಿಂದ ಗಮನಿಸಬಹುದಾಗಿದೆ.

# ಹೊಸಪೇಟೆ ನಗರಸಭೆ ಚುನಾವಣೆಗಳು - ೨೦೦೧

| ಕ್ರ. ಸಂ. | ವಾರ್ಡ್ ಸಂ. | ಜಯಗಳಿಸಿದ ಅಭ್ಯರ್ಥಿಗಳ ಹೆಸರು | ಮೀಸಲಾತಿ | ಪಕ್ಷ | ಆಯ್ಕೆಯ ರೀತಿ |
|---|---|---|---|---|---|
| | | | ನಗರ ಸಭೆ ಹೊಸಪೇಟೆ | | |
| ೧. | ೧ | ಮಂಜುನಾಥ | ಹಿಂ.ವರ್ಗ - ಎ | ಪಕ್ಷೇತರ | ಚುನಾವಣೆ |
| ೨. | ೨ | ಎಂ.ಎಸ್.ರಘು | ಹಿಂ.ವರ್ಗ - ಎ | ಪಕ್ಷೇತರ | ಚುನಾವಣೆ |
| ೩. | ೩ | ಎಸ್.ಕೃಷ್ಣಾರೆಡ್ಡಿ | ಹಿಂ.ವರ್ಗ - ಬಿ | ಕಾಂಗ್ರೆಸ್ | ಚುನಾವಣೆ |
| ೪. | ೪ | ವಿಜಯಲಕ್ಷ್ಮಿ | ಹಿಂ.ವರ್ಗ - ಎ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೫. | ೫ | ಟಿ.ಎಸ್.ಶೀಲಾ | ಹಿಂ.ವರ್ಗ - ಬಿ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೬. | ೬ | ಎನ್.ಯರಿಯಮ್ಮ | ಹಿಂ.ವರ್ಗ - ಎ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೭. | ೭ | ಎಂ.ನೀಲಾಂಬಿಕ | ಸಾಮಾನ್ಯ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೮. | ೮ | ಎಸ್.ತಾಯಮ್ಮ | ಹಿಂ.ವರ್ಗ - ಎ, ಮಹಿಳೆ | ಪಕ್ಷೇತರ | ಚುನಾವಣೆ |
| ೯. | ೯ | ಕುಲ್ಲಾಯಪ್ಪ | ಸಾಮಾನ್ಯ, | ಪಕ್ಷೇತರ | ಚುನಾವಣೆ |
| ೧೦. | ೧೦ | ಜುಬೇದಾ | ಸಾಮಾನ್ಯ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೧೧ | ೧೧ | ಬಿ. ತಾಯಮ್ಮ | ಪ.ಪಂಗಡ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೧೨ | ೧೨ | ಬಿ. ಕಾಸಿಂಬೀ | ಸಾಮಾನ್ಯ, ಮಹಿಳೆ | ಪಕ್ಷೇತರ | ಚುನಾವಣೆ |
| ೧೩ | ೧೩ | ಕೆ. ರಾಜಾರಾವ್ | ಹಿಂ.ವರ್ಗ - ಎ | ಕಾಂಗ್ರೆಸ್ | ಚುನಾವಣೆ |
| ೧೪ | ೧೪ | ಕೆ. ಗಾಂಧಿ | ಹಿಂ.ವರ್ಗ - ಎ | ಪಕ್ಷೇತರ | ಚುನಾವಣೆ |
| ೧೫ | ೧೫ | ಡಿ.ಜಿ. ತಿರುಮಲ | ಹಿಂ.ವರ್ಗ - ಎ | ಪಕ್ಷೇತರ | ಚುನಾವಣೆ |
| ೧೬ | ೧೬ | ಜೆ.ಎನ್. ವೆಂಕೋಬ | ಪ.ಪಂಗಡ | ಕಾಂಗ್ರೆಸ್ | ಚುನಾವಣೆ |
| ೧೭. | ೧೭ | ಕೆ. ರಾಜಾಸಾಬ್ | ಹಿಂ.ವರ್ಗ - ಎ | ಪಕ್ಷೇತರ | ಚುನಾವಣೆ |
| ೧೮. | ೧೮ | ಎ. ರಹಿಮಾನ್ | ಸಾಮಾನ್ಯ | ಪಕ್ಷೇತರ | ಚುನಾವಣೆ |
| ೧೯. | ೧೯ | ಆರ್. ತಾಯಮ್ಮ | ಸಾಮಾನ್ಯ, ಮಹಿಳೆ | ಪಕ್ಷೇತರ | ಚುನಾವಣೆ |
| ೨೦. | ೨೦ | ಎಸ್. ಸುವರ್ಣ | ಸಾಮಾನ್ಯ, ಮಹಿಳೆ | ಪಕ್ಷೇತರ | ಚುನಾವಣೆ |
| ೨೧ | ೨೧ | ರೂಪ | ಪ.ಜಾ, ಮಹಿಳೆ | ಕಾಂಗ್ರೆಸ್ | ಚುನಾವಣೆ |
| ೨೨. | ೨೨ | ಹೆಚ್.ರುದ್ರಪ್ಪ | ಸಾಮಾನ್ಯ | ಜನತಾದಳ (ಯು) | ಚುನಾವಣೆ |
| ೨೩. | ೨೩ | ಹುಲುಗಣ್ಣ | ಪ.ಜಾ | ಕಾಂಗ್ರೆಸ್ | ಚುನಾವಣೆ |
| ೨೪. | ೨೪ | ಸೋಮಪ್ಪ | ಸಾಮಾನ್ಯ | ಪಕ್ಷೇತರ | ಚುನಾವಣೆ |
| ೨೫. | ೨೫ | ಗುದ್ಲಿ ಪರಶುರಾಮ | ಸಾಮಾನ್ಯ | ಪಕ್ಷೇತರ | ಚುನಾವಣೆ |
| ೨೬. | ೨೬ | ಸಿ. ಹನುಮಂತಪ್ಪ | ಪ.ಜಾ. | ಪಕ್ಷೇತರ | ಚುನಾವಣೆ |
| ೨೭. | ೨೭ | ಟಿ.ಚಿದಾನಂದ | ಸಾಮಾನ್ಯ | ಪಕ್ಷೇತರ | ಚುನಾವಣೆ |
| ೨೮. | ೨೮ | ಪ್ರೇಮವ್ವ | ಪ.ಪಂಗಡ, ಮಹಿಳೆ | ಪಕ್ಷೇತರ | ಚುನಾವಣೆ |
| ೨೯. | ೨೯ | ಎಸ್. ಸಿದ್ಧಲಿಂಗೇಶ್ವರ | ಸಾಮಾನ್ಯ | ಕಾಂಗ್ರೆಸ್ | ಚುನಾವಣೆ |
| ೩೦. | ೩೦ | ಟಿ.ವೆಂಕಟೇಶ್ | ಪ.ಪಂಗಡ | ಪಕ್ಷೇತರ | ಚುನಾವಣೆ |
| ೩೧. | ೩೧ | ಪಿ.ದುರುಗಪ್ಪ | ಸಾಮಾನ್ಯ | ಪಕ್ಷೇತರ | ಚುನಾವಣೆ |
| ೩೨. | ೩೨ | ಬಿ. ಸೋಮಶೇಖರ್ | ಪ.ಜಾತಿ | ಕಾಂಗ್ರೆಸ್ | ಚುನಾವಣೆ |
| ೩೩. | ೩೩ | ನಾಗಲಕ್ಷ್ಮಿ | ಪ.ಜಾತಿ, ಮಹಿಳೆ | ಕಾಂಗ್ರೆಸ್ | ಅವಿರೋಧ |
| ೩೪. | ೩೪ | ಪರಿಗಿ ಶ್ರೀನಿವಾಸ್ | ಹಿಂದುಳಿದ ವರ್ಗ - ಎ | ಕಾಂಗ್ರೆಸ್ | ಅವಿರೋಧ |
| ೩೫. | ೩೫ | ಜಿ.ಕೆ.ಹನುಮಂತಪ್ಪ | ಸಾಮಾನ್ಯ | ಕಾಂಗ್ರೆಸ್ | ಚುನಾವಣೆ |

## ಹೊಸಪೇಟೆ ನಗರಸಭೆಯ ಮಹಿಳಾ ಸದಸ್ಯರ ವರ್ಗವಾರು ವಿವರ

(ಶೇಕಡವಾರು)

| ೧. ಸಾಮಾನ್ಯವರ್ಗ | ೨. ಹಿಂದುಳಿದವರ್ಗ. ಎ. | ೩. ಪರಿಶಿಷ್ಟಜಾತಿ | ೪. ಪರಿಶಿಷ್ಟ ಪಂಗಡ | ೫.ಹಿಂದುಳಿದವರ್ಗ ಬಿ. |
|---|---|---|---|---|
| ೧. ಎಂ.ನೀಲಾಂಬಿಕೆ<br>೨. ಜುಬೇದಾ<br>೩. ಬಿ.ಕಾಸಿಂಬೀ<br>೪. ಆರ್.ತಾಯಮ್ಮ<br>೫. ಎಸ್.ಸುವರ್ಣ | ೧. ವಿಜಯಲಕ್ಷ್ಮಿ<br>೨. ಯರಿಯಮ್ಮ<br>೩. ಎಸ್ .ತಾಯಮ್ಮ | ೧. ರೂಪ ಲೋಕೇಶ್<br>೨. ನಾಗಲಕ್ಷ್ಮೀ | ೧. ಬಿ.ತಾಯಮ್ಮ<br>೨. ಪ್ರೇಮವ್ವ | ೧. ಟಿ.ಎಸ್ .ಶೀಲಾ |
| ಒಟ್ಟು ೫<br>(೩೮.೪೬) | ಒಟ್ಟು ೩<br>(೨೩.೦೦) | ಒಟ್ಟು ೨<br>(೧೫.೦೩) | ಒಟ್ಟು ೨<br>(೧೫.೦೩) | ಒಟ್ಟು ೧<br>(೭.೬) |

ಈ ೧೩ ಜನ ಮಹಿಳಾ ಸದಸ್ಯರಲ್ಲಿ ಬಹುತೇಕ ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದವರಾಗಿದ್ದಾರೆ. ಅವರಲ್ಲಿ ೫ ಜನರು ಮಾತ್ರ ಪಕ್ಷೇತರರಾಗಿ ಆರಿಸಿ ಬಂದಿದ್ದಾರೆ. ಬಹುತೇಕ ಪಕ್ಷೇತರರಲ್ಲಿ ಮೂವರು ಸಾಮಾನ್ಯವರ್ಗಕ್ಕೆ ಸೇರಿದವರಾಗಿದ್ದು, ಒಬ್ಬರು ಹಿಂದುಳಿದ ವರ್ಗಕ್ಕೆ ಇನ್ನೊಬ್ಬರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಯಾವ ಪಕ್ಷ ಬಲವಿಲ್ಲದೇ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಗೆಲವು ಸಾಧಿಸಿರುವುದು ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವಾಗಿದೆ. ಮಹಿಳೆಯರು ಸ್ವಲ್ಪ ಮಟ್ಟಿನ ಪ್ರತಿರೋಧವನ್ನು ಪ್ರದರ್ಶಿಸಿರುವುದು, ರಾಜಕೀಯ ಪ್ರವೇಶಿಸಿರುವುದು ಚರ್ಚಿಸವಂಥದ್ದು. ಈಗಿನ ನಗರ ಸಭೆಯ ಅಧ್ಯಕ್ಷ ಸ್ಥಾನವನ್ನು ವಹಿಸಿರುವ ಮಹಿಳೆ ಶ್ರೀಮತಿ ಎನ್.ಎರ್ರಿಯಮ್ಮ ಹಿಂದುಳಿದ ವರ್ಗದ 'ಎ' ಗುಂಪಿನವರಾಗಿದ್ದಾರೆ. ಈಗಿನ ಹೊಸಪೇಟೆ ನಗರಸಭೆಯು ಅಮರಾವತಿ, ಚಿತ್ತವಾಡ್ಗಿ, ಕಾರಿಗನೂರು ಹಾಗೂ ಕೊಂಡನಾಯಕನಹಳ್ಳಿ ವ್ಯಾಪ್ತಿಯನ್ನು ಹೊಂದಿದೆ. ಹಿಂದಿನ ಅಮರಾವತಿ ಪುರಸಭೆಯು ಪ್ರಸ್ತುತ ಹೊಸಪೇಟೆ ನಗರಸಭೆಯಲ್ಲಿ ವಿಲೀನಗೊಂಡಿದೆ.

### ೬. ಗ್ರಾಮಪಂಚಾಯಿತಿ ಮತ್ತು ಮಹಿಳೆ

ಈಗಿನ ಬಳ್ಳಾರಿ ಜಿಲ್ಲೆಯು ಬ್ರಿಟಿಶ್ ಭಾರತದ ಕಾಲದಲ್ಲಿ ಹಳೇ ಮದ್ರಾಸ್ ಸಂಸ್ಥಾನಕ್ಕೆ ಸೇರಿತ್ತು. ಸ್ವಾತಂತ್ರ್ಯ ನಂತರದ ಭಾರತ, ೧ನೇ ಅಕ್ಟೋಬರ್ ೧೯೫೩ರಂದು ಬಳ್ಳಾರಿ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯದಿಂದ ಬೇರ್ಪಡಿಸಿ, ಆಗಿನ ಹಳೇ ಮೈಸೂರಿನ ಪ್ರಾಂತ್ಯಕ್ಕೆ ಸೇರ್ಪಡೆಗೊಳಿಸಲಾಯಿತು. ಇದಕ್ಕೂ ಪೂರ್ವದಲ್ಲಿದ್ದ ಜಿಲ್ಲೆಯ ಏಳು ತಾಲೂಕುಗಳ ೧೫೫ ಗ್ರಾಮಪಂಚಾಯತ್ ಗಳನ್ನು ಮದ್ರಾಸ್ ಗ್ರಾಮಪಂಚಾಯತ್ ಕಾಯಿದೆ X, ೧೯೫೦ ರನ್ವಯ ಈ ಮುಂದಿನಂತೆ ಶ್ರೇಣೀಕರಿಸಲಾಗಿತ್ತು.

| ತಾಲೂಕು | Class- I ಪಂಚಾಯತ್ | Class- II ಪಂಚಾಯತ್ | ಒಟ್ಟು |
|---|---|---|---|
| ಬಳ್ಳಾರಿ | - | ೪೨ | ೪೨ |
| ಹೊಸಪೇಟೆ | ೨ | ೧೦ | ೧೨ |
| ಸಂಡೂರು | ೧ | ೬ | ೭ |
| ಕೂಡ್ಲಿಗಿ | ೨ | ೧೬ | ೧೮ |
| ಹರಪನಹಳ್ಳಿ | ೧ | ೨೯ | ೩೦ |
| ಶಿರುಗುಪ್ಪ | ೧ | ೨೪ | ೨೫ |
| ಹಡಗಲಿ | ೧ | ೧೯ | ೨೦ |
| ಮಲ್ಲಾಪುರಂ | - | ೧ | ೧ |
| ಒಟ್ಟು | ೮ | ೧೪೭ | ೧೫೫ |

ಈ ಪಂಚಾಯತ್‌ಗಳನ್ನು ಕಂದಾಯ ಇಲಾಖೆಯಿಂದ ಬೇರ್ಪಟ್ಟು ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿದ್ದ Dept of Local Administration (ಸ್ಥಳೀಯ ಆಡಳಿತ ಇಲಾಖೆ)ಯು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿತ್ತು ಹಾಗೂ ಅವುಗಳ ಕೆಲಸ-ಕಾರ್ಯಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿತ್ತು. ಜಿಲ್ಲಾಮಟ್ಟದಲ್ಲಿ ಜಿಲ್ಲಾ ಪಂಚಾಯತ್ ಅಧಿಕಾರಿ (District Panchayat Officer) ಬಳ್ಳಾರಿ ಇವರು Regional Inspector of Local Boards, ಚಿತ್ತೂರ ಇವರ ಅಧೀನದಲ್ಲಿ ಈ ಪಂಚಾಯತ್‌ಗಳ ಆಡಳಿತವನ್ನು ನಿರ್ವಹಿಸುತ್ತಿದ್ದರು. ಪ್ರತಿ ತಾಲೂಕಿಗೊಬ್ಬ Deputy Panchayat Officer ರಂತೆ ಪಂಚಾಯತ್ ಆಡಳಿತವನ್ನು ನಿರ್ವಹಿಸಲು ನೇಮಿಸಲಾಗಿತ್ತು. ಅಕ್ಟೋಬರ್ ೧, ೧೯೫೩ರ ನಂತರ ಜಿಲ್ಲಾಮಟ್ಟದಲ್ಲಿರುವ District Panchayat Officer ಹುದ್ದೆಯನ್ನು ರದ್ದುಗೊಳಿಸಿ ಹೊಸದಾಗಿ Deputy Commissioner (ಜಿಲ್ಲಾಧಿಕಾರಿ)ರನ್ನು Regional Inspector of Local Board ರಾಗಿ ನೇಮಿಸಲಾಯಿತು. ಅದೇ ರೀತಿ ತಾಲೂಕು ಮಟ್ಟದಲ್ಲಿದ್ದ Deputy Panchayat Officer ಹುದ್ದೆಗಳನ್ನು ರದ್ದುಗೊಳಿಸಿ, ತಹಶೀಲ್ದಾರರನ್ನು EX-Officio Deputy Panchayat Officers for Panchayat (ಆಯಾ ತಾಲೂಕಿನ ವ್ಯಾಪ್ತಿಯಲ್ಲಿ ಬರುವ) ಆಗಿ ನೇಮಿಸಲಾಯಿತು. ಬಳ್ಳಾರಿ, ಹೊಸಪೇಟೆಗಳಿಗೆ ಸಹಾಯಕ ಆಯುಕ್ತರುಗಳನ್ನು Ex-Officio District Panchayat Officer (ಆಯಾ ರೆವಿನ್ಯೂ ವ್ಯಾಪ್ತಿಗೊಳಪಡುವ ಪಂಚಾಯತ್ ಸಂಸ್ಥೆಗಳಲ್ಲಿ) ಆಗಿ ನೇಮಿಸಲಾಯಿತು. ಈ ಹುದ್ದೆಗಳು Assitant Commissioner ಇಂದಿಗೂ ರೆವಿನ್ಯೂ ವ್ಯಾಪ್ತಿಗೊಳಪಡುವ ಪಂಚಾಯತ್ ಸಂಸ್ಥೆಗಳಲ್ಲಿ ಆಡಳಿತದ ನಿರ್ವಹಣೆ ಮಾಡುತ್ತಾರೆ. ಎಲ್ಲಾ ೮ ಶ್ರೇಣಿ - ೧ರ ಪಂಚಾಯತ್ ಸಂಸ್ಥೆಗಳಲ್ಲಿ ಕಾರ್ಯನಿರ್ವಹಕ ಅಧಿಕಾರಿ (Executive Officer)ಗಳು, ಹಾಗೂ ಶ್ರೇಣಿ - ೨ ರ ಪಂಚಾಯತ್ ಸಂಸ್ಥೆಗಳಲ್ಲಿ ಆಯಾ ತಾಲೂಕಿನ ಅಧ್ಯಕ್ಷರು ಆಡಳಿತ ಸುಧಾರಣೆ - ಕಾರ್ಯ ನಿರ್ವಹಣಾ ಅಧಿಕಾರಿಗಳಾಗಿದ್ದರು.

ಮೈಸೂರು ಗ್ರಾಮಪಂಚಾಯತ್ ಮತ್ತು ಸ್ಥಳೀಯ ಸಂಸ್ಥೆಗಳ ಕಾಯಿದೆ, ೧೯೫೯ ನವೆಂಬರ್ ೧, ೧೯೫೯ರಂದು ಜಾರಿಗೆ ಬಂದಿತು. ಹಿಂದಿನ ಮದ್ರಾಸ್ ಕಾಯಿದೆ ೧೯೫೦ ರದ್ದಾಯಿತು. ೧೯೫೨ರಲ್ಲಿ ಸಮುದಾಯ ಅಭಿವೃದ್ಧಿ ಕಾಯಕ್ರಮಗಳೊಂದಿಗೆ ತಾಲೂಕು ಅಭಿವೃದ್ಧಿ ಆಡಳಿತದ ಕೇಂದ್ರವಾಗಿತ್ತು. ೧೯೫೭ರಲ್ಲಿ ಬಲವಂತರಾಯ್ ಜಿ. ಅವರ ಅಧ್ಯಕ್ಷತೆಯಲ್ಲಿ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಗೆ ಬಂದಿತು. ಈ ನಿಯಮಾವಳಿಗಳಡಿ ಜಿಲ್ಲಾ ಮಂಡಳಿಯ ಆಡಳಿತದ ಜಾಗದಲ್ಲಿ ಮೂರು ಸ್ತರದ ಆಡಳಿತ ಸಂಸ್ಥೆಗಳನ್ನು ರಚಿಸಿ ಅಧಿಕಾರಗಳನ್ನು ವಿಕೇಂದ್ರೀಕರಿಸಲಾಯಿತು. ೧. ಗ್ರಾಮಪಂಚಾಯತ್ ೨. ತಾಲೂಕು ಅಭಿವೃದ್ಧಿಮಂಡಳಿ ಹಾಗೂ ೩. ಜಿಲ್ಲಾ ಅಭಿವೃದ್ಧಿ ಸಮಿತಿಗಳಾಗಿ ರೂಪುಗೊಂಡವು. ಹೀಗೆ ಪುನರಚನೆಗೊಂಡ ಆಡಳಿತ ಸಂಸ್ಥೆಗಳು ಗ್ರಾಮಾಂತರ ಪ್ರದೇಶಗಳ ಸಾಮಾಜಿಕ ಮತ್ತು ರಾಜಕೀಯ ವಲಯಗಳಲ್ಲಿ ಮಹತ್ತರ ಬದಲಾವಣೆ ತಂದವು. ಪ್ರತಿ ಕಂದಾಯಹಳ್ಳಿ ಅಥವಾ ಹಳ್ಳಿಗಳ ಸಮೂಹದ ಜನಸಂಖ್ಯೆ ೧೫೦೦ಕ್ಕಿಂತ ಕಡಿಮೆ ಇದ್ದು ಮತ್ತು ೧೦,೦೦೦ಕ್ಕಿಂತ ಮೀರದ, ಎಲ್ಲ ಹಳ್ಳಿಗಳಲ್ಲಿ ಪಂಚಾಯತ್‌ಗಳನ್ನು ರಚಿಸಿಕೊಳ್ಳಲು ವಿಪುಲ ಅವಕಾಶಗಳನ್ನು ೧೯೫೯ರ ಮೈಸೂರು ಕಾಯಿದೆ ಕಲ್ಪಿಸಿಕೊಟ್ಟಿತು. ಗ್ರಾಮಪಂಚಾಯತ್‌ಗಳ ಹೊಸ ಸದಸ್ಯತ್ವ ಸಂಖ್ಯೆ ೧೧ಕ್ಕಿಂತ ಕಡಿಮೆ ಇರದ ಹಾಗೂ ೧೯ಕ್ಕೆ ಮೀರದ ಸಂಖ್ಯೆಯಲ್ಲಿ, ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳೊಂದಿಗೆ ಅವರ ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ನೀಡಲಾಯಿತು. ಇಲ್ಲಿ ಗಮನಿಸಬೇಕಾದ ವಿಶೇಷ ಅಂಶವೆಂದರೆ ಮಹಿಳಾ ಮೀಸಲಾತಿಯನ್ನು ಅಳವಡಿಸಿರುವುದು. SC / ST ಮೀಸಲಾತಿಯಂತೆಯೇ ಎರಡು ಸ್ಥಾನಗಳನ್ನು ೧೯೫೯ರ ಕಾಯಿದೆಯಡಿ ಮಹಿಳೆಯರಿಗಾಗಿ ಕಾಯ್ದಿರಿಸಲಾಗಿತ್ತು.

ಜೂನ್ ೧೯೭೧ರಲ್ಲಿ ೧೯೫೯ರ ಮೈಸೂರು ಗ್ರಾಮಪಂಚಾಯತ್ ಮತ್ತು ಸ್ಥಳೀಯ ಬೋರ್ಡ್ ಕಾಯಿದೆಯನ್ವಯ ೩೩೪ ಪಂಚಾಯತ್‌ಗಳನ್ನು ರಚಿಸಲಾಯಿತು. ಇವುಗಳಲ್ಲಿ ೧೫ ಪಟ್ಟಣ ಪಂಚಾಯತ್‌ಗಳು, ಉಳಿದವು ೩೧೯ ಗ್ರಾಮಪಂಚಾಯತ್‌ಗಳಾಗಿದ್ದವು. ಎಲ್ಲಾ ಪಂಚಾಯತ್‌ಗಳು ತಮ್ಮದೇ ಆದ ಚುನಾಯಿತ ಅಧ್ಯಕ್ಷ ಮತ್ತು ಉಪಾಧ್ಯಕ್ಷರುಗಳನ್ನು ಹೊಂದಿದ್ದವು. ಈ ಪಂಚಾಯತ್‌ಗಳ ತಾಲೂಕುವಾರು ವಿವರ ಕೆಳಗಿನಂತಿದೆ.

| ಕ್ರ.ಸಂ. | ತಾಲೂಕಿನ ಹೆಸರು | ಗ್ರಾಮ ಪಂಚಾಯತ್‌ಗಳ ಸಂಖ್ಯೆ | ಪಟ್ಟಣ ಪಂಚಾಯತ್‌ಗಳ ಸಂಖ್ಯೆ | ಚುನಾಯಿತ ಹಾಗೂ ನಾಮಕರಣಗೊಂಡ ಸದಸ್ಯರು | ಪರಿಶಿಷ್ಟ ಜಾತಿ, ಪರಿಶಿಷ್ಟಪಂಗಡ ಸದಸ್ಯರು | ಮಹಿಳಾ ಸದಸ್ಯರು |
|---|---|---|---|---|---|---|
| ೧. | ಬಳ್ಳಾರಿ | ೬೮ | ೩ | ೩೫೭ | ೧೨೨ | ೧೪೫ |
| ೨. | ಹೊಸಪೇಟೆ | ೨೮ | ೪ | ೪೩೨ | ೫೫ | ೭೬ |
| ೩. | ಸಂಡೂರು | ೨೭ | ೧ | ೩೭೮ | ೬೧ | ೫೮ |
| ೪. | ಕೂಡ್ಲಿಗಿ | ೫೩ | ೨ | ೭೦೭ | ೯೦ | ೧೧೫ |
| ೫. | ಹರಪನಹಳ್ಳಿ | ೪೮ | ೧ | ೬೩೨ | ೧೧೬ | ೧೦೧ |
| ೬. | ಹಡಗಲಿ | ೪೨ | ೨ | ೫೮೨ | ೮೩ | ೮೧ |
| ೭. | ಶಿರುಗುಪ್ಪ | ೪೧ | ೨ | ೫೩೫ | ೬೦ | ೯೧ |
| ೮. | ಮಲ್ಲಾಪುರಂ | ೧೨ | - | ೧೫೬ | ೨೬ | ೨೪ |
| | ಒಟ್ಟು | ೩೧೯ | ೧೫ | ೪೨೭೯ | ೬೧೩ | ೬೯೧ |

ಈ ಎಲ್ಲಾ ಪಂಚಾಯತ್‌ಗಳ ಯೋಜನಾ ಕಾರ್ಯಕ್ರಮಗಳನ್ನು ಆಯಾ ಪಂಚಾಯತ್‌ಗಳೇ ಆಡಳಿತ ಮತ್ತು ಜಾರಿಗೊಳಿಸುವಿಕೆಯನ್ನು ನಿರ್ವಹಿಸುತ್ತಿದ್ದವು. ತಮ್ಮ ವ್ಯಾಪ್ತಿಗೆ ಬರುವ ರಸ್ತೆ ನಿರ್ಮಾಣಗಳು, ದುರಸ್ತಿ ಮತ್ತು ನಿರ್ವಹಣೆಗಳು, ಚರಂಡಿ, ಕಾಲುವೆಗಳು ಮತ್ತು ಕಟ್ಟಡಗಳು, ಸಾರ್ವಜನಿಕ ಬಾವಿ, ಕೆರೆ, ಹಳ್ಳದ ನೀರು, ಟ್ಯಾಂಕುಗಳು, ದೀಪ, ಒಳಚರಂಡಿ ಮತ್ತು ನೈರ್ಮಲ್ಯ, ಕಟ್ಟಡಗಳ ನಿರ್ವಹಣೆ, ಅಂಗಡಿ ಮತ್ತು ತಿನಿಸು - ಖಾನಾವಳಿಗಳು, ಸಾರ್ವಜನಿಕ ಕಟ್ಟಡಗಳು ಮತ್ತು ಅರಣ್ಯ ಭೂಪ್ರದೇಶ, ಜಮೀನು ಇವೆಲ್ಲವುಗಳು ಗ್ರಾಮಪಂಚಾಯತ್ ಆಡಳಿತ ವ್ಯಾಪ್ತಿಯಡಿಯೇ ಬರುತ್ತವೆ. ಇದರೊಂದಿಗೆ ವಿವಿಧ ಕ್ಷೇತ್ರಗಳಲ್ಲಿ ಸಹಕಾರ, ವಿಶೇಷವಾಗಿ ವ್ಯವಸಾಯ, ಆರೋಗ್ಯ ಕೇಂದ್ರಗಳನ್ನು ಅಭಿವೃದ್ಧಿಗೊಳಿಸುವುದು. ೧೯೮೫ರ ಕಾಯಿದೆಯಡಿ ಜಾರಿಗೊಂಡ ಪಂಚಾಯತ್‌ರಾಜ್ ವ್ಯವಸ್ಥೆಯಿಂದ ಇಡೀ ದೇಶಕ್ಕೆ ಒಂದು ಮಾದರಿಯಾದ ರಾಜ್ಯ ಕರ್ನಾಟಕ.

**ಪಂಚಾಯತಿ :** ಪಂಚಾಯತಿಯೆಂಬುದು ಬಹಳ ಹಿಂದಿನಿಂದಲೂ ಬೆಳೆದುಬಂದ ಪದ್ಧತಿ ಅಥವಾ ಒಂದು ಸಂಸ್ಥೆ ಎನ್ನಬಹುದು. ಮೂಲತಃ ಗ್ರಾಮಗಳಲ್ಲಿ ಹಿರಿಯ ಪಂಚ ಪ್ರಮುಖರು ಸೇರಿಕೊಂಡು ಹಳ್ಳಿಯಲ್ಲಿ ನ್ಯಾಯ, ಸೌಹಾರ್ದತೆಯನ್ನು ಬೆಳೆಸಿಕೊಂಡು ಬರಲು ಅಸ್ತಿತ್ವಕ್ಕೆ ಬಂದಂತಹ ಒಂದು ವೈಶಿಷ್ಟ್ಯಪೂರ್ಣ ವ್ಯವಸ್ಥೆ ಎನ್ನಬಹುದು. ತದನಂತರ ಪ್ರಾಚೀನ ಭಾರತದಲ್ಲಿ ಹಾಗೂ ಬ್ರಿಟಿಷರ ಆಡಳಿತಾವಧಿಯಲ್ಲೂ ಈ ವ್ಯವಸ್ಥೆಯು ಅಸ್ತಿತ್ವದಲ್ಲಿತ್ತು. ಮುಂದೆ ಹಲವಾರು ಏರುಪೇರುಗಳೊಂದಿಗೆ ಬದಲಾವಣೆಗಳನ್ನು ಕಂಡುಕೊಂಡರೂ ಈಗ ಇದು ಸಾಂವಿಧಾನಿಕವಾಗಿ ಅಸ್ತಿತ್ವಕ್ಕೆ ಬಂದಿರುವ ವ್ಯವಸ್ಥೆಯಾಗಿದೆ. ಇದು ಜಿಲ್ಲೆ, ತಾಲೂಕು, ಗ್ರಾಮಪಂಚಾಯತ್‌ಗಳೆಂಬ ಮೂರು ಸ್ಥಳೀಯ ಸಂಸ್ಥೆಗಳನ್ನು ಒಳಗೊಂಡಿರುತ್ತದೆ.

ಸಂವಿಧಾನದ ೪೦ನೇ ಅನುಚ್ಛೇದದ ಪ್ರಕಾರ ರಾಜ್ಯ ಸರ್ಕಾರಗಳು ಗ್ರಾಮ ಪಂಚಾಯತಿಗಳನ್ನು ಸ್ಥಾಪಿಸಿ ಅವುಗಳಿಗೆ ಸೂಕ್ತ ಅಧಿಕಾರ ಮತ್ತು ಜವಾಬ್ದಾರಿಯನ್ನು ನೀಡಬೇಕೆಂದಿದೆ. ಆದರೆ ಈ ನಿರ್ದೇಶಕ ತತ್ವದ ಸೂಚನೆ ರಾಜ್ಯಕ್ಕೆ ಮಾತ್ರ ಸಂಬಂಧಿಸಿದ ವಿಷಯವಾದ ಕಾರಣ ಪಂಚಾಯತ್ ವ್ಯವಸ್ಥೆ ಬೇರೆ ಬೇರೆ ರೀತಿಯಲ್ಲಿ ನಡೆಯುತ್ತಾ ಬಂದಿತು. ಈ ಕಾರಣವಾಗಿ ದೇಶದಲ್ಲಿ ಏಕ ರೀತಿಯ ವ್ಯವಸ್ಥೆಯು ರೂಪುಗೊಳ್ಳಲು ಸಾಧ್ಯವಾಗಲಿಲ್ಲ. ೧೯೫೨ರಲ್ಲಿ ಶ್ರೀ ಎಸ್.ಕೆ.ಡೇ ಅವರು ಸಮುದಾಯ ವಿಕಾಸಯೋಜನೆಯ ಮೂಲಕ ಭಾರತದಲ್ಲಿ ಪ್ರಥಮವಾಗಿ ಕ್ಷೇತ್ರಾಭಿವೃದ್ಧಿ ಘಟಕಗಳನ್ನು ಜಾರಿಗೆ ತಂದು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಪ್ರಾರಂಭಿಸಿದರು. ಹಾಗೂ ಇದು ಯಶಸ್ವಿಯಾಗಿ ನಡೆಯಿತೆನ್ನಬಹುದು. ಇಂತಹ ಕಾರ್ಯಕ್ರಮಗಳು ಕೇವಲ ಅಧಿಕಾರಿಗಳಿಂದ ಮಾತ್ರ ಅನುಷ್ಠಾನಗೊಂಡರೆ ಸಾಲದು. ಇದರಲ್ಲಿ ಸಾರ್ವಜನಿಕರ ಪಾಲ್ಗೊಳ್ಳುವಿಕೆಯೂ ಕೂಡ ಅಗತ್ಯವೆಂದು ೧೯೫೭ರಲ್ಲಿ ಶ್ರೀ ಬಲವಂತರಾಯ ಮೆಹ್ತಾ ಅವರು ತಮ್ಮ ಸಮಿತಿಯ ವರದಿಯಲ್ಲಿ ತಿಳಿಸಿದ್ದರು. ತತ್ಫಲವಾಗಿ ಕರ್ನಾಟಕದಲ್ಲಿಯೂ ೧೯೫೯ರಲ್ಲಿ ಗ್ರಾಮ ಪಂಚಾಯತಿ, ತಾಲೂಕು ಅಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾಭಿವೃದ್ಧಿ ಸಮಿತಿ ಎಂಬ ಕಾಯ್ದೆ ಜಾರಿಗೆ ಬಂದಿತು. ಆದರೆ ಈ ವ್ಯವಸ್ಥೆಯು ಕೆಲವೊಂದು ಕಡೆಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕವಾಗಿ ಪ್ರಬಲವಾದ ಜನರ ಕೈಗೊಂಬೆಯಾಗಿ

ಕೆಲಸ ನಿರ್ವಹಿಸುವಂತಹ ಸ್ಥಿತಿಯನ್ನು ತಲುಪಿತು. ಮುಂದೆ ಈ ವ್ಯವಸ್ಥೆಯನ್ನು ಸುಧಾರಿಸಬೇಕೆಂಬ ದೃಷ್ಟಿಯಿಂದ ಶ್ರೀ ಕೊಂಡಜ್ಜಿ ಬಸಪ್ಪನವರ ಸಮಿತಿಯು ೧೯೬೩ರಲ್ಲಿ ಒಂದು ವರದಿಯನ್ನು ನೀಡಿತು. ಅದು ಫಲಪ್ರದವಾಗದೆ ಮೂಲೆ ಗುಂಪಾಯಿತು. ಅಂತೆಯೇ ತಾಲೂಕು ಮಂಡಳಿಗಳಿಗೆ ಸಕಾಲದಲ್ಲಿ ಚುನಾವಣೆಗಳಿಲ್ಲದೆ ಪೂರ್ತಿ ವ್ಯವಸ್ಥೆ ಅಸ್ತವ್ಯಸ್ತವಾಗುವ ಸ್ಥಿತಿಗೂ ಬಂದಿತು. ಇದೇ ಸಮಯದಲ್ಲಿ ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳು ಕೇಂದ್ರ ಹಾಗೂ ರಾಜ್ಯಗಳಿಂದ ಜಾರಿಗೆ ಬಂದಿತು. ಉದಾಹರಣೆಗೆ SF DA / MF AL / IRDP ಮುಂತಾದವು. ಆದರೆ ಈ ಎಲ್ಲ ಕಾರ್ಯಕ್ರಮಗಳಲ್ಲಿ ಸಾರ್ವಜನಿಕರ ಸಹಭಾಗಿತ್ವಕ್ಕೆ ಹೆಚ್ಚಿನ ಮಹತ್ವ ಇರಲಿಲ್ಲ. ೧೯೭೮ರಲ್ಲಿ ಶ್ರೀ ಅಶೋಕ ಮೆಹ್ತಾ ಅವರ ಸಮಿತಿಯು ಎರಡು ಹಂತದ ವ್ಯವಸ್ಥೆಯನ್ನು (ಜಿಲ್ಲೆ ಹಾಗೂ ಮಂಡಲ) ಶಿಫಾರಸ್ಸು ಮಾಡಿತು. ಇದರ ಅನ್ವಯ ಕರ್ನಾಟಕ ರಾಜ್ಯ ಪ್ರಥಮವಾಗಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ೧೯೮೩ರಲ್ಲಿ ಜಾರಿಗೆ ತಂದಿತು. ೧೯೮೩ರ ವ್ಯವಸ್ಥೆಯಲ್ಲಿ ಮಂಡಲ ಮತ್ತು ಜಿಲ್ಲೆ ಎಂಬ ಎರಡು ಹಂತಗಳ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಅಲ್ಲದೇ ಸಾಕಷ್ಟು ಅಧಿಕಾರವನ್ನು ಕೂಡ ಹಸ್ತಾಂತರ ಮಾಡಲಾಗಿತ್ತು. ಇದರೊಂದಿಗೆ ಮಹಿಳೆಯರಿಗೆ ಶೇಕಡಾ ೨೫ರಷ್ಟು ಮೀಸಲಾತಿಯನ್ನು ದೇಶದಲ್ಲೇ ಪ್ರಥಮಬಾರಿಗೆ ಕರ್ನಾಟಕದಲ್ಲಿ ಜಾರಿಗೊಳಿಸಲಾಯಿತು. ಈ ವ್ಯವಸ್ಥೆಯು ಇಲ್ಲಿನ ತನಕ ಆಗಿಹೋಗಿರುವ ವ್ಯವಸ್ಥೆಗಳಲ್ಲಿಯೇ ಅತ್ಯಂತ ಪರಿಣಾಮಕಾರಿಯಾಗಿ ಮತ್ತು ಯಶಸ್ವಿಯಾಗಿ ನಡೆಯಿತೆನ್ನಬಹುದು.

ಇಂತಹ ಯಶಸ್ವಿ ವ್ಯವಸ್ಥೆಯನ್ನು ಗಮನಿಸಿ ಕೇಂದ್ರ ಸರ್ಕಾರವು ಸಂವಿಧಾನದಲ್ಲಿರುವ ನಿದೇಶಕ ತತ್ವದ ೪೦ನೇ ವಿಧಿಗೆ ಪರಿಗಣಿಸಿ ೭೩ನೇ ತಿದ್ದುಪಡಿಯ ಮೂಲಕ ಪಂಚಾಯತ್ ರಾಜ್ ವ್ಯವಸ್ಥೆಯನ್ನು ತಂದಿದೆ. ಆಡಳಿತ ವ್ಯವಸ್ಥೆಯ ಜೊತೆಗೆ ಪ್ರತಿಹಂತದಲ್ಲೂ ಪ್ರಜಾಪ್ರತಿನಿಧಿಗಳ ಉತ್ತಮ ನಾಯಕತ್ವದ ಸಂಪೂರ್ಣ ಸಹಕಾರವನ್ನು ಗಳಿಸುವುದೇ ಪಂಚಾಯತ್ ರಾಜ್ ವ್ಯವಸ್ಥೆಯ ಗುರಿ. ಇದರಿಂದಾಗಿ ಇಲ್ಲಿಯ ತನಕ ರಾಜ್ಯ ಮತ್ತು ಕೇಂದ್ರ ಮಟ್ಟದಲ್ಲಿದ್ದಂತಹ ರಾಜಕೀಯ ವ್ಯವಸ್ಥೆ ಜಿಲ್ಲೆ, ತಾಲೂಕು ಮತ್ತು ಗ್ರಾಮಮಟ್ಟಕ್ಕೆ ಸಾಂವಿಧಾನಿಕವಾಗಿ ರೂಪುಗೊಂಡಂತಾಗಿದೆ. ಇದರನ್ವಯ ೧೯೯೩ರಲ್ಲಿ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆಯು ಜಾರಿಗೆಬಂದಿತು. ಇದನ್ನು ೧೯೯೩ರ ಕಾಯ್ದೆಯಲ್ಲಿರುವ ಪ್ರಮುಖ ಅಂಶಗಳನ್ನು ಸೇರಿಸಿಕೊಂಡು ರಚಿಸಲಾಗಿಯಿತು. ಇದರ ಪ್ರತಿಫಲವಾಗಿ ಕರ್ನಾಟಕ ರಾಜ್ಯವು ಪಂಚಾಯತ್ ರಾಜ್ ಕಾಯ್ದೆಯನ್ನು ೧೯೯೩ರಲ್ಲಿ ಜಾರಿಗೆ ತಂದಿತು. ಅಂತೆಯೇ ಅತ್ಯಂತ ಕೆಳಹಂತದ ವ್ಯವಸ್ಥೆಗೆ ಚುನಾವಣೆಗಳನ್ನು ನಡೆಸಿ ಗ್ರಾಮ ಪಂಚಾಯತಿಗಳ ಅಸ್ತಿತ್ವಕ್ಕೆ ಕಾರಣವಾಯಿತು. ಈ ಸಂವಿಧಾನ ತಿದ್ದುಪಡಿಯಿಂದಾಗಿ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಾಂವಿಧಾನಿಕವಾಗಿ ಅಸ್ತಿತ್ವ ಬಂತು. ಹಿಂದಿದ್ದ ಅಸ್ಥಿರತೆ, ಅಕಾಲಿಕ ಚುನಾವಣೆಗಳು ನಿಂತು ಹೋದವು. ಪ್ರತ್ಯೇಕವಾದ ಚುನಾವಣಾ ಆಯೋಗ ಜಾರಿಗೆ ಬಂದಿತು. ಇದರಿಂದ ಪ್ರತಿ ಐದು ವರ್ಷಕ್ಕೊಮ್ಮೆ ಕಡ್ಡಾಯವಾಗಿ ಚುನಾವಣೆಗಳು ನಡೆಯುವ ವ್ಯವಸ್ಥೆಯು ರೂಪುಗೊಂಡಿತು. ಮಹಿಳೆಯರಿಗೆ ವಿಶೇಷವಾದ ಪ್ರಾಧಾನ್ಯತೆ ನೀಡಲಾಯಿತು. ಅದೇ ರೀತಿ ಹಿಂದುಳಿದ ವರ್ಗದವರಿಗೆ, ಪರಿಶಿಷ್ಟ ಜಾತಿ, ಪಂಗಡದವರಿಗೂ ವಿಶೇಷವಾದ

ಮೀಸಲಾತಿ ವ್ಯವಸ್ಥೆಯು ಜಾರಿಗೆ ಬಂದಿತು. ೧೯೯೩ರ ಕಾಯ್ದೆಯು ಅನೇಕ ರೀತಿಯಲ್ಲಿ ೧೯೮೩ರ ಕಾಯ್ದೆಗೆ ಹೋಲಿಕೆಯಾಗಿದ್ದರೂ ಇದು ಅನೇಕ ಮಾರ್ಪಾಡುಗಳೊಂದಿಗೆ ಜಾರಿಗೆ ಬಂದಿದೆಯೆನ್ನಬಹುದು.

## ಗ್ರಾಮಸಭೆ

ಸಂವಿಧಾನದ ೭೩ನೇ ತಿದ್ದುಪಡಿಯ ಮೂಲಕ ಗ್ರಾಮಸಭೆಗೆ ಸಾಂವಿಧಾನಿಕ ಅಸ್ಥಿತ್ವವನ್ನು ಕಲ್ಪಿಸಲಾಗಿದೆ. ಮತ್ತು ಗ್ರಾಮ ಸಭೆಗಳನ್ನು ವ್ಯವಸ್ಥಿತವಾಗಿ ಏರ್ಪಡಿಸುವುದನ್ನು ಕಡ್ಡಾಯಗೊಳಿಸಲಾಗಿದೆ. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ರ ಕಾಯಿದೆ ಕಲಂ ೩ರಲ್ಲಿ ಗ್ರಾಮಸಭೆಯ ಬಗ್ಗೆ ಉಲ್ಲೇಖಿಸಲಾಗಿದ್ದು, ತನ್ಮೂಲಕ ಸಾರ್ವಜನಿಕರ ಸಹಭಾಗಿತ್ವಕ್ಕೆ ಅವಕಾಶ ಕಲ್ಪಿಸಲಾಗಿದೆ. ಪ್ರತಿ ಆರು ತಿಂಗಳ ಅವಧಿಯೊಳಗೆ ಕನಿಷ್ಟ ಒಂದು ಬಾರಿಯಾದರೂ ಗ್ರಾಮಸಭೆಯನ್ನು ಕರೆಯಲಾಗಿದೆ. ತಪ್ಪಿದಲ್ಲಿ ತಾಲೂಕು ಪಂಚಾಯತಿ ಕಾರ್ಯ ನಿರ್ವಾಹಕ ಅಧಿಕಾರಿಯು ಗ್ರಾಮಸಭೆಯನ್ನು ಕರೆಯಲು ಸೂಕ್ತ ಏರ್ಪಾಡುಗಳನ್ನು ಮಾಡತಕ್ಕದ್ದು, ಗ್ರಾಮಸಭೆಯಲ್ಲಿ ಗ್ರಾಮಪಂಚಾಯತಿಯ ವಾರ್ಷಿಕ ಲೆಕ್ಕಪತ್ರ, ಆಡಳಿತ ವರದಿ, ತಪಾಸಣಾ ವರದಿ, ತೆಗೆದುಕೊಂಡ ಕ್ರಮಗಳ ಬಗ್ಗೆ, ಗ್ರಾಮ ಪಂಚಾಯಿತಿ ತೆಗೆದುಕೊಳ್ಳಬಹುದಾದ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಗ್ರಾಮದಲ್ಲಿನ ಸೌಹಾರ್ದತೆಯ ಬಗ್ಗೆ ಚರ್ಚಿಸಿ, ಗ್ರಾಮ ಪಂಚಾಯತಿಗೆ ಶಿಫಾರಸ್ಸುಗಳನ್ನು ಮಾಡಬಹುದು. ಗ್ರಾಮಸಭೆಯ ಅಧ್ಯಕ್ಷತೆಯನ್ನು ಗ್ರಾಮಪಂಚಾಯತಿ ಅಧ್ಯಕ್ಷರು ವಹಿಸತಕ್ಕದ್ದು. ಅವರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಇಲ್ಲವೇ ಗ್ರಾಮ ಪಂಚಾಯತಿಯ ಯಾವುದೇ ಸದಸ್ಯರು ನಿರ್ವಹಿಸಬಹುದು.

## ಗ್ರಾಮಪಂಚಾಯತಿಯ ರಚನೆ

ಕಲಂ ೪ರ ಪ್ರಕಾರ ಇದು ರಚನೆಯಾಗಿದೆ. ೫೦೦೦ ದಿಂದ ೭೦೦೦ ಜನಸಂಖ್ಯೆಗೆ ಒಂದು ಗ್ರಾಮಪಂಚಾಯತಿ ಇರುತ್ತದೆ. ಗುಡ್ಡಗಾಡು, ಮಲೆನಾಡು ಪ್ರದೇಶಗಳಿಗೆ (ಬೆಳಗಾಂ, ಚಿಕ್ಕಮಗಳೂರು, ದಕ್ಷಿಣಕನ್ನಡ, ಧಾರವಾಡ, ಹಾಸನ, ಕೊಡಗು, ಶಿವಮೊಗ್ಗ, ಉಡುಪಿ, ಹಾವೇರಿ) ೨೫೦೦ ಜನಸಂಖ್ಯೆಗೆ ಕಡಿಮೆಯಿಲ್ಲದಂತೆ ಒಂದು ಗ್ರಾಮಪಂಚಾಯತಿ ಇರುತ್ತದೆ. ಗ್ರಾಮಪಂಚಾಯತಿ ಕೇಂದ್ರ ಸ್ಥಳದಿಂದ ಸುತ್ತಳತೆ ೫ ಕಿ.ಮೀ. ಪರಿಧಿಯಲ್ಲಿರುತ್ತದೆ. ೪೦೦ ಜನಸಂಖ್ಯೆಗೆ ಒಬ್ಬ ಸದಸ್ಯರಂತೆ ಚುನಾಯಿತರಾಗುತ್ತಾರೆ. ಬಹು ಮುಖ್ಯವಾಗಿ ಗ್ರಾಮಪಂಚಾಯತಿಯ ಅಧ್ಯಕ್ಷರು ಮತ್ತು ಸದಸ್ಯರ ಆಯ್ಕೆಯು ಯಾವುದೇ ರಾಜಕೀಯ ಪಕ್ಷದ ಹೆಸರಿನಲ್ಲಿ ನಡೆಯುವುದಿಲ್ಲ. ಆಯಾ ಗ್ರಾಮಗಳಲ್ಲಿ ಉಮೇದುವಾರರು ತಮ್ಮದೇ ಆದಂತಹ ಪಕ್ಷದ ಚಿನ್ಹೆಯನ್ನು ಇಟ್ಟುಕೊಂಡು ಮತವನ್ನು ಯಾಚಿಸುತ್ತಾರೆ. ಈ ಬಗೆಯ ಪಕ್ಷಾತೀತ ರಾಜಕಾರಣದ ಆಯ್ಕೆಯು ಗ್ರಾಮಪಂಚಾಯತಿಯ ಪ್ರಧಾನ ಅಂಶವಾಗಿದೆ. ಆದರೂ ಇಂದು ಗ್ರಾಮಪಂಚಾಯತಿಯ ಈ ಪಕ್ಷಾತೀತ ರಾಜಕಾರಣವು ಯಾವುದೋ ಒಂದು ಪಕ್ಷದ ನೆರಳಲ್ಲಿಯೇ ಪಕ್ಷೇತರ ಚಿನ್ಹೆಯನ್ನು ಅವಲಂಬಿಸಿ

ನಾಮಮಾತ್ರವಾಗಿ ನಡೆಯುತ್ತಿರುವುದು ವಾಸ್ತವದ ಸಂಗತಿಯಾಗಿದೆ. ಹೀಗೆ ಪಕ್ಷಾತೀತ ಅಭ್ಯರ್ಥಿಗಳಾಗಿ ಗೆದ್ದವರು ಮುಂದೆ ಎಂ.ಎಲ್.ಎ. ಚುನಾವಣೆಗಳಲ್ಲಿ ಪಕ್ಷರಾಜಕಾರಣದ ಬೆಂಬಲ ಪಡೆದು ಆಯಾ ಪಕ್ಷವನ್ನು ಪ್ರತಿನಿಧಿಸುವ ಸಾಧ್ಯತೆಯೂ ಉಂಟು. ಇದು ಗ್ರಾಮಪಂಚಾಯತಿಗಳ ರಚನೆಯ ಸ್ವರೂಪವಾಗಿದೆ.

### ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ಗ್ರಾಮಪಂಚಾಯತಿ ಪುರುಷ ಸದಸ್ಯರ ವರ್ಗವಾರು ವಿವರ

| ಕ್ರ. ಸಂ. | ತಾಲೂಕಿನ ಹೆಸರು | ಗ್ರಾಮ ಪಂಚಾಯತಿ ಸಂಖ್ಯೆ | ಪರಿಶಿಷ್ಟ ಜಾತಿ (ಶೇಕಡ) | ಪರಿಶಿಷ್ಟ ಪಂಗಡ (ಶೇಕಡ) | ಹಿಂದುಳಿದ ವರ್ಗ ಎ. (ಶೇಕಡ) | ಹಿಂದುಳಿದ ವರ್ಗ ಬಿ. (ಶೇಕಡ) | ಸಾಮಾನ್ಯ (ಶೇಕಡ) | ಒಟ್ಟು | ಶೇಕಡ ವಾರು |
|---|---|---|---|---|---|---|---|---|---|
| ೧. | ಬಳ್ಳಾರಿ | ೪೦ | ೬೦ (೧೭.೮೫) | ೦೬ (೦೧.೭೮) | ೮೩ (೨೪.೭೦) | ೩೬ (೧೦.೭೧) | ೧೫೧ (೪೪.೯೪) | ೩೩೬ | ೯೯.೯೮ |
| ೨. | ಹೊಸಪೇಟೆ | ೨೨ | ೪೭ (೨೫.೧೩) | ೨೯ (೧೫.೫೦) | ೪೨ (೨೨.೪೫) | ೨೦ (೧೦.೬೯) | ೪೯ (೨೬.೨೦) | ೧೮೭ | ೯೯.೯೭ |
| ೩. | ಸಿರುಗುಪ್ಪ | ೨೬ | ೩೮ (೧೯.೬೮) | ೦೯ (೦೪.೬೬) | ೪೫ (೨೩.೩೧) | ೨೪ (೧೨.೪೩) | ೭೭ (೩೯.೮೯) | ೧೯೩ | ೯೯.೯೭ |
| ೪. | ಸಂಡೂರು | ೨೧ | ೩೭ (೧೮.೯೭) | ೩೩ (೧೬.೯೨) | ೫೨ (೨೬.೬೬) | ೧೭ (೦೮.೭೧) | ೫೬ (೨೮.೭೧) | ೧೯೫ | ೯೯.೯೭ |
| ೫. | ಕೂಡ್ಲಿಗಿ | ೩೩ | ೫೭ (೨೦.೮೦) | ೭೧ (೨೫.೯೧) | ೬೨ (೨೨.೬೨) | ೩೧ (೧೧.೩೧) | ೫೩ (೧೯.೩೪) | ೨೭೪ | ೯೯.೯೮ |
| ೬. | ಹಡಗಲಿ | ೨೪ | ೪೫ (೨೫.೧೩) | ------ | ೪೪ (೨೪.೫೮) | ೨೦ (೧೧.೧೭) | ೭೦ (೩೯.೧೦) | ೧೭೯ | ೯೯.೯೮ |
| ೭. | ಹಗರಿಬೊಮ್ಮನಹಳ್ಳಿ | ೧೯ | ೩೦ (೧೯.೭೩) | ------ | ೩೬ (೨೩.೬೮) | ೧೮ (೧೧.೮೪) | ೬೮ (೪೪.೭೩) | ೧೫೨ | ೯೯.೯೮ |
| | ಒಟ್ಟು | ೧೮೫ | ೩೧೪ (೨೧.೦೪) | ೧೪೮ (೦೯.೭೫) | ೩೬೪ (೨೪.೦೦) | ೧೬೬ (೧೦.೯೮) | ೫೨೪ (೩೪.೭೦) | ೧೫೧೬ | ೯೯.೯೮ |

## ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳ ಗ್ರಾಮಪಂಚಾಯತಿ ಮಹಿಳಾ ಸದಸ್ಯರ ವರ್ಗವಾರು ವಿವರ

| ಕ್ರ. ಸಂ. | ತಾಲೂಕಿನ ಹೆಸರು | ಗ್ರಾಮ ಪಂಚಾಯತಿ ಸಂಖ್ಯೆ | ಪರಿಶಿಷ್ಟ ಜಾತಿ (ಶೇಕಡ) | ಪರಿಶಿಷ್ಟ ಪಂಗಡ (ಶೇಕಡ) | ಹಿಂದುಳಿದ ವರ್ಗ ಎ. (ಶೇಕಡ) | ಹಿಂದುಳಿದ ವರ್ಗ ಬಿ. (ಶೇಕಡ) | ಸಾಮಾನ್ಯ (ಶೇಕಡ) | ಒಟ್ಟು | ಶೇಕಡ ವಾರು |
|---|---|---|---|---|---|---|---|---|---|
| ೧. | ಬಳ್ಳಾರಿ | ೪೦ | ೪೮ | ೩೯ | ೭೬ | ೦೪ | ೯೫ | ೨೬೨ | |
| | | | (೧೮.೩೨) | (೧೪.೮೮) | (೨೯.೦೦) | (೦೧.೫೨) | (೩೬.೨೫) | | ೯೯.೯೭ |
| ೨. | ಹೊಸಪೇಟೆ | ೨೨ | ೩೬ | ೨೭ | ೪೦ | ೦೨ | ೩೧ | ೧೩೬ | |
| | | | (೨೬.೪೭) | (೧೯.೮೫) | (೨೯.೪೧) | (೦೧.೪೭) | (೨೨.೭೯) | | ೯೯.೯೯ |
| ೩. | ಸಿರುಗುಪ್ಪ | ೨೬ | ೩೧ | ೨೬ | ೫೦ | ೦೩ | ೫೯ | ೧೬೯ | |
| | | | (೧೮.೩೪) | (೧೫.೩೮) | (೨೯.೫೮) | (೦೧.೭೭) | (೩೪.೯೧) | | ೯೯.೯೮ |
| ೪. | ಸಂಡೂರು | ೨೧ | ೨೮ | ೩೨ | ೪೧ | ೦೫ | ೪೫ | ೧೫೧ | |
| | | | (೧೮.೫೪) | (೨೧.೧೯) | (೨೭.೧೫) | (೦೩.೩೧) | (೨೯.೮೦) | | ೯೯.೯೯ |
| ೫. | ಕೂಡ್ಲಿಗಿ | ೩೩ | ೪೭ | ೫೬ | ೫೬ | ೦೧ | ೪೧ | ೨೦೧ | |
| | | | (೨೩.೩೮) | (೨೭.೮೬) | (೨೭.೮೬) | (೦.೪೯) | (೨೦.೩೯) | | ೯೯.೯೮ |
| ೬. | ಹಡಗಲಿ | ೨೪ | ೩೭ | ೨೪ | ೪೫ | ೦೩ | ೪೫ | ೧೫೪ | |
| | | | (೨೪.೦೨) | (೧೫.೫೮) | (೨೯.೨೨) | (೦೧.೯೪) | (೨೯.೨೨) | | ೯೯.೯೮ |
| ೭. | ಹಗರಿಬೊಮ್ಮನಹಳ್ಳಿ | ೧೯ | ೨೫ | ೧೯ | ೩೪ | ೦೧ | ೪೫ | ೧೨೫ | |
| | | | (೨೦.೦೦) | (೧೫.೨೦) | (೨೭.೨೦ | (೦೦.೮೦) | (೩೬.೦೦) | | ೯೯.೨೦ |
| | ಒಟ್ಟು | ೧೮೫ | ೨೫೨ | ೨೨೩ | ೩೪೨ | ೧೯ | ೩೬೧ | ೧೧೯೮ | ೯೯.೮೯ |
| | | | (೨೧.೨೮) | (೧೮.೪೨) | (೨೮.೪೨) | (೦೧.೬೧) | (೨೯.೯೦) | | |

## ಗ್ರಾಮಪಂಚಾಯತಿಗಳಲ್ಲಿ ಸರ್ಕಾರಿ ಮೀಸಲಾತಿಗಿಂತ ಹೆಚ್ಚು ಮತ್ತು ಕಡಿಮೆ ಪಾಲುಗಾರಿಕೆಯನ್ನು ಪಡೆದ ಮಹಿಳಾ ಸದಸ್ಯರ ವರ್ಗವಾರು ಶೇಕಡ ವಿವರ

| ಕ್ರ. ಸಂ. | ತಾಲೂಕಿನ ಹೆಸರು | ಸಾಮಾನ್ಯ ವರ್ಗ | ಹಿಂದುಳಿದ ವರ್ಗ ಎ. | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ ಬಿ | ಶೇಕಡವಾರು |
|---|---|---|---|---|---|---|---|
| ೧. | ಬಳ್ಳಾರಿ | ೩೬.೨೫ | ೨೯.೦೦ | ೧೮.೩೨ | ೧೪.೮೮ | ೦೧.೫೨ | ೯೯.೯೭ |
| ೨. | ಹೊಸಪೇಟೆ | ೨೨.೭೯ | ೨೯.೪೧ | ೨೬.೪೭ | ೧೯.೮೫ | ೦೧.೪೭ | ೯೯.೯೯ |
| ೩. | ಸಿರುಗುಪ್ಪ | ೩೪.೯೧ | ೨೯.೫೮ | ೧೮.೩೪ | ೧೫.೩೮ | ೦೧.೭೭ | ೯೯.೯೮ |
| ೪. | ಸಂಡೂರು | ೨೯.೮೦ | ೨೭.೧೫ | ೧೮.೫೪ | ೨೧.೧೯ | ೦೩.೩೧ | ೯೯.೯೯ |
| ೫. | ಕೂಡ್ಲಿಗಿ | ೨೦.೩೯ | ೨೭.೮೬ | ೨೩.೩೮ | ೨೭.೮೬ | ೦೦.೪೯ | ೯೯.೯೮ |
| ೬. | ಹಡಗಲಿ | ೨೯.೨೨ | ೨೯.೨೨ | ೨೪.೦೨ | ೧೫.೫೮ | ೦೧.೯೪ | ೯೯.೯೮ |
| ೭. | ಹಗರಿಬೊಮ್ಮನಹಳ್ಳಿ | ೩೬.೦೦ | ೨೭.೨೦ | ೨೦.೦೦ | ೧೫.೨೦ | ೦೦.೮೦ | ೯೯.೨೦ |
| | ಒಟ್ಟು ಶೇಕಡಾವಾರು | ೨೯.೯೦ | ೨೮.೪೨ | ೨೧.೨೮ | ೧೮.೪೨ | ೦೧.೬೧ | |

ಚುನಾವಣೆಯ ಮೂಲಕ ನಗರಸಭೆ ಮತ್ತು ಗ್ರಾಮಪಂಚಾಯತಿಗಳಿಗೆ ಆಯ್ಕೆಯಾದ ಮಹಿಳಾ ಸದಸ್ಯರ ಅಂಕಿ - ಅಂಶಗಳನ್ನು ಗಮನಿಸಿದಾಗ ಸರ್ಕಾರ ಮಹಿಳೆಯರಿಗೆ ನಿಗದಿಪಡಿಸಿದ ಶೇಕಡಾ ೩೩ ಮೀಸಲಾತಿಗಿಂತ ಹೆಚ್ಚಿನ ಪಾಲುಗಾರಿಕೆಯನ್ನು ಪಡೆದಿದ್ದಾರೆ. ಪ್ರಸ್ತುತ ನಗರಸಭೆಗೆ ಆಯ್ಕೆಯಾದ ಮಹಿಳಾ ಸದಸ್ಯರ ಪ್ರಮಾಣ ಶೇಕಡಾ ೩೭ ರಷ್ಟಿದ್ದರೆ, ಗ್ರಾಮಪಂಚಾಯತಿಗಳಿಗೆ ಆಯ್ಕೆಯಾದ ಮಹಿಳಾ ಸದಸ್ಯರ ಪ್ರಮಾಣ ಶೇಕಡಾ ೪೪.೧೪ ರಷ್ಟಿದೆ. ಅಂದರೆ ಈ ಎರಡೂ ಕ್ಷೇತ್ರಗಳಲ್ಲಿ ಶೇಕಡಾ ೪ ಮತ್ತು ಶೇಕಡಾ ೧೧ ರಷ್ಟು ಅನುಕ್ರಮವಾಗಿ ಹೆಚ್ಚುವರಿ ಮೀಸಲಾತಿಯನ್ನು ಪಡೆದಿದ್ದಾರೆ. ಇದು ಮಹಿಳೆಯ ರಾಜಕೀಯ ಆಸಕ್ತಿಯನ್ನು ಸೂಚಿಸುತ್ತದೆ. ಹಾಗೆಯೇ ಮಹಿಳೆಯರಲ್ಲೇ ವರ್ಗಾವಾರು ಪಾಲುಗಾರಿಕೆಯನ್ನು ಗಮನಿಸಿದಾಗ ಎರಡೂ ಕ್ಷೇತ್ರಗಳಲ್ಲಿ ಸಾಮಾನ್ಯ ವರ್ಗದ ಮಹಿಳೆಯೇ ಮೇಲುಗೈ ಸಾಧಿಸಿದ್ದಾಳೆ. ನಂತರದ ಸ್ಥಾನಗಳನ್ನು ಕ್ರಮವಾಗಿ ಹಿಂದುಳಿದವರ್ಗ ಎ. ಪರಿಶಿಷ್ಟಜಾತಿ, ಪರಿಶಿಷ್ಟಪಂಗಡ ಮತ್ತು ಹಿಂದುಳಿದ ವರ್ಗ ಬಿ. ಪಡೆದುಕೊಂಡಿದೆ. ಈ ಎಲ್ಲಾ ಅಂಕಿ ಅಂಶಗಳನ್ನು ಗಮನಿಸಿದಾಗ ಒಟ್ಟಾರೆ ರಾಜಕೀಯದಲ್ಲಿ ಮಹಿಳೆಯರ ಮೀಸಲಾತಿಯು ಗಣನೀಯ ಪ್ರಮಾಣದಲ್ಲಿ ಹೆಚ್ಚುತ್ತಾ ಹೋಗುತ್ತಿದೆ. ಆದರೆ ಮಹಿಳೆಯರಲ್ಲೇ ವರ್ಗಾವಾರು ಪಾಲುಗಾರಿಕೆಯನ್ನು ಗಮನಿಸಿದಾಗ ಹಿಂದುಳಿದ ವರ್ಗ ಬಿ. ನ ಮಹಿಳೆಯರ ಪಾಲುಗಾರಿಕೆ ತುಂಬಾ ಕಡಿಮೆ ಇದೆ.

❖❖

೫

# ಬಳ್ಳಾರಿ ಜಿಲ್ಲೆಯ ನಗರಸಭೆ ಹಾಗೂ

# ಗ್ರಾಮ ಪಂಚಾಯಿತಿಗಳ ಸದಸ್ಯೆಯರ ಪ್ರೊಫೈಲ್

೫

# ಬಳ್ಳಾರಿ ಜಿಲ್ಲೆಯ ನಗರಸಭೆ ಹಾಗೂ ಗ್ರಾಮ ಪಂಚಾಯಿತಿಗಳ ಸದಸ್ಯೆಯರ ಪ್ರೊಫೈಲ್

ಇಂದು ಮಹಿಳೆಯು ಎಲ್ಲಾ ರಂಗಗಳಲ್ಲಿ ಪ್ರವೇಶಿಸಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಳೆ. ಈವರೆಗೆ ಮಹಿಳೆಯು ಶೋಷಣೆಗೆ ಒಳಗಾಗಿದ್ದಳು. ತನ್ನ ಸಾಮರ್ಥ್ಯವನ್ನು ತಾನೇ ಸಾಬೀತು ಮಾಡಿಕೊಂಡು ಅತ್ಯಂತ ಸಬಲಳಾಗಿ ಅಭಿವೃದ್ಧಿ ಯಾಗತೊಡಗಿದ್ದಾಳೆ. ಅಂತೆಯೇ ರಾಜಕೀಯ ರಂಗಕ್ಕೂ ಮಹಿಳೆಯು ತನ್ನದೇ ಆದಂತಹ ಕೊಡುಗೆಯನ್ನು ನೀಡುತ್ತಿದ್ದಾಳೆ. ಮೀಸಲಾತಿಯ ಮುಖೇನ ಗ್ರಾಮಮಟ್ಟದ ರಾಜಕಾರಣದಲ್ಲಿ ಪುರುಷನಿಗೆ ಸಮಾನವಾಗಿ ಅವಕಾಶ ಪಡೆದು ರಾಜಕೀಯದ ಮಗ್ಗುಲುಗಳನ್ನು ಬೇಧಿಸಿ ಸಮಕಾಲೀನ ಗ್ರಾಮೀಣ ಸವಾಲುಗಳಿಗೆ ಮುಖಾಮುಖಿಯಾಗುತ್ತಿದ್ದಾಳೆ. ಗ್ರಾಮೀಣ ರಾಜಕೀಯವಲ್ಲದೇ ನಗರ ಪ್ರದೇಶದಲ್ಲಿಯೂ ಮಹಿಳೆಯು ಸ್ವಸಾಮರ್ಥ್ಯದಿಂದ ರಾಜಕಾರಣವನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತಿದ್ದಾಳೆ. ಮಹಿಳೆ ಮೀಸಲಾತಿಯ ಮೂಲಕ ಪ್ರವೇಶಿಸುವುದರಿಂದ ಭಾರತದಲ್ಲಿ ಎಲ್ಲ ಜಾತಿ, ವರ್ಗಗಳಿಂದ ರಾಜಕಾರಣದ ಅಧಿಕಾರ ದೇಶದ ಸಮಸ್ಯೆಗಳಿಗೆ ಸ್ಪಂದಿಸುವಂತಾಗಿದೆ. ಅದರಲ್ಲಿಯೂ ಕೌಟುಂಬಿಕ ವಲಯದಲ್ಲಿ ಬೆಳೆದ ಮಹಿಳೆಯು ತಾನು ಅನುಭವಿಸಿದ ಮೂಲಭೂತ ಸಮಸ್ಯೆಗಳನ್ನೇ ಗಮನದಲ್ಲಿಟ್ಟುಕೊಂಡು ರಾಜಕೀಯದ ಮೂಲಕ ಅದನ್ನು ಸ್ಪಂದಿಸಿ ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿದ್ದಾರೆ. ಗ್ರಾಮೀಣ ಹಾಗೂ ನಗರ ರಾಜಕಾರಣದಲ್ಲಿ ಮಹಿಳೆಯು ಒಂದು ಶಕ್ತಿಯಾಗಿ ಬೆಳೆಯುವಲ್ಲಿ ಪುರುಷರ ಕೈವಾಡವೂ ಇದೆಯಾದರೂ, ಅದು ದುರ್ಬಳಕೆಯಾಗುವ

ಅಪಾಯಗಳಿಗೆ ಎಡೆಮಾಡುವುದೇ ಹೆಚ್ಚು. ಅದೇನಿದ್ದರೂ ರಾಜಕಾರಣದ ತಾತ್ವಿಕ ನಿಲುವುಗಳಲ್ಲಿ ಮಹಿಳೆಯು ಇನ್ನೂ ಸಬಲಳಾಗಬೇಕಾಗಿದೆ.

ಈ ಹಿನ್ನೆಲೆಯೊಂದಿಗೆ ಬಳ್ಳಾರಿ ಜಿಲ್ಲೆಯ ಮಹಿಳಾ ರಾಜಕಾರಣದಲ್ಲಿರುವ ಕೆಲವು ಮಹಿಳೆಯರನ್ನು ನೇರವಾಗಿ ಸಂದರ್ಶಿಸಲಾಗಿದೆ. ಗ್ರಾಮಪಂಚಾಯತಿಯ ಅಧ್ಯಕ್ಷ, ಸದಸ್ಯರು ಹಾಗೂ ನಗರಸಭೆಯ ಅಧ್ಯಕ್ಷೆ ಹಾಗು ಸದಸ್ಯರುಗಳಿಂದ ಆಯ್ದ ಪ್ರೊಫೈಲ್‌ನ್ನು ನೀಡಲಾಗಿದೆ. ಇಲ್ಲಿ ಮುಖ್ಯವಾಗಿ ನೇರ ಸಂದರ್ಶನ ಮಾಡುವ ಮೂಲಕ ಅವರ ಮಾತು, ಅವರ ರಾಜಕೀಯ ಅನುಭವ, ರಾಜಕೀಯದಿಂದ ಹೊಂದಿರುವ ಮಾಹಿತಿ ಅವರ ರಾಜಕೀಯ ಸ್ಥಾನಮಾನ, ಅವರಿಗಿರುವ ಆಸಕ್ತಿ, ಅಭಿವೃದ್ಧಿಯೋಜನೆಯ ಕುತೂಹಲ ಮುಂತಾದ ಸೂಕ್ಷ್ಮವಾದ ಸಂಗತಿಗಳನ್ನು ಗಮನಿಸಲಾಗಿದೆ. ಇದರಿಂದ ಸ್ತ್ರೀಯರು ರಾಜಕೀಯಕ್ಕೆ ಬಂದ ನಂತರ ಯಾವ ಬಗೆಯಲ್ಲಿ ಸಮಾಜದೊಂದಿಗೆ ಸ್ಪಂದಿಸುತ್ತಿದ್ದಾರೆಂಬುದನ್ನು ನೋಡಲಾಗಿದೆ.

**ಹೊಸಪೇಟೆ ನಗರಸಭೆ ಮಹಿಳಾ ಅಧ್ಯಕ್ಷರ ವಿವರ**

| | | | | | |
|---|---|---|---|---|---|
| ಹೆಸರು | : | ಎರಿಯಮ್ಮ | ನಗರ | : | ಹೊಸಪೇಟೆ |
| ವಯಸ್ಸು | : | ೩೨ | ತಾಲೂಕು | : | ಹೊಸಪೇಟೆ |
| ಜಾತಿ | : | ಕುರುಬರು | ಜಿಲ್ಲೆ | : | ಬಳ್ಳಾರಿ |
| ಉದ್ಯೋಗ | : | ನಗರಸಭೆ ಅಧ್ಯಕ್ಷರು | | | |

ಶ್ರೀಮತಿ ಎರಿಯಮ್ಮ ಇವರು ಹೊಸಪೇಟೆ ನಗರದ ನಗರಸಭಾಧ್ಯಕ್ಷರು. ತರುಣ ವಯಸ್ಸಿನ ಇವರು ಕುರುಬ ಜನಾಂಗಕ್ಕೆ ಸೇರಿದವರು. ಕೃಷಿ ಮನೆತನದಿಂದ ರಾಜಕೀಯ ಪ್ರವೇಶ ಮಾಡಿದ್ದಾರೆ. ಸರ್ಕಾರದ ಮಹಿಳಾ ಮೀಸಲಾತಿಯ ಅನ್ವಯ ಹೊಸಪೇಟೆಯ ೬ನೇ ವಾರ್ಡಿನಿಂದ ಕಾಂಗ್ರೆಸ್ ಪಕ್ಷದ ಮೂಲಕ ಸ್ಪರ್ಧಿಸಿ ಬಂದಿದ್ದಾರೆ. ಮೂಲತ: ರಾಜಕೀಯ ಆಸಕ್ತಿಯಿಲ್ಲದ ಇವರನ್ನು ವಾರ್ಡಿನ ಜನತೆಯು ಒತ್ತಾಯದ ಮೇರೆಗೆ ರಾಜಕೀಯ ರಂಗಕ್ಕೆ ತಂದಿದ್ದಾರೆ. ತದನಂತರ ಎರಿಯಮ್ಮ ರಾಜಕೀಯ ಹಿತಾಸಕ್ತಿಯನ್ನು ಹೊಂದಿದ್ದಾರೆ. ಮೂಲತ: ಆಂಧ್ರದ ರಾಯದುರ್ಗದಿಂದ ಬಂದಂತಹ ಇವರ ತಂದೆ-ತಾಯಿಗಳೂ ಕೃಷಿಕರು. ಈ ತಂದೆ - ತಾಯಿಗಳು ಮೊದಲಿನಿಂದಲೂ ಕಾಂಗ್ರೆಸ್ ಪಕ್ಷಕ್ಕೆ ಒಲವು ಉಳ್ಳವರಾಗಿದ್ದರು. ಎರಿಯಮ್ಮನವರು ಹೊಸಪೇಟೆಯ ಮಹಿಳಾ ಮಂಡಳದೊಂದಿಗೆ ಸಂಪರ್ಕ ಹೊಂದಿದ್ದರಿಂದಾಗಿ ಚಾಕಚಕ್ಯತೆಯನ್ನು ಬೆಳೆಸಿಕೊಂಡಿದ್ದಾರೆ. ಅಲ್ಲದೇ ಏಳನೇ ತರಗತಿಯವರೆಗೆ ಓದಿದ ಇವರು ರಾಜಕೀಯವನ್ನು ನಿಧಾನವಾಗಿ ಅರಿಯುವ ಸಾಮರ್ಥ್ಯವಿದೆ.

ಎರಿಯಮ್ಮನವರ ನಗರಸಭಾಧ್ಯಕ್ಷ ಪದವಿಯ ಅಧಿಕಾರವಧಿ ಒಟ್ಟು ೩೦ ತಿಂಗಳು. ಈಗ ಹದಿನೈದು ತಿಂಗಳು ಕಳೆದಿದೆ (ಏಪ್ರಿಲ್ ೨೦೦೩). ಹೊಸಪೇಟೆ ನಗರಸಭೆಗೆ ಬರುವ ಒಟ್ಟು ಮೂವತ್ತೆರಡು ವಾರ್ಡ್‌ಗಳಲ್ಲಿನ

ಸದಸ್ಯರೊಂದಿಗೆ ಉತ್ತಮ ಸಹಕಾರ ಮನೋಭಾವನೆಯಿದೆಯೆಂದು ಅವರು ಅಭಿಪ್ರಾಯ ಪಡುತ್ತಾರೆ. ಎಲ್ಲ ಸದಸ್ಯರೊಂದಿಗೆ ನಗರದ ಕುಂದು ಕೊರತೆಗಳ ಬಗೆಗೆ ಚರ್ಚಿಸಿ, ಮುಂದಿನ ಕಾರ್ಯರೂಪದ ಬಗ್ಗೆ ಯೋಚಿಸುತ್ತೇವೆ. ಅಲ್ಲದೇ ಆಯಾ ವಾರ್ಡಿನ ಕೌನ್ಸಿಲರುಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಸಮಸ್ಯೆಗಳನ್ನು ಗಮನಕ್ಕೆ ತಂದರೆ ಅವುಗಳನ್ನು ಸಾಧ್ಯವಾದಷ್ಟು ಪರಿಹರಿಸುವ ಕ್ರಮ ತೆಗೆದುಕೊಳ್ಳುತ್ತೇವೆ. ಮಹಿಳೆಯರೂ ನಗರಸಭೆಯ ಸದಸ್ಯರಿದ್ದಾರೆ. ಶೀಲಾ ಎಂಬುವವರು ಐದನೇ ವಾರ್ಡಿನ ಸದಸ್ಯರು. ಅವರು ಈ ಮುಂಚೆ ಕೌನ್ಸಿಲರಾಗಿದ್ದರು. ನಗರದ ದೊಡ್ಡ ದೊಡ್ಡ ಸಮಸ್ಯೆಗಳು ಬಂದರೆ ಎಂ.ಎಲ್.ಎ. ಅವರೊಂದಿಗೆ ಚರ್ಚಿಸುತ್ತೇವೆ. ಎಂ.ಎಲ್.ಎ. ಅವರೂ ಕಾಂಗ್ರೆಸ್ ಪಕ್ಷದವರಾಗಿದ್ದಾರೆ. ಇದರಿಂದ ಉತ್ತಮ ಸಹಕಾರ ನೀಡುತ್ತಾರೆ. ಅಲ್ಲದೇ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳುವಾಗ ನಗರಸಭೆಯ ಎಲ್ಲ ಸದಸ್ಯರು, ಉಪಾಧ್ಯಕ್ಷರೊಂದಿಗೆ ಒಂದುಗೂಡಿ ಚರ್ಚಿಸುತ್ತೇವೆ. ಕಾಂಗ್ರೆಸ್ಸೇತರ ಅಭ್ಯರ್ಥಿಗಳೂ ಕೆಲವು ವಾರ್ಡುಗಳ ಸದಸ್ಯರಿದ್ದಾರೆ. ಆದರೂ ಎಲ್ಲ ವಾರ್ಡುಗಳಿಗೂ ರಾಜಕೀಯ ಪಕ್ಷಭೇದವನ್ನು ಮಾಡದೇ ನಾವು ಸಮಾನವಾದ ಸಹಕಾರ, ಸೌಹಾರ್ದತೆಯನ್ನು ಕಾಪಾಡಿಕೊಂಡು ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಗಮನ ಕೊಡುತ್ತೇವೆ.

ಸರ್ಕಾರಿ ಅಧಿಕಾರಿಗಳೂ ನಮ್ಮೊಂದಿಗೆ ಉತ್ತಮ ಸಹಕಾರ ನೀಡುತ್ತಿದ್ದಾರೆ. ಕೆಲವು ಸಮಸ್ಯೆಗಳನ್ನು ಅವರೊಂದಿಗೆ ಚರ್ಚಿಸಿ ಪರಿಹರಿಸಿಕೊಳ್ಳಲಾಗುತ್ತದೆ. ಕಟ್ಟಡ ಮುಂತಾದ ನಿರ್ಮಾಣ ಕಾರ್ಯಗಳಿಗೆ ನಗರಸಭಾ ಅಭಿಯಂತರರೊಂದಿಗೆ ಮಾತನಾಡುತ್ತೇವೆ. ಒಟ್ಟಾರೆ ಎಲ್ಲರೊಂದಿಗೆ ಉತ್ತಮ ಬಾಂಧವ್ಯ ನನಗಿದೆ ಎಂದು ತಮ್ಮ ರಾಜಕಾರಣದ ಬಗ್ಗೆ ಅಭಿಪ್ರಾಯ ಪಟ್ಟಿದ್ದಾರೆ.

ಹೊಸಪೇಟೆಯಲ್ಲಿ ರೈತಾಪಿಜನರು ಹೆಚ್ಚಾಗಿದ್ದಾರೆ. ಅಲ್ಲದೇ ಅನೇಕ ಸ್ಲಂಗಳಿವೆ. ರಸ್ತೆಗಳು ದುಸ್ಥಿತಿಯಲ್ಲಿವೆ. ಚರಂಡಿ ವ್ಯವಸ್ಥೆಯು ಅಷ್ಟಾಗಿ ಅಭಿವೃದ್ಧಿ ಹೊಂದಿಲ್ಲ. ಸ್ಲಂ ಪ್ರದೇಶಗಳಲ್ಲಿ ಚರಂಡಿಗಳೇ ಇಲ್ಲ. ಈ ಕಾರಣದಿಂದ ಇದನ್ನು ಅಷ್ಟು ಬೇಗ ಅಭಿವೃದ್ಧಿ ಪಡಿಸಲಾಗುವುದಿಲ್ಲ. ಇದಕ್ಕೆ ದೀರ್ಘ ಸಮಯದ ಅಗತ್ಯವಿದೆ. ನಾನು ಅಧ್ಯಕ್ಷೆಯಾದಾಗಿನಿಂದ ಈ ಬಗ್ಗೆ ಕಾರ್ಯಪ್ರವೃತ್ತಳಾಗಿದ್ದೇನೆ. ಎಲ್ಲರೊಂದಿಗೆ ಮಾತನಾಡಿ ಈಗಾಗಲೇ ರಸ್ತೆಯ ನಿರ್ಮಾಣ ಮಾಡಲಾಗುತ್ತಿದೆ. ರಸ್ತೆ ನಿರ್ಮಾಣಕ್ಕಾಗಿ ೧,೦೦,೦೦೦ ರೂಪಾಯಿ ಬಿಡುಗಡೆಯಾಗಿದೆ. ಕೆಲವು ರಸ್ತೆಗಳು ಈಗ ನಿರ್ಮಾಣಗೊಂಡಿವೆ. ಸ್ಲಂಗಳ ಅಭಿವೃದ್ಧಿಗಾಗಿ ವಿಶೇಷ ಅನುದಾನ ನಮಗೆ ಬರುವುದಿಲ್ಲ. ಸ್ಲಂ ಬೋರ್ಡಿನಿಂದ ಕೊಳಚೆ ಪ್ರದೇಶದ ಅಭಿವೃದ್ಧಿಗೆ ಹಣ ಬರುತ್ತದೆ. ಅದನ್ನೇ ಬಳಸಬೇಕಾಗುತ್ತದೆ. ಅಲ್ಲಲ್ಲಿ ಒಳಚರಂಡಿಯ ವ್ಯವಸ್ಥೆಯೂ ನಡೆದಿದೆ. ಕುಡಿಯುವ ನೀರಿನ ಪೂರೈಕೆಯ ದೊಡ್ಡ ಸಮಸ್ಯೆ ಇದ್ದರೆ ಎಂ.ಎಲ್ .ಎ. ಅವರೇ ನೋಡಿಕೊಳ್ಳುತ್ತಾರೆ. ರಸ್ತೆ, ಒಳಚರಂಡಿ ಅಭಿವೃದ್ಧಿಗಾಗಿ SGRY ನಿಂದ ೧೦,೦೦,೦೦೦ ರೂಪಾಯಿ ಬಿಡುಗಡೆಯಾಗಿದೆ. ಇದರಿಂದ ರಾಮ ಥಿಯೇಟರ್‌ನಿಂದ ರಸ್ತೆಯ ನಿರ್ಮಾಣ ಮಾಡಲಾಗಿದೆ. ಅಲ್ಲದೇ ಕೆಲವು ಖಾಸಗಿ ಕಂಪನಿಗಳೊಂದಿಗೆ ಚರ್ಚಿಸಿ ನಗರದ ವೃತ್ತಗಳನ್ನು ಸುಂದರವಾಗಿ ನಿರ್ಮಿಸಲಾಗುತ್ತಿದೆ. ಈಗ ಮದಕರಿನಾಯಕ ವೃತ್ತವನ್ನು ಬಲ್ಡೋಟದೊಂದಿಗೆ ಸೇರಿ ಸುಂದರವಾಗಿ

ನಿರ್ಮಿಸಲಾಗಿದೆ. ನಗರದ ಗಾಂಧಿವೃತ್ತವನ್ನು ಈಗ ಕೈಗೆತ್ತಿಕೊಂಡಿದ್ದೇವೆ. ಅಲ್ಲದೇ ಕೆಲವು ಪಾರ್ಕುಗಳನ್ನು ಇದೇ ರೀತಿ ಖಾಸಗಿ ಜನರೊಂದಿಗೆ ಸುಂದರವಾಗಿ ಬೆಳೆಸುವ ಯೋಚನೆಯಲ್ಲಿದ್ದೇವೆ.

HUDCO ನಿಂದ ಒಂದುಕೋಟಿ ರೂಪಾಯಿ ಸಾಲವನ್ನು ಪಡೆಯಲಾಗಿದೆ. ಈ ಹಣದಿಂದ ಐದುಲಕ್ಷ ವೆಚ್ಚದಲ್ಲಿ ನಗರದ ರೀಡಿಂಗ್ ರೂಂನ ಹತ್ತಿರ ಸುಲಭ ಶೌಚಾಲಯ, ಕೆಲವು ರಸ್ತೆಗಳು, ಚರಂಡಿ ನಿರ್ಮಾಣ ಮಾಡಲಾಗುತ್ತಿದೆ. ಮುಖ್ಯವಾಗಿ ಪ್ರತಿ ವಾರ್ಡಿಗೂ ಶೌಚಾಲಯಗಳನ್ನು ನಿರ್ಮಾಣ ಮಾಡುತ್ತಿದ್ದೇವೆ. ಅಲ್ಲದೆ ಕೆಲವು ಶಾಲೆಗಳಲ್ಲಿಯೂ ಶೌಚಾಲಯ ನಿರ್ಮಿಸುವ ಬಗ್ಗೆ ಚರ್ಚಿಸುತ್ತಿದ್ದೇವೆ.

ಮುಖ್ಯವಾಗಿ ಹೊಸಪೇಟೆ ನಗರವು ಮೈನಿಂಗ್ ಏರಿಯಾ ಆಗಿದೆ. ಇದರಿಂದ ರಸ್ತೆಗಳು ತುಂಬಾ ಹಾಳಾಗುತ್ತಿವೆ. ಮೈನ್ಸ್ ಲಾರಿಗಳು ಹೆಚ್ಚಿನ ಭಾರ ಹೊತ್ತುಕೊಂಡು ಬರುವುದರಿಂದ ರಸ್ತೆಗಳು ಹಾಳಾಗುತ್ತಿವೆ. ಧೂಳು ಬರುತ್ತಿದೆ. ಕಾರಣ ಇದಕ್ಕೆ ರಿಂಗ್ ರೋಡ್ಸ್ ಬೇಕು. ಸರ್ಕಾರವೇ ಈ ಬಗ್ಗೆ ಕ್ರಮ ತೆಗೆದುಕೊಳ್ಳಬೇಕು.

ಹೊಸಪೇಟೆ ನಗರದ ಸರಕಾರಿ ಆಸ್ತಿಯಾದ ಭೂಮಿ ಮುಂತಾದ ಅತಿಕ್ರಮಣಕ್ಕೆ ಸರಿಯಾದ ಕ್ರಮ ತೆಗೆದುಕೊಳ್ಳಲಾಗಿದೆ. ರಸ್ತೆ ಪಕ್ಕದ ಅಂಗಡಿ ಮುಂಗಟ್ಟುಗಳ ಆಕ್ರಮಣವನ್ನು ತೆರವು ಮಾಡಿಸಿದ್ದೇವೆ. ನಗರದಿಂದ ಎಲ್ಲ ರೀತಿಯ ತೆರಿಗೆ (Tax) ಬರುತ್ತಿದೆ. ಅದನ್ನು ಅಭಿವೃದ್ಧಿ ಕಾರ್ಯಗಳಿಗೆ ಬಳಸುತ್ತಿದ್ದೇವೆ ಎಂದು ಎರಿಯಮ್ಮ ಅಭಿವೃದ್ಧಿ ಕಾರ್ಯಗಳ ಬಗ್ಗೆ ಹೇಳಿದ್ದಾರೆ.

ಆಯಾ ವಾರ್ಡುಗಳ ಶಾಲೆಗಳಿಗೆ ಆಯಾ ವಾರ್ಡಿನ ಕೌನ್ಸಿಲರ್ ಅಧ್ಯಕ್ಷರಾಗಿರುತ್ತಾರೆ. ಆ ಶಾಲೆಗಳ ಕುಂದು - ಕೊರತೆಯ ಬಗ್ಗೆ ಅವರು ಪರಿಶೀಲಿಸಿ ಮಾಹಿತಿ ನೀಡುತ್ತಾರೆ. ಹೆಚ್ಚಾಗಿ ಶಾಲೆಯ ಅಭಿವೃದ್ಧಿ ನಮ್ಮ ವ್ಯಾಪ್ತಿಗೆ ಬರುವುದಿಲ್ಲ. ಆದರೂ ಕೆಲವಾರು ಕೆಲಸಗಳನ್ನು ಮಾಡುತ್ತೇವೆ. ಶಾಲೆಯ ಬಿಸಿಯೂಟ ಯೋಜನೆಗೆ ಕೌನ್ಸಿಲರೇ ಅಧ್ಯಕ್ಷರಾಗಿದ್ದಾರೆ. ಅದರ ಬಗ್ಗೆ ಅವರು ಗಮನ ನೀಡುತ್ತಾರೆ. ಹಿಂದುಳಿದ ವರ್ಗದವರಿಗೆ ನಗರಸಭೆಯಿಂದ ಸಹಾಯ ಮಾಡಲಾಗುತ್ತಿದೆ. ಇದನ್ನು ಎಲ್ಲ ವಿದ್ಯಾರ್ಥಿಗಳು ಪಡೆಯುವಂತೆ ಮುಂದಿನ ದಿನದಲ್ಲಿ ಕಾರ್ಯ ಪ್ರವೃತ್ತರಾಗುತ್ತೇವೆ.

ಸರ್ಕಾರಿ ಆಸ್ಪತ್ರೆಗಳ ಬಗ್ಗೆಯೂ ನಾವು ಗಮನ ಹರಿಸುತ್ತಿದ್ದೇವೆ. ಅಲ್ಲದೇ ಅಂಗವಿಕಲ ಮಕ್ಕಳಿಗೆ ಪ್ರತಿ ಆಗಸ್ಟ್ ಹದಿನೈದರಂದು ತ್ರಿಚಕ್ರ ವಾಹನ ಮತ್ತು ಸಹಾಯಧನವನ್ನು ನೀಡುತ್ತಿದ್ದೇವೆ. ಅಲ್ಲದೇ ಕಿಡ್ನಿ ಕಳೆದವರಿಗೆ, ಕ್ಯಾನ್ಸರ್, ಕ್ಷಯರೋಗಿಗಳಿಗೆ ಅದರಲ್ಲಿಯೂ ಎಸ್.ಸಿ - ಎಸ್.ಟಿ.ಯವರಿಗೆ ೧೦ ರಿಂದ ೨೦ ಸಾವಿರ ರೂಪಾಯಿಗಳವರೆಗೆ ಸಹಾಯಧನ ನೀಡುತ್ತೇವೆ. ಅಲ್ಲದೇ ಆಸ್ಪತ್ರೆಗೆ ಭೇಟಿ ನೀಡಿ ಅವರಿಗೆ ಹಾಲು - ಹಣ್ಣು ನೀಡಿ ಆರೋಗ್ಯ ವಿಚಾರಿಸುತ್ತೇವೆ ಎಂದು ಎರಿಯಮ್ಮ ಅವರು ಹೇಳಿದ್ದಾರೆ.

ಹೀಗೆ ಎರಿಯಮ್ಮ ಅವರು ಮಹಿಳೆಯಾಗಿ ಹೊಸಪೇಟೆ ನಗರದ ಅಧ್ಯಕ್ಷೆ ಪದವಿಯನ್ನು ನಿರ್ವಹಿಸುತ್ತಿದ್ದಾರೆ. ರಾಜಕೀಯದ ಬಗ್ಗೆ ತುಂಬಾ ಆಸಕ್ತಿಯನ್ನು ತೋರಿಸುತ್ತಿದ್ದಾರೆ. ಮುಂದೆಯೂ ರಾಜಕೀಯದಲ್ಲಿದ್ದು ಉತ್ತಮ ಸೇವೆಯನ್ನು ಮಾಡಬೇಕೆಂಬ ಆಸಕ್ತಿಯನ್ನು ಹೊಂದಿದ್ದಾರೆ. ಆದರೆ ಇವರಿಗೆ ರಾಜಕೀಯ ರಂಗದ ಅನುಭವದ ಕೊರತೆಯು ಎದ್ದು ಕಾಣುತ್ತದೆ. ಯಾವುದೇ ಕಾರ್ಯಕ್ರಮಗಳ ವಿವರಕ್ಕೆ ಬೇರೆಯವರನ್ನು ಅವಲಂಬಿಸಿ ಮಾಹಿತಿಯನ್ನು ಪಡೆಯುತ್ತಾರೆ. ಅಲ್ಲದೇ ಸರಕಾರದಿಂದ ಬರುವ ಯಾವುದೇ ಯೋಜನೆಗಳ ಬಗ್ಗೆ ಅಷ್ಟಾಗಿ ಅನುಭವವಿಲ್ಲದ ಇವರು ನಗರಸಭೆಯ ಕೆಲವು ಪುರುಷ ಕೌನ್ಸಿಲರುಗಳ ಸಲಹೆಯನ್ನೇ ನಂಬುತ್ತಾರೆ. ಯಾವುದೇ ಕೆಲಸ ಕಾರ್ಯಗಳಿಗೆ ಪುರುಷಶಾಹಿಯನ್ನೇ ಅವಲಂಬಿಸಿರುವುದರಿಂದ ಇವರ ಸ್ವನಿರ್ಣಯಕ್ಕೆ ಕುಂದು ಬರುತ್ತಿರುವುದು ಎದ್ದು ಕಾಣುತ್ತದೆ. ಈ ಕಾರಣದಿಂದ ಮಹಿಳಾ ರಾಜಕಾರಣಿಗಳಿಗೆ ಅದರಲ್ಲಿಯೂ ಕೊಂಚ ಶಿಕ್ಷಣ ಪಡೆದ ಇಲ್ಲವೇ ಅನಕ್ಷರಸ್ಥರಿಗೆ ರಾಜಕೀಯ ಕ್ಷೇತ್ರದ ತರಬೇತಿಯು ಅತ್ಯಗತ್ಯವಾಗಿ ಬೇಕಾಗುತ್ತದೆ. ಹೊಸಪೇಟೆ ನಗರದ ಸಮಗ್ರ ಸಮಸ್ಯೆಗಳನ್ನು ಕ್ಷೇತ್ರಕ್ಕೆ ಹೋಗಿ ವೀಕ್ಷಿಸುವಲ್ಲಿಯೂ ಇವರು ವಿಫಲರಾಗಿರುವುದು ಅವರು ನೀಡಿದ ಅಭಿಪ್ರಾಯಗಳಿಂದಲೇ ತಿಳಿಯುತ್ತದೆ. ಕೆಲವು ಸದಸ್ಯ ಮಹಿಳೆಯರಿಗೂ ಅನುಭವದ ಕೊರತೆಯಿರುವುದರಿಂದ ನಿರ್ಣಯಗಳ ಚರ್ಚೆಯಲ್ಲಿ ಇವರು ವ್ಯಾಪಕವಾದ ವಿವರ ತಿಳಿಯಲಾರರು. ಈ ಕೊರತೆಯನ್ನು ಬಲಿಷ್ಠ ಪುರುಷ ರಾಜಕಾರಣಿಗಳು ದುರ್ಬಳಕೆ ಮಾಡಿಕೊಳ್ಳುವ ಅಪಾಯಗಳಿವೆ.



## ಹೊಸಪೇಟೆ ನಗರಸಭೆಯ ಮಹಿಳಾ ಸದಸ್ಯೆಯ ವಿವರ

| | | | | | |
|---|---|---|---|---|---|
| ಹೆಸರು | : | ಖಾಸಿಂಬಿ | ಗ್ರಾಮ | : | ಚಿತ್ತವಾಡ್ಗಿ, ೧೨ನೇ ವಾರ್ಡ್ |
| ವಯಸ್ಸು | : | ೫೫ | ತಾಲೂಕು | : | ಹೊಸಪೇಟೆ |
| ಜಾತಿ | : | ಮುಸ್ಲಿಂ | ಜಿಲ್ಲೆ | : | ಬಳ್ಳಾರಿ |
| ಉದ್ಯೋಗ | : | ನಗರಸಭೆ ಸದಸ್ಯರು | | | |

ಶ್ರೀಮತಿ ಖಾಸಿಂಬಿಯವರು ಹೊಸಪೇಟೆ ನಗರದ ಚಿತ್ತವಾಡ್ಗಿಯ ೧೨ನೇ ವಾರ್ಡಿನ ನಗರಸಭಾ ಸದಸ್ಯರಾಗಿದ್ದಾರೆ. ಇವರು ತಮ್ಮ ವಾರ್ಡಿನ ಜನರ ಒತ್ತಾಯದ ಮೇರೆಗೆ ಪಕ್ಷೇತರ ಅಭ್ಯರ್ಥಿಯಾಗಿ ಆಯ್ಕೆಯಾಗಿದ್ದಾರೆ. ನಂತರ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಗೊಂಡು ನಗರಸಭೆಯ ಕಾರ್ಯಕರ್ತರಾಗಿದ್ದಾರೆ. ಮೊದಲಬಾರಿಗೆ ರಾಜಕೀಯ ರಂಗಕ್ಕೆ ಕಾಲಿರಿಸಿದ ಇವರ ಕುಟುಂಬಕ್ಕೆ ಯಾವುದೇ ರಾಜಕೀಯ ಹಿನ್ನೆಲೆಯಿಲ್ಲ. ಖಾಸಿಂಬಿ ಅನಕ್ಷರಸ್ಥ ಮಹಿಳೆ. ಆದರೂ ತನ್ನನ್ನು ನಗರಸಭೆಗೆ ಆಯ್ಕೆಮಾಡಿದ ಜನರ ಕುಂದು ಕೊರತೆಗಳನ್ನು ತಕ್ಕಮಟ್ಟಿಗೆ ಪರಿಹರಿಸಿ ಅವರೊಂದಿಗೆ ಸ್ಪಂದಿಸುತ್ತಿದ್ದಾರೆ. ಮುಖ್ಯವಾಗಿ ತಮ್ಮ ವಾರ್ಡಿಗೆ ಮಾಡಿದ ಕೆಲವು ಅನುಕೂಲಗಳು ಹೀಗಿವೆ.

೧. ಉರ್ದು ಭಾಷೆಯನ್ನು ಕಲಿಯುವ ಮಕ್ಕಳಿಗೆ ಈವರೆಗೆ ಮಸೀದಿಯೇ ಶಾಲೆಯಾಗಿತ್ತು. ಇದನ್ನರಿತ ಖಾಸಿಂಬಿ ಒಂದರಿಂದ ಏಳನೆಯ ತರಗತಿಯವರೆಗೆ ಉರ್ದು ಕಲಿಯುವ ಮಕ್ಕಳಿಗೆ ಪ್ರತ್ಯೇಕವಾಗಿ ನಾಲ್ಕು ಕೊಠಡಿಗಳನ್ನು ನಿರ್ಮಿಸಿಕೊಟ್ಟಿದ್ದಾರೆ.

೨. ತಮ್ಮ ಚಿತ್ತವಾಡ್ಗಿಯಲ್ಲಿ ಕುಡಿಯುವ ನೀರಿನ ಪೂರೈಕೆಯ ವ್ಯವಸ್ಥೆ, ರಸ್ತೆಗಳ ದುರಸ್ತಿ, ಬೀದಿ ದೀಪಗಳ ವ್ಯವಸ್ಥೆ, ಬೀದಿಗಳಲ್ಲಿ ಬಂಡೆಯನ್ನು ಹಾಸುವುದು, ಮುಖ್ಯ ಬೀದಿಗಳ ಸ್ವಚ್ಛತಾ ಕಾರ್ಯಕ್ರಮ ಮುಂತಾದ ಮೂಲಭೂತ ಸೌಕರ್ಯಗಳನ್ನು ಮಾಡಿಸಿದ್ದಾರೆ.

೩. ಶಾಲೆಗಳಿಗೆ ಭೇಟಿ ನೀಡಿ ಆಗಾಗ ಬಿಸಿಯೂಟದ ಯೋಜನೆಯ ಕುರಿತು ಪರಿಶೀಲನೆ ನಡೆಸುತ್ತಾರೆ. ಅಲ್ಲದೇ ಭವಿಷ್ಯದಲ್ಲಿ ತನ್ನ ಅಧಿಕಾರದ ಅವಧಿಯೊಳಗಡೆ ವಿಧವೆಯರಿಗೆ, ಅಂಗವಿಕಲರಿಗೆ ಮಾಸಾಶನ ಕೊಡಿಸುವುದು, ಮಹಿಳೆಯರಿಗೆ ಶೌಚಾಲಯವನ್ನು ನಿರ್ಮಿಸಿಕೊಡುವುದು, ನಿರುದ್ಯೋಗ ಮಹಿಳೆಯರಿಗೆ ಅವರ ಸಾಮರ್ಥ್ಯಕ್ಕೆ ತಕ್ಕ ಹಾಗೆ ಹೊಲಿಗೆಯಂತ್ರ ಕೊಡಿಸುವುದು, ಸ್ವಯಂ ಉದ್ಯೋಗಕ್ಕೆ ಸಾಲದ ಯೋಜನೆ ಕೊಡಿಸುವುದು, ಪರಿಸರ ಮಾಲಿನ್ಯದ ಬಗ್ಗೆ ಮಕ್ಕಳು, ಮಹಿಳೆಯರಿಗೆ ಅರಿವು ನೀಡಿ ಮನೆ ಮುಂದೆ, ರಸ್ತೆ ಬದಿಯಲ್ಲಿ ಮರನೆಡಲು ಮಾಹಿತಿ ನೀಡುವುದು ಮುಂತಾದ ಕಾರ್ಯಗಳ ಬಗೆಗೆ ಗಂಭೀರವಾಗಿ ಯೋಚಿಸಿ ನಗರಸಭೆಯ ಎಲ್ಲ ಅಧಿಕಾರಿಗಳೊಂದಿಗೆ ಚರ್ಚಿಸಿದ್ದಾರೆ. ಈ ಬಗ್ಗೆ ತೀವ್ರವಾಗಿ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸಿದ್ದಾರೆ. ತನ್ನ ಅನಕ್ಷರತೆಯನ್ನು ಕೊರಗಿನಿಂದ ನೆನೆಯುತ್ತಲೇ ಅಭಿವೃದ್ಧಿ ಕಾರ್ಯಗಳ ಕಡೆಗೆ ಗಮನಹರಿಸಿದ್ದಾರೆ. ಅಕ್ಷರಸ್ಥಳಾಗಿದ್ದರೆ ಮತ್ತಷ್ಟು ವ್ಯಾಪಕವಾದ ರಾಜಕಾರಣದ ಅನುಭವದಿಂದ ಇನ್ನಷ್ಟು ಯೋಜನೆಗಳನ್ನು ವಾರ್ಡಿಗೆ ತರಬಹುದಿತ್ತು ಎಂದು ಖಾಸಿಂಬಿ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇವರೂ ತಮ್ಮ ಕೆಲವು ರಾಜಕೀಯ ಸಲಹೆಗೆ ಪುರುಷರನ್ನೇ ಅವಲಂಬಿಸಿದ್ದಾಳೆ.

◆◆◆

## ರಾಮಸಾಗರ ಗ್ರಾಮಪಂಚಾಯತಿ ಮಹಿಳಾ ಅಧ್ಯಕ್ಷರ ವಿವರ

| | | | |
|---|---|---|---|
| ಹೆಸರು | : ಕೆ.ರೇಣುಕ | ಗ್ರಾಮ | : ರಾಮಸಾಗರ, ವಾರ್ಡ್ ೫ |
| ವಯಸ್ಸು | : ೨೫ | ತಾಲೂಕು | : ಹೊಸಪೇಟೆ |
| ಜಾತಿ | : ಕುರುಬರು | ಜಿಲ್ಲೆ | : ಬಳ್ಳಾರಿ |
| ಉದ್ಯೋಗ | : ಕೃಷಿಕೂಲಿ (ಗ್ರಾಮಪಂಚಾಯತಿ ಅಧ್ಯಕ್ಷರು) ೨೯.೦೧.೨೦೦೩ | | |

ಶ್ರೀಮತಿ ಕೆ.ರೇಣುಕಾ ಅವರು ಹೊಸಪೇಟೆ ತಾಲೂಕು ರಾಮಸಾಗರದ ಗ್ರಾಮಪಂಚಾಯತಿಯ ಸದಸ್ಯರಾಗಿದ್ದರು. ಮೊದಲಬಾರಿಗೆ ರಾಜಕೀಯ ರಂಗಕ್ಕೆ ಪ್ರವೇಶಿಸಿದ ಇವರು ದಿನಾಂಕ ೨೯.೦೧.೨೦೦೩ರಂದು ಗ್ರಾಮಪಂಚಾಯತಿಯ ಅಧ್ಯಕ್ಷರಾಗಿ ಆಯ್ಕೆಯಾದರು. ಐದನೆಯ ತರಗತಿಯವರೆಗೆ ಓದಿ ಪ್ರಾಥಮಿಕ ಶಿಕ್ಷಣ ಪಡೆದ ರೇಣುಕಾ ಅವರಿಗೆ ಗ್ರಾಮಪಂಚಾಯತಿ ವ್ಯಾಪ್ತಿಯ ಕೆಲಸಗಳಲ್ಲಿ ತುಂಬಾ ಆಸಕ್ತಿಯನ್ನು ಹೊಂದಿದ್ದಾರೆ. ಮೂಲಭೂತ ಸೌಕರ್ಯಗಳ ಕಡೆ ಮುಖ್ಯವಾಗಿ ಗಮನ ನೀಡಿದ್ದಾರೆ. ರಾಮಸಾಗರದಲ್ಲಿ ಈವರೆಗೆ ಇದ್ದ ಕುಡಿಯಲು ಯೋಗ್ಯವಲ್ಲದ ನೀರಿನ ಸಮಸ್ಯೆಯನ್ನು ಗಮನಿಸಿ, ತುಂಗಭದ್ರಾನದಿಯಿಂದ ನೀರು ಪೂರೈಸಲು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದಾರೆ. ಮನವಿಯನ್ನು ಗಮನಿಸಿ ಸರ್ಕಾರ ಈ ಗ್ರಾಮಕ್ಕೆ ಒಂದು ಕೋಟಿ ರೂಪಾಯಿ ಕುಡಿಯುವ ನೀರಿಗಾಗಿ ಅನುದಾನ ನೀಡಿದೆ. ಈ ಯೋಜನೆಯು ಸಧ್ಯದಲ್ಲಿಯೇ ಕಾರ್ಯರೂಪಕ್ಕೆ ಬರಲಿದೆ.

ಮುಖ್ಯವಾಗಿ ಗ್ರಾಮದಲ್ಲಿನ ಶಾಲೆಗಳಿಗೆ ಗ್ರಾಮಪಂಚಾಯತಿಯ ಅಧ್ಯಕ್ಷ, ಸದಸ್ಯರು ಆಗಾಗ ಭೇಟಿನೀಡಿ ಅಲ್ಲಿನ ಪ್ರಗತಿಯನ್ನು ಪರಿಶೀಲಿಸುತ್ತಿದ್ದಾರೆ. ಆ ಮೂಲಕ ಗ್ರಾಮದ ಶೈಕ್ಷಣಿಕ ಗುಣಮಟ್ಟದ ಬಗೆಗೂ ಅತ್ಯಂತ ಕಾಳಜಿಯನ್ನು ಹೊಂದಿದ್ದಾರೆ. ಅಲ್ಲದೇ ಪ್ರಾಥಮಿಕ ಆರೋಗ್ಯದ ಕಡೆಗೆ ಗಮನಹರಿಸಿ, ವೈದ್ಯಕೀಯ ಸೌಲಭ್ಯಗಳನ್ನು ಜನತೆಗೆ ಸರಿಯಾದ ರೀತಿಯಲ್ಲಿ ಪೂರೈಸುವಲ್ಲಿ ಯಶಸ್ವಿಯಾಗಿದ್ದಾರೆ.

ರಾಮಸಾಗರ ಗ್ರಾಮಪಂಚಾಯಿತಿಯಲ್ಲಿ ಒಟ್ಟು ಹದಿಮೂರು ಜನರಿದ್ದಾರೆ. ಅದರಲ್ಲಿ ಅಧ್ಯಕ್ಷರು ಸೇರಿದಂತೆ ಒಟ್ಟು ಆರುಮಂದಿ ಮಹಿಳೆಯರಿದ್ದಾರೆಂಬುದನ್ನು ಗಮನಿಸಿದರೆ ಗ್ರಾಮರಾಜಕಾರಣದಲ್ಲಿ ಮಹಿಳಾ ಮೀಸಲಾತಿಯನ್ನು ಗುರುತಿಸಬಹುದು. ಮಹಿಳೆಯು ರಾಜಕೀಯ ಪ್ರವೇಶಿಸಿದರೂ ಕೌಟುಂಬಿಕ ಜವಾಬ್ದಾರಿಯನ್ನೂ ನಿರ್ವಹಿಸಬೇಕಿದೆ. ಈ ದೃಷ್ಟಿಯಿಂದ ಮಹಿಳೆಗೆ ಮತ್ತಷ್ಟು ರಾಜಕೀಯ ಪ್ರಾತಿನಿಧ್ಯವನ್ನು ನೀಡುವ ಮೂಲಕ ಅವಳು ಸಾಮಾಜಿಕ, ರಾಜಕೀಯ ರಂಗದಲ್ಲಿ ಅತ್ಯಂತ ಪ್ರಬಲಳಾಗುವ ಅವಕಾಶವನ್ನು ಕಲ್ಪಿಸಬೇಕೆಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸುತ್ತಾರೆ. ಅಲ್ಲದೇ ಗ್ರಾಮಪಂಚಾಯತಿಯೊಂದಿಗೆ ಸರ್ಕಾರಿ ಅಧಿಕಾರಿಗಳು ಸರಿಯಾಗಿ ಸಹಕರಿಸುತ್ತಿಲ್ಲ. ಸರ್ಕಾರದ ವಿವಿಧ ಯೋಜನೆಗಳು ಮತ್ತು ಅವುಗಳ ಕಾರ್ಯರೂಪದ ಬಗೆಗೆ ಸರಿಯಾದ ಮಾಹಿತಿಯನ್ನು ನೀಡುವುದಿಲ್ಲವೆಂದು ಅಭಿಪ್ರಾಯ ನೀಡುತ್ತಾರೆ.

ಅದೇನೇ ಇದ್ದರೂ ಮಹಿಳೆಯು ಗ್ರಾಮ ರಾಜಕಾರಣದಲ್ಲಿ ಸ್ಥಿರವಾಗಿ ನಿಂತು ಮಹತ್ವದ ಕೆಲಸಗಳನ್ನು ನಿರ್ವಹಿಸುವಲ್ಲಿ ಪುರುಷಶಾಹಿಯ ಸಹಕಾರ ಹಾಗೂ ಸರ್ಕಾರದ ತರಬೇತಿ, ಸರ್ಕಾರಿ ಅಧಿಕಾರಿಗಳ ಸ್ವಾರ್ಥರಹಿತ ಕಾರ್ಯ ನಿರ್ವಹಣೆ ಅಗತ್ಯವೆಂದು ತೋರುತ್ತದೆ.



## ರಾಮಸಾಗರ ಗ್ರಾಮಪಂಚಾಯತಿ ಸದಸ್ಯರು

| | | | |
|---|---|---|---|
| ಹೆಸರು | : ಸುಜಾತ ಹೆಚ್.ಎಂ. | ಗ್ರಾಮ | : ರಾಮಸಾಗರ |
| ವಯಸ್ಸು | : ೩೫ | ತಾಲೂಕು | : ಹೊಸಪೇಟೆ |
| ಜಾತಿ | : ಲಿಂಗಾಯತರು | ಜಿಲ್ಲೆ | : ಬಳ್ಳಾರಿ |
| ಉದ್ಯೋಗ | : ಗೃಹಿಣಿ (ಗ್ರಾಮಪಂಚಾಯತಿ ಸದಸ್ಯೆ) | | |

ಶ್ರೀಮತಿ ಸುಜಾತ ಅವರು ರಾಮಸಾಗರ (ಹೊಸಪೇಟೆ ತಾಲೂಕು) ಗ್ರಾಮದ ಪಂಚಾಯತಿ ಸದಸ್ಯರು. ಇವರು ಪ್ರೌಢಶಿಕ್ಷಣವನ್ನು (೧೦ನೇ ತರಗತಿ) ಪಡೆದ ಶಿಕ್ಷಿತ ಮಹಿಳೆಯಾಗಿದ್ದಾರೆ. ಲಿಂಗಾಯತ ಸಮುದಾಯಕ್ಕೆ ಸೇರಿದ ಇವರು ಗ್ರಾಮದ ಜನತೆಯ ಒತ್ತಾಯದ ಮೇರೆಗೆ ಗ್ರಾಮಪಂಚಾಯಿತಿ ಸದಸ್ಯೆಯಾಗಿದ್ದಾರೆ. ಶಿಕ್ಷಿತ ಮಹಿಳೆಯಾಗಿರುವುದರಿಂದ ರಾಜಕಾರಣದ ಬಗೆಗೆ ಅತ್ಯಂತ ಆಸಕ್ತಿ ಹಾಗೂ ಆ ಕುರಿತು ತಿಳುವಳಿಕೆಯನ್ನು ಹೊಂದಿದ್ದಾರೆ. ಈ ಕಾರಣದಿಂದ ನೇರ ಹಾಗೂ ನಿಷ್ಠುರವಾಗಿ ಮಾತನಾಡುತ್ತಾರೆ. ಅಲ್ಲದೇ ಗ್ರಾಮಪಂಚಾಯತಿಯ ಕೆಲವು ಕಾರ್ಯಗಳಲ್ಲಿ, ನಿರ್ಣಯಗಳಲ್ಲಿ ಸ್ವನಿರ್ಣಯವನ್ನು ವ್ಯಕ್ತಪಡಿಸುತ್ತಾರೆ. ಇತರೆ ಸದಸ್ಯರಂತೆ ಇವರು ತಮ್ಮ ರಾಜಕೀಯ ಅಧಿಕಾರದಲ್ಲಿ ಪುರುಷರನ್ನು ಅಥವಾ ತಮ್ಮ ಸಂಬಂಧಿಕರ ಸಹಕಾರವನ್ನು ಪಡೆಯುವುದಿಲ್ಲ. ಗ್ರಾಮದ ಹಲವು ಸಮಸ್ಯೆಗಳನ್ನು ಕಂಡುಕೊಂಡು ಸಾಧ್ಯವಾದಷ್ಟು ಸ್ಥಳದಲ್ಲಿಯೇ ಪರಿಹರಿಸಿಕೊಳ್ಳುವ ಪ್ರತಿಭೆಯನ್ನು ಹೊಂದಿದ್ದಾರೆ. ಈ ಎಲ್ಲ ನಿರ್ಣಯಗಳ ಬಗ್ಗೆ ಸುಜಾತ ಅವರು ತಮ್ಮ ಅಭಿಪ್ರಾಯವನ್ನು ಈ ಕೆಳಗಿನಂತೆ ವ್ಯಕ್ತಪಡಿಸಿದ್ದಾರೆ. "ನಾನು ಮನೆಯಲ್ಲಿ ಕುಟುಂಬದ ಒಂದು ಭಾಗ ಮಾತ್ರ. ಆದರೆ ಗ್ರಾಮಪಂಚಾಯತಿಯಲ್ಲಿ ನಾನು ಗ್ರಾಮಗಳ ಜನತೆಯ ಪ್ರತಿನಿಧಿ. ಆದ್ದರಿಂದ ಪಂಚಾಯತಿಯ ಯಾವುದೇ ವಿಷಯಗಳಲ್ಲಿ ನನ್ನ ಗಂಡ ಪ್ರವೇಶಿಸುವುದಿಲ್ಲ. ಪ್ರವೇಶಿಸುವುದು ನನಗೂ ಇಷ್ಟವಿಲ್ಲ. ಗಂಡ ಅಥವಾ ಬೇರೆಯವರ ಅಭಿಪ್ರಾಯದೊಂದಿಗೆ ಗ್ರಾಮದ ಬಗ್ಗೆ ನಿರ್ಣಯ ತೆಗೆದುಕೊಳ್ಳುವುದು ಒಳಿತಲ್ಲ. ಹಲವಾರು ಸಮಸ್ಯೆಗಳು ನಮ್ಮ ಕಣ್ಣೆದುರಿಗೇ ಇವೆ. ನಮಗೆ ಬೇಕಾಗಿರುವುದೇನೆಂಬ ಬಗ್ಗೆ ಅಧ್ಯಕ್ಷರೊಂದಿಗೆ ಚರ್ಚಿಸುತ್ತೇವೆ. ಪರರನ್ನು ಅವಲಂಬಿಸಿ ರಾಜಕಾರಣ ಮಾಡಬಾರದು, ಅನಕ್ಷರಸ್ಥರಿಗೆ ರಾಜಕೀಯ ನಡೆಸಲಾಗುವುದಿಲ್ಲ. ಜ್ಞಾನ ಇಲ್ಲದವರಿಗೆ ಮೀಸಲಾತಿಯ ಮೂಲಕ ರಾಜಕೀಯ ಅಧಿಕಾರ ನೀಡುವಾಗ ಎಚ್ಚರವಹಿಸಬೇಕಾದ ಅಗತ್ಯ ಇದೆ. ಮೀಸಲಾತಿಬೇಕು. ಆದರೆ ಯೋಗ್ಯರನ್ನು ಆಯ್ಕೆ ಮಾಡಬೇಕು. ಇದರಿಂದ ನೇರವಾಗಿ ನಾವೇ ಅಧಿಕಾರ ನಿರ್ವಹಿಸಬಹುದು. ಪಂಚಾಯತಿಯ ಕಾರ್ಯದರ್ಶಿಗಳು ನಮ್ಮೊಂದಿಗೆ ಸರಿಯಾಗಿ ಸಹಕರಿಸುವುದಿಲ್ಲ. ಸರ್ಕಾರದಿಂದ ಬರುವ ಹಣಕಾಸು, JRY, PMRY, ಇನ್ನಿತರ ಯೋಜನೆಗಳ ಬಗ್ಗೆ ಮಾಹಿತಿ ನೀಡುವುದಿಲ್ಲ. ಅವುಗಳ ಉಪಯೋಗ, ಬಳಕೆಯ ಕುರಿತು ಏನೂ ಹೇಳುವುದಿಲ್ಲ. ಜೊತೆಗೆ ಪಂಚಾಯತಿಯ ಸದಸ್ಯರೂ ಅಧಿಕಾರಿಗಳೊಂದಿಗೆ ಸರಿಯಾಗಿ ಸಹಕರಿಸುವುದಿಲ್ಲ. ಸಹಕಾರದಿಂದ ಎಲ್ಲರೂ ಒಟ್ಟುಗೂಡಿದರೆ ಗ್ರಾಮವನ್ನು ಅಭಿವೃದ್ಧಿ ಮಾಡಬಹುದು."

ಸುಜಾತ ಅವರು ರಾಮಸಾಗರದ ಅಂಗನವಾಡಿಯ ಸಮಸ್ಯೆಗಳನ್ನು ನಿವಾರಿಸುವ ಜವಾಬ್ದಾರಿಯನ್ನು ಹೊತ್ತಿದ್ದಾರೆ. ಇವರ ಕಾರ್ಯ ದಕ್ಷತೆಯಿಂದಾಗಿ ಊರಿನ ನಾಲ್ಕು ಅಂಗನವಾಡಿಗಳು ಉತ್ತಮ ರೀತಿಯಲ್ಲಿವೆ. ಅಲ್ಲದೇ ಗ್ರಾಮೀಣ ಮಹಿಳೆಯರಿಗೆ ಐದು ಸುಲಭ ಶೌಚಾಲಯದ ಕಟ್ಟಡಗಳನ್ನು ನಿರ್ಮಿಸಲಾಗಿದೆ. ಒಟ್ಟು ಗ್ರಾಮದಲ್ಲಿ ಮಹಿಳಾ ಅಭ್ಯರ್ಥಿಗಳು ಉತ್ತಮ ಕೆಲಸವನ್ನು ಮಾಡುತ್ತಿದ್ದಾರೆಂಬ ಅಭಿಪ್ರಾಯವನ್ನು ಗ್ರಾಮಸ್ಥರು ವ್ಯಕ್ತಪಡಿಸುತ್ತಾರೆ. ಆಯಾ ವಾರ್ಡ್‌ಗಳಲ್ಲಿ ಅಭ್ಯರ್ಥಿಗಳು ಉತ್ತಮ ಕೆಲಸವನ್ನು ಮಾಡುತ್ತಿದ್ದಾರೆ.

ಒಟ್ಟಾರೆಯಾಗಿ ಸುಜಾತ ಅವರಂತಹ ಸ್ವಾವಲಂಬಿಯಾಗಿ ಅಧಿಕಾರ ನಿರ್ವಹಿಸುವ ಮಹಿಳೆಯರ ಅಗತ್ಯ ಗ್ರಾಮಪಂಚಾಯತಿಗಳಿಗೆ ಅತ್ಯಂತ ಅಗತ್ಯವಿದೆ. ಅಲ್ಲದೇ ಅಕ್ಷರಸ್ಥ ಮಹಿಳೆಯಿಂದ ಆಗಬಹುದಾದ ಕೆಲಸಗಳನ್ನು ಈ ಮುಖೇನ ಗಮನಿಸಬಹುದು.



### ಸೀತರಾಂ ತಾಂಡ ಗ್ರಾಮಪಂಚಾಯತಿ ಅಧ್ಯಕ್ಷರು

| | | | | | |
|---|---|---|---|---|---|
| ಹೆಸರು | : | ಹೇಮ್ಲಿ ಬಾಯಿ | ಗ್ರಾಮ | : | ಸೀತಾರಾಂ ತಾಂಡ |
| ವಯಸ್ಸು | : | ೬೫ | ತಾಲೂಕು | : | ಹೊಸಪೇಟೆ |
| ಜಾತಿ | : | ಲಂಬಾಣಿ (ಎಸ್.ಸಿ) | ಜಿಲ್ಲೆ | : | ಬಳ್ಳಾರಿ |
| ಉದ್ಯೋಗ | : | ವ್ಯವಸಾಯ | | | |

ಶ್ರೀಮತಿ ಹೇಮ್ಲಿಬಾಯಿಯವರು ಹೊಸಪೇಟೆ ತಾಲೂಕಿನ ಸೀತಾರಾಮ ತಾಂಡದ ಗ್ರಾಮಪಂಚಾಯತಿಯ ಅಧ್ಯಕ್ಷರಾಗಿದ್ದಾರೆ. ಇವರು ಲಂಬಾಣಿ ಸಮುದಾಯದ ಮಹಿಳೆಯಾಗಿದ್ದು, ಐದು ವರ್ಷಗಳ ಕಾಲ ತಮ್ಮ ಅಧಿಕಾರದ ಅವಧಿಯನ್ನು ನಿರ್ವಹಿಸಿದ್ದಾರೆ. ಪ್ರತಿ ಹದಿನೆಂಟು ತಿಂಗಳಿಗೊಮ್ಮೆ ಅಧ್ಯಕ್ಷರನ್ನು ಪುನಾರಾಯ್ಕೆ ಮಾಡಬೇಕೆಂಬ ಅಧಿಕಾರದ ವಿಕೇಂದ್ರಿಕರಣದ ವ್ಯಾಪಕತೆಯನ್ನು ಬದಿಗೊತ್ತಿ, ಈ ಪಂಚಾಯತಿಯ ಸದಸ್ಯರು ಒಮ್ಮತದಿಂದ ಇವರನ್ನೇ ಮುಂದುವರೆಸಿದ್ದಾರೆ. ಅನಕ್ಷರಸ್ಥೆಯಾಗಿದ್ದರೂ ಉತ್ತಮ ಸಮಾಜ ಸೇವಕಿಯಾಗಿರುವ ಹೇಮ್ಲಿಬಾಯಿ ಐದು ವರ್ಷಗಳ ಅಧಿಕಾರಾವಧಿಯಲ್ಲಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಎಲ್ಲ ಗ್ರಾಮಗಳಲ್ಲಿ ಚರಂಡಿವ್ಯವಸ್ಥೆ, ಅಂಗನವಾಡಿ ಕಟ್ಟಡಗಳು, ಬೀದಿಗಳಲ್ಲಿ ಬಂಡೆಗಳನ್ನು ಹಾಕಿಸುವುದು, ಕುಡಿಯುವ ನೀರಿನ ಪೂರೈಕೆ ಮುಂತಾದ ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಅಲ್ಲದೇ ಬಾಡಿಗೆ ಮನೆಯಲ್ಲಿ ನಡೆಯುತ್ತಿದ್ದ ಗ್ರಾಮಪಂಚಾಯತಿಯ ಕಾರ್ಯಾಲಯಕ್ಕೆ ಹೊಸದಾದ ಕಟ್ಟಡವನ್ನು ನಿರ್ಮಿಸಿದ್ದಾರೆ. ಅಲ್ಲದೇ ಕೊಠಡಿಗಳ ಕೊರತೆಯಿರುವ ಸೀತಾರಾಂ ತಾಂಡದ ಶಾಲೆಗೆ ಪ್ರತ್ಯೇಕವಾದ ಎರಡು ಕೊಠಡಿಗಳನ್ನು ಸೇರಿಸಿದ್ದಾರೆ. ಹೇಮ್ಲಿಬಾಯಿಯವರ ಗ್ರಾಮ ಸೀತಾರಾಂ ತಾಂಡವಾಗಿದ್ದರೂ, ಉಳಿದ ಗ್ರಾಮಗಳಿಗೂ ಸಮಾನವಾದ ಅಧಿಕಾರ ಧೋರಣೆಯಿಂದ ಕಂಡಿದ್ದಾರೆ. ನಲ್ಲಾಪುರ ಎಂಬ ಗ್ರಾಮವನ್ನು ಸ್ವಚ್ಛತಾ ಗ್ರಾಮವನ್ನಾಗಿ ಮಾಡಿರುವುದೇ ಇದಕ್ಕೆ ಉತ್ತಮ ನಿದರ್ಶನವಾಗಿದೆ.

ಅರವತ್ತೈದು ವರ್ಷದ ಹೇಮ್ಲಿಬಾಯಿಯವರು ಅನಕ್ಷರಸ್ಥೆ. ಈವರೆಗೆ ಕೇವಲ ಸಹಿ ಮಾಡುವುದನ್ನು ಕಲಿತಿದ್ದಾರೆ. ಗ್ರಾಮಪಂಚಾಯತಿಯ ಎಲ್ಲ ಕೆಲಸಗಳನ್ನು ತನ್ನ ಮಗನ ಸಹಾಯದಿಂದಲೇ ನಿರ್ವಹಿಸುತ್ತಾರೆ. ಸರ್ಕಾರದ ರಾಜಕೀಯ ಮೀಸಲಾತಿಯ ಅನ್ವಯ ಇವರಿಗೆ ಅಧಿಕಾರ ದೊರೆತಿದೆ. ಆದರೆ ಅಧಿಕಾರದ ಸೂತ್ರ ಮತ್ತು ಅದರ ಹಿಡಿತ ಪುರುಷಶಾಹಿಯಲ್ಲಿದೆ. ಇದು ಸಮಕಾಲೀನ ಗ್ರಾಮೀಣ ಭಾರತದ ಮಹಿಳಾ ರಾಜಕಾರಣದ ಅದರಲ್ಲಿಯೂ ಮೀಸಲಾತಿಯ ಮುಖೇನ ನಡೆಯುತ್ತಿರುವ ಅಧಿಕಾರ ವಿಕೇಂದ್ರೀಕರಣದ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ.

ಕೆಲವು ಕಡೆ ಮಹಿಳೆಯರು ಐದರಿಂದ ಹತ್ತನೆಯ ತರಗತಿಯವರೆಗೆ ಓದಿ ಪ್ರೌಢಶಿಕ್ಷಣ ಪಡೆದು ಗ್ರಾಮಪಂಚಾಯತಿಯ ಸದಸ್ಯರಾಗಿದ್ದಾರೆ. ಇವರಿಗೆ ಅಧ್ಯಕ್ಷಸ್ಥಾನ ದೊರೆತಿರುವುದು ವಿರಳ. ಅನಕ್ಷರಸ್ಥ ಗ್ರಾಮ ಸಮಾಜದ ರಾಜಕೀಯ ವ್ಯವಸ್ಥೆಗೆ ಅನಕ್ಷರಸ್ಥ ಮಹಿಳೆಯರನ್ನು ನಿಯಮಿಸಿ ಸರ್ಕಾರ ಕಾಳಜಿವಹಿಸ ದಿರುವುದೂ ಕಂಡುಬರುತ್ತದೆ. ಈ ಬಗ್ಗೆ ಗಮನಹರಿಸಿ ಅವರಿಗೆ ಪಂಚಾಯತಿ ಮಟ್ಟದ ಕೆಲವಾರು ಪ್ರಾಥಮಿಕ ತಿಳುವಳಿಕೆಯನ್ನು ನೀಡುವ ಅಗತ್ಯವಿದೆ. ತರಬೇತಿ ರಹಿತ ಮಹಿಳಾ ರಾಜಕೀಯದಿಂದ ನಮ್ಮ ಗ್ರಾಮ ಸಮಾಜದ ಪುರುಷ ವ್ಯವಸ್ಥೆಯ ಅಧಿಕಾರದ ದುರುಪಯೋಗ ಪಡಿಸಿಕೊಳ್ಳುತ್ತಿರುವುದನ್ನು ಎಚ್ಚರಿಕೆಯಿಂದ ಗಮನಿಸಬೇಕಾಗಿದೆ. ಮಹಿಳಾ ಮೀಸಲಾತಿಯನ್ನು ರಾಜಕೀಯಕ್ಕೆ ನೀಡುವಾಗ ಅವರಿಗೆ ಕನಿಷ್ಟ ಶಿಕ್ಷಣ ಹಾಗೂ ತರಬೇತಿಯನ್ನು ನೀಡುವ ಜರೂರು ಮಹತ್ವದ್ದಾಗಿದೆ. ಆ ಮೂಲಕ ಅವರಿಗೆ ಅಧಿಕಾರದ ಮಹತ್ವ, ಸ್ವಾರ್ಥರಹಿತ ರಾಜಕಾರಣದ ತಿಳುವಳಿಕೆ ನೀಡಬಹುದು. ಅಂತಹ ಪ್ರಯತ್ನಗಳು ಈಚೆಗೆ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಮೂಲಕ ನಡೆಯುತ್ತಿರುವುದು ಗಮನಾರ್ಹ ಸಂಗತಿ. ವಿಶ್ವವಿದ್ಯಾಲಯದ ಕುಲಪತಿಗಳು ಹಾಗೂ ಅಭಿವೃದ್ಧಿಯ ಅಧ್ಯಯನ ವಿಭಾಗದ ಅಧ್ಯಾಪಕರು ಈ ಬಗೆಯ ತಿಳುವಳಿಕೆಯನ್ನು ನೀಡುತ್ತಿದ್ದಾರೆ. ನಾಲ್ಕೈದು ಗ್ರಾಮಪಂಚಾಯತಿಗಳ ಅಧ್ಯಕ್ಷ, ಸದಸ್ಯರಿಗೆ ಗ್ರಾಮಪಂಚಾಯಿತಿಯ ಕಾರ್ಯ ಮತ್ತು ಮಹತ್ವದ ಕುರಿತು ಉತ್ತಮ ತರಬೇತಿ ನೀಡಿದ್ದಾರೆ. ಈ ಬಗೆಯ ಶಿಬಿರಗಳಿಂದ ಸಮಕಾಲೀನ ಗ್ರಾಮಪಂಚಾಯಿತಿಯ ಸಫಲತೆ ಹಾಗೂ ಮಹಿಳಾ ಅಧಿಕಾರಿಗಳ ಸೇವೆ ಸ್ವಾರ್ಥರಹಿತವಾಗಿ ನಡೆಯುತ್ತದೆನ್ನಬಹುದು. ಈ ರೀತಿಯ ಶಿಬಿರಗಳು ವ್ಯಾಪಕವಾಗಿ ನಡೆಯುವುದರಿಂದ ಒಟ್ಟು ಭಾರತದ ಗ್ರಾಮಪಂಚಾಯತಿಯು ಸಾಫಲ್ಯದಿಂದ ಕೂಡಿರಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಸರ್ಕಾರವು ತರಬೇತಿಯ ಬಗೆಗೆ ಗಮನಹರಿಸಬೇಕಿದೆ. ಇದರೊಂದಿಗೆ ವಿಶ್ವವಿದ್ಯಾಲಯಗಳಂತಹ ಸಂಸ್ಥೆಗಳು ಕಾರ್ಯ ಪ್ರವೃತ್ತವಾಗಬೇಕಿದೆ. ಇದರಿಂದ ಗ್ರಾಮಪಂಚಾಯತಿಯ ಅಧಿಕಾರ ವ್ಯಾಪ್ತಿಯಲ್ಲಿ ಮಹಿಳೆಯ ಮೀಸಲಾತಿಯ ಅತ್ಯಂತ ಸಮರ್ಥವಾಗಬಲ್ಲದು.

◆◆◆



## ಸೀತಾರಾಂ ತಾಂಡದ ಗ್ರಾಮಪಂಚಾಯತಿ ಸದಸ್ಯೆಯ ವಿವರ

| | | | |
|---|---|---|---|
| ಹೆಸರು | : ಮಾಂಗೀ ಬಾಯಿ | ಗ್ರಾಮ | : ಸೀತಾರಾಂ ತಾಂಡ, ವಾರ್ಡ್ ೧ |
| ವಯಸ್ಸು | : ೫೪ | ತಾಲೂಕು | : ಹೊಸಪೇಟೆ |
| ಜಾತಿ | : ಲಂಬಾಣಿ (ಎಸ್.ಸಿ) | ಜಿಲ್ಲೆ | : ಬಳ್ಳಾರಿ |
| ಉದ್ಯೋಗ | : ಕೃಷಿಕೂಲಿ (ಗ್ರಾಮಪಂಚಾಯತಿ ಸದಸ್ಯೆ) | | |

ಶ್ರೀಮತಿ ಮಾಂಗೀಬಾಯಿ ಹೊಸಪೇಟೆ ತಾಲೂಕು ಸೀತಾರಾಮ ತಾಂಡದ ಗ್ರಾಮಪಂಚಾಯತಿ ಸದಸ್ಯೆಯಾಗಿದ್ದಾರೆ. ರಾಜಕೀಯ ಹಿನ್ನೆಲೆ ಇಲ್ಲದ ಕುಟುಂಬದಿಂದ ಬಂದ ಇವರನ್ನು ತಮ್ಮ ಜಾತಿಬಾಂಧವರೇ ಗ್ರಾಮಪಂಚಾಯತಿ ಸದಸ್ಯೆಯನ್ನಾಗಿ ಆಯ್ಕೆಮಾಡಿದ್ದಾರೆ. ಓದು-ಬರಹ ಬರದ ಮಾಂಗೀಬಾಯಿ ಸದಸ್ಯೆ ಯಾದಾಗಿನಿಂದ ತಮ್ಮ ಸುತ್ತಮುತ್ತಲಿನ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ಪರಿಹರಿಸಲು ಪ್ರಯತ್ನಿಸಿದ್ದಾರೆ. ಯಾವುದೇ ಅಧಿಕಾರಿಗಳ ಜೊತೆ ಅತ್ಯಂತ ಸಲಿಗೆಯಿಂದ ಹಾಗೂ ನಿಷ್ಠುರವಾಗಿ ಮಾತಾಡಬಲ್ಲ ಧೈರ್ಯವನ್ನು ಹೊಂದಿದ್ದಾರೆ. ೨೦೦೩ರ ಏಪ್ರಿಲ್ ೧ ಕ್ಕೆ ಇವರ ಅಧಿಕಾರದ ಅವಧಿ ಮುಗಿಯುತ್ತಿದ್ದು ಈ ಅವಧಿಯೊಳಗೆ ಸರ್ಕಾರದಿಂದ ಬಂದ ಸವಲತ್ತುಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಂಡು ತಮ್ಮ ವಾರ್ಡಿನ ಪ್ರಾಥಮಿಕ ಸೌಲಭ್ಯಗಳಾದ ನೀರು, ಚರಂಡಿವ್ಯವಸ್ಥೆ, ವಸತಿ ವ್ಯವಸ್ಥೆಯಂತಹವುಗಳನ್ನು ತಮ್ಮ ಮಿತಿಯೊಳಗೆ ಪರಿಹರಿಸಲು ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾರೆ. ಓದು - ಬರಹ ಬರದಿದ್ದರಿಂದ ಬೇರೆಯವರನ್ನು ಅವಲಂಬಿಸಿ ಅಧಿಕಾರವನ್ನು ನಡೆಸಬೇಕಾದುದ್ದರ ಬಗ್ಗೆ ಬೇಸರ ವ್ಯಕ್ತಪಡಿಸುತ್ತ ಮುಂದೆ ರಾಜಕೀಯಕ್ಕೆ ಬರುವ ಮಹಿಳೆಯರಿಗೆ ಕನಿಷ್ಟ ಶಿಕ್ಷಣದ ಅವಶ್ಯಕತೆ ಇದ್ದರೆ ಒಳ್ಳೆಯದೆಂಬ ಆಶಯವನ್ನು ವ್ಯಕ್ತಪಡಿಸಿದರು. ಹಾಗೆಯೇ ರಾಷ್ಟ್ರ, ರಾಜ್ಯಮಟ್ಟದ ರಾಜಕಾರಣದಲ್ಲೂ ಮಹಿಳೆಯರಿಗೆ ಮೀಸಲಾತಿಯನ್ನು ಕೊಡುವುದರ ಜೊತೆಗೆ, ಉನ್ನತ ಅಧಿಕಾರವನ್ನು ನೀಡಬೇಕೆಂಬ ಬೇಡಿಕೆಯನ್ನು ಮುಂದಿಟ್ಟರು. ನೀವು ರಾಜಕೀಯ ಪ್ರವೇಶಿಸಿರುವುದರಿಂದ ಕುಟುಂಬದ ನಿರ್ವಹಣೆಗೆ ತೊಂದರೆಯಾಗಲಿಲ್ಲವೇ ಎಂಬ ಪ್ರಶ್ನೆಗೆ ನಾವು ರಾಜಕೀಯದಲ್ಲಿಲ್ಲದಾಗಲೂ ಸಹ ಕುಟುಂಬ ನಿರ್ವಹಣೆಯ ಜೊತೆ ಜೊತೆಗೆ ವ್ಯವಸಾಯ, ಕೂಲಿಯಂತಹ ಕೆಲಸಗಳನ್ನು ಮಾಡುತ್ತಿರಲಿಲ್ಲವೇ? ರಾಜಕೀಯವೂ ಸಹ ಅದೇ ರೀತಿ. ರಾಜಕೀಯ ಪ್ರವೇಶದಿಂದ ಕುಟುಂಬ ನಿರ್ವಹಣೆಗೆ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ ಎಂದು ಉತ್ತರಿಸಿದರು. ಪ್ರತ್ಯಕ್ಷವಾಗಿ ಕಂಡ ನನಗೆ ಇದು ಸತ್ಯವೆನಿಸಿತು. ಮಾಂಗಿಬಾಯಿ ಮಕ್ಕಳಿಗೆ ಉತ್ತಮ ತಾಯಿಯಾಗಿ ತಮ್ಮೂರಿನ ಜನರಿಗೆ ಉತ್ತಮ ಜನಸೇವಕಿಯಾಗಿ ಪ್ರೀತಿಗೆ ಪಾತ್ರರಾಗಿದ್ದಾರೆ. ಒಬ್ಬ ಮಹಿಳೆ ಗೃಹಿಣಿಯಾಗಿರುವುದರ ಜೊತೆಗೆ ಉತ್ತಮ ರಾಜಕಾರಣಿಯಾಗಿಯೂ ಆಗಬಲ್ಲಳು ಎಂಬುದಕ್ಕೆ ಇವರೇ ಸಾಕ್ಷಿ. ತಮ್ಮ ಪಂಚಾಯತಿಯಲ್ಲಿ ನಡೆಯುವ ಮಾಸಿಕ ಸಭೆಗಳಿಗೆ ತಪ್ಪದೆ ಹಾಜರಾಗಿ ಅಲ್ಲಿ ನಡೆಯುವ ಚಟುವಟಿಕೆಗಳನ್ನು ಗಮನಿಸಿ ತನಗೆ ಸರಿ ಎನಿಸಿದ್ದನ್ನು ಹೇಳಿ ಅನುಮಾನವಿರುವ ಕೆಲವು ಪ್ರಶ್ನೆಗಳಿಗೆ ಸಭೆಯಲ್ಲೇ ಪ್ರಶ್ನಿಸಿ ಪರಿಹರಿಸಿಕೊಳ್ಳುತ್ತಾಳೆ. ಅಷ್ಟೇ ಅಲ್ಲ ತನಗೆ ತಿಳಿಯದ ಇತರೆ ವಿಷಯಗಳನ್ನು ತಿಳಿಯಲು ತನ್ನ ಮಗನನ್ನು ಆಶ್ರಯಿಸಿರುವುದರಿಂದ ಆತನೊಡನೆ

ಚರ್ಚಿಸಿ, ತನ್ನ ಪಂಚಾಯತಿ ವ್ಯಾಪ್ತಿಯ ಊರುಗಳಿಗೆ ಇನ್ನೂ ಯಾವ ಯಾವ ರೀತಿಯ ಸೌಲಭ್ಯಗಳು ಬೇಕು ಎಂಬುದರ ಬಗ್ಗೆ ಆಸಕ್ತಿ ವಹಿಸುತ್ತಾಳೆ. ಓದು-ಬರಹ ಬಾರದ ನಮ್ಮೊಂದಿಗೆ ಪಂಚಾಯತಿ ಸೆಕ್ರೆಟರಿಯಾಗಲಿ ಅಥವಾ ಸರ್ಕಾರಿ ಅಧಿಕಾರಿಗಳಾಗಲಿ ಸರಿಯಾಗಿ ಸ್ಪಂದಿಸುವುದಿಲ್ಲ. ಹಾಗಾಗಿ ನಮಗೆ ತಿಳಿಯದ ಕೆಲವು ವಿಚಾರಗಳಿಗೆ ಅವರೊಂದಿಗೆ ಅನಿವಾರ್ಯವಾಗಿ ಒಪ್ಪಂದವನ್ನು ಮಾಡಿಕೊಳ್ಳಲೇ ಬೇಕಾಗುತ್ತದೆ ಎಂಬ ಕೊರಗಿದೆ. ಗ್ರಾಮಪಂಚಾಯತಿ ಅಭಿವೃದ್ಧಿಗಾಗಿ ಸರ್ಕಾರ ಹಾಕಿರುವ ಯೋಜನೆಗಳು ಅವುಗಳನ್ನು ಪಡೆಯಲು ನಾವು ಮಾಡಬೇಕಾದ ಕೆಲಸದ ಬಗ್ಗೆ ಅವರು ಸರಿಯಾದ ಮಾಹಿತಿಯನ್ನು ನೀಡುವುದಿಲ್ಲ. ಸರ್ಕಾರಿ ಅಧಿಕಾರಿಗಳು ಸರಿಯಾದ ರೀತಿಯಲ್ಲಿ ನಮ್ಮೊಂದಿಗೆ ಸ್ಪಂದಿಸಿದರೆ ಗ್ರಾಮಗಳು ಇನ್ನೂ ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿ ಹೊಂದಲು ಸಾಧ್ಯ ಎಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸುತ್ತಾರೆ.

ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿನ ಅಂಗನವಾಡಿ, ಪ್ರಾಥಮಿಕ ಶಾಲೆ, ಆರೋಗ್ಯ ಕೇಂದ್ರಗಳಿಗೆ ಎಲ್ಲ ಸದಸ್ಯರು ಆಗಿಂದಾಗ್ಗೆ ಭೇಟಿ ನೀಡಿ ಅಲ್ಲಿನ ಕುಂದುಕೊರತೆಗಳನ್ನು ಪರಿಶೀಲಿಸುವುದಲ್ಲದೆ ಇವುಗಳ ಅಭಿವೃದ್ಧಿಯ ಕಡೆಗೆ ಗಮನಹರಿಸುತ್ತಿದ್ದೇವೆ. ಸಂಪೂರ್ಣ ಲಂಬಾಣಿಗರೇ ಇರುವ ಸೀತಾರಾಮ ತಾಂಡವನ್ನು ಸಾರಾಯಿ ರಹಿತ ಗ್ರಾಮವನ್ನಾಗಿ ಮಾಡಿದ್ದು ಸ್ಥಳೀಯರ ಹೆಗ್ಗಳಿಕೆಯಾಗಿದೆ. ಒಂದೇ ವರ್ಗದಿಂದ ಕೂಡಿದ ಈ ಗ್ರಾಮ ಒಂದೇ ಕೌಟುಂಬಿಕ ವಲಯದಂತೆ ಜೀವಿಸುತ್ತಿದ್ದು, ಇದೊಂದು ಮಾದರಿ ಗ್ರಾಮವಾಗಿದೆಯೆನ್ನಬಹುದು. ಪ್ರತಿಯೊಂದು ಕಾರ್ಯಕ್ರಮಗಳಿಗೂ ಈ ಜನತೆ ಒಗ್ಗಟ್ಟಿನಿಂದ ಕಾರ್ಯವನ್ನು ನಿರ್ವಹಿಸುತ್ತಾರೆ.

ಒಟ್ಟು ಈ ಪ್ರೊಫೈಲನ್ನು ಗಮನಿಸಿದಾಗ ಬಳ್ಳಾರಿ ಜಿಲ್ಲೆಯಂತಹ ಹಿಂದುಳಿದ ಪ್ರದೇಶದಲ್ಲಿ ಮಹಿಳೆಯರು ರಾಜಕೀಯವನ್ನು ಪ್ರವೇಶಿಸಿ, ರಾಜ್ಯದ ರಾಜಕಾರಣಕ್ಕೆ ತನ್ನದೇ ಆದಂತಹ ಸೇವೆಯನ್ನು ಮಾಡಲು ಆಸಕ್ತಿ ತೋರುತ್ತಿದ್ದಾರೆ. ಅಲ್ಲದೆ ಹೆಚ್ಚಾಗಿ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಮೀಸಲಾತಿಯ ಅನ್ವಯ ಆಯಾ ಜಾತಿ, ವರ್ಗದಿಂದ ಆಯ್ಕೆಯಾಗಿ ಬಂದಂತಹ ಮಹಿಳೆಯರಿಗೆ ಪುರುಷರೇ ಮಾರ್ಗಸೂಚಿಸುತ್ತಿದ್ದಾರೆ. ಜೊತೆಗೆ ಪುರುಷರು ಹೇಳಿದ ಎಲ್ಲ ನಿರ್ಣಯಗಳಿಗೆ ಸ್ತ್ರೀಯರು ಹೆಚ್ಚಾಗಿ ಒಪ್ಪುತ್ತಿರುವುದು ಕಂಡುಬರುತ್ತದೆ. ಮುಖ್ಯವಾಗಿ ಸಂದರ್ಶಿಸಿದ ಎಲ್ಲ ಮಹಿಳೆಯರ ಅಭಿಪ್ರಾಯದಂತೆ ಅವರು ಒತ್ತಾಯದ ಮೂಲಕ ಗ್ರಾಮಪಂಚಾಯತಿ ಹಾಗೂ ನಗರಸಭೆಗೆ ಪ್ರವೇಶಿಸಿದ್ದಾರೆ. ಅಂದರೆ ಈ ಒತ್ತಾಯವು ಮೀಸಲಾತಿಯಿಂದ ಬಂದಿರುವುದು. ಇದಕ್ಕೆ ಪ್ರಬಲವಾದ ರಾಜಕೀಯ ಹೊಂದಿದ ಪುರುಷರ ಕೈವಾಡ ಸದಾ ಕೆಲಸಮಾಡುತ್ತಿರುತ್ತದೆಂಬುದನ್ನು ಗಮನಿಸಬೇಕಾಗುತ್ತದೆ. ಸರಿಯಾದ ರಾಜಕೀಯದ ಪ್ರಾಥಮಿಕ ತಿಳುವಳಿಕೆಯೂ ಇಲ್ಲದ ಹಲವಾರು ಮಹಿಳೆಯರು ಸಭೆ ಸಮಾರಂಭಗಳಲ್ಲಿ ಆತಂಕದಿಂದ ಕುಳಿತು ರಾಜಕಾರಣದ ಮುಂದೆ ವಿಸ್ಮಿತರಾಗಿರುವುದೂ ತಿಳಿಯುತ್ತಿದೆ. ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣವನ್ನು ಹೊಂದಿದ ಕೆಲವು ಮಹಿಳೆಯರು ಗ್ರಾಮ ಹಾಗೂ ನಗರಸಭೆಯ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಇವರಿಗೆ ಕೊಂಚ ಶಿಕ್ಷಣಯಿರುವುದರಿಂದ ರಾಜಕೀಯವನ್ನು ನಿಧಾನವಾಗಿ ಅರ್ಥೈಸಿಕೊಳ್ಳುವ ನಿಟ್ಟಿನಲ್ಲಿರುವುದು ಕಂಡುಬರುತ್ತಿದೆ. ಆದರೂ ಇವರು ರಾಜಕಾರಣದ

ಹೊಸಜಗತ್ತನ್ನು ಎದುರಿಸಿದ ಅನುಭವ ಇವರ ಮಾತುಗಳಿಂದಲೇ ತಿಳಿಯುತ್ತದೆ. ಕಾರ್ಮಿಕರಾಗಿ, ರೈತರಾಗಿ, ಕೂಲಿಕಾರರಾಗಿ ನಗರಸಭೆ ಮತ್ತು ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿ ಆಯ್ಕೆ ಹೊಂದಿದ ಕೆಲವರು, ಉನ್ನತ ಶಿಕ್ಷಣ ಪಡೆದು ರಾಜಕಾರಣದ ಅಪಾರ ಅನುಭವ ಹೊಂದಿದ ಕೆಲವು ಕೌನ್ಸಿಲರುಗಳ ಹಿಡಿತದಲ್ಲಿದ್ದಾರೆಂಬುದು ಕಂಡುಬರುತ್ತಿದೆ. ಮೀಸಲಾತಿಯೆಂಬುದು ರಾಜಕಾರಣಕ್ಕೆ ಅದರಲ್ಲಿಯೂ ಮಹಿಳೆಗೆ ಅಗತ್ಯವಾಗಿ ಬೇಕಾಗುತ್ತದೆ. ಆದರೆ ಅವರ ಶಿಕ್ಷಣ, ತರಬೇತಿ, ಆಯ್ಕೆಮಾಡುವಾಗ ಅವರ ರಾಜಕೀಯ ಆಸಕ್ತಿಯನ್ನು ಗಮನಿಸಬೇಕಾಗುತ್ತದೆ. ಒತ್ತಾಯದ ಮೇರೆಗೆ ರಾಜಕಾರಣಕ್ಕೆ ಬಂದವರು ಅನೇಕ ಆತಂಕಗಳನ್ನು ವ್ಯಕ್ತಪಡಿಸುತ್ತಾರಾದರೂ ಕ್ರಮೇಣ ಅವರು ಅದರಲ್ಲಿಯೇ ಮುಂದುವರೆಯುವ ಆಕಾಂಕ್ಷೆಯನ್ನು ಹೊಂದಿರುವುದು ಅವರ ಸಂದರ್ಶನದಿಂದ ತಿಳಿದುಬಂದಿದೆ.

ಮುಖ್ಯವಾಗಿ ಗಮನಿಸಬೇಕಾದುದೆಂದರೆ ಮೂಲತಃ ಅಲೆಮಾರಿ ಜನಾಂಗವಾದ ಲಂಬಾಣಿ ಸಮುದಾಯವು ರಾಜಕಾರಣದಲ್ಲಿ ತನ್ನದೇ ಆದಂತಹ ಛಾಪನ್ನು ಮೂಡಿಸಿದ್ದು, ಲಂಬಾಣಿ ಸಮುದಾಯದವು ಬಹುತೇಕ ಊರುಗಳಿಂದ ಹೊರಗೆ ವಾಸಿಸುತ್ತಾರೆ. ತಮ್ಮದೇ ಸಮುದಾಯದೊಂದಿಗೆ 'ತಾಂಡ'ಗಳನ್ನು ಕಟ್ಟಿಕೊಂಡಿದ್ದಾರೆ. ಲಂಬಾಣಿ ಸಮುದಾಯದ ಮಹಿಳೆಯರು ಬೆಟ್ಟ-ಗುಡ್ಡಗಳಲ್ಲಿ ಅಲೆದು ಕಟ್ಟಿಗೆ ಹೊತ್ತು ಮಾರುವುದು, ಅದರಿಂದ ಬಂದ ಆದಾಯದಿಂದ ಉಪಜೀವನವನ್ನು ಮಾಡುವವರು. ಆದರೆ ಇಂದು ಅವಳೂ ರಾಜಕೀಯವನ್ನು ಪ್ರವೇಶಿಸಿ ತನ್ನ ಕಷ್ಟದ ನೆಲೆಯನ್ನು ಅರ್ಥೈಸಿಕೊಂಡು ಜನರಿಗೆ ಪ್ರಾಮಾಣಿಕವಾಗಿ ಸೇವೆಯನ್ನು ಮಾಡುವ ಆಕಾಂಕ್ಷೆ ಹೊಂದಿದ್ದಾಳೆ. ಹೊಸಪೇಟೆ ತಾಲೂಕಿನ ಸೀತಾರಾಂ ತಾಂಡ ಎಂಬುದು ಕೇವಲ ಲಂಬಾಣಿಗರೇ ವಾಸಿಸುವ ಒಂದು ಗ್ರಾಮ. ಇಲ್ಲಿ ಗ್ರಾಮಪಂಚಾಯಿತಿ ಅಧ್ಯಕ್ಷೆ ಹೇಮ್ಲಿಬಾಯಿಯು ಸಮರ್ಥವಾಗಿ ರಾಜಕೀಯದ ಮೂಲಕ ಜನರ ಸಮಸ್ಯೆಗಳಿಗೆ ಸ್ಪಂದಿಸಿದ್ದಾರೆ. ಆ ಮೂಲಕ ಅತ್ಯಂತ ಹಿಂದುಳಿದ ಸಮುದಾಯದ ಹೆಣ್ಣು ಕೂಡ ರಾಜಕೀಯವನ್ನು ಸಮರ್ಥವಾಗಿ ನಿಭಾಯಿಸಬಲ್ಲಳೆಂಬುದನ್ನು ತೋರಿಸಿದ್ದಾರೆ. ಅದೇ ಗ್ರಾಮದ ಮಾಂಗೀಬಾಯಿಯು ಸದಸ್ಯೆಯಾಗಿ ತನ್ನ ಜವಾಬ್ದಾರಿಯನ್ನು ಜಾಗರೂಕತೆಯಿಂದ ನಿಭಾಯಿಸಿದ್ದಾಳೆ. ಅಂತೆಯೇ ಮೇಲ್ ಜಾತಿ, ಮಧ್ಯಮ ವರ್ಗದಿಂದ ಬಂದಂತಹ ಕೆಲವಾರು ಮಹಿಳೆಯರು ಇಂದು ರಾಜಕಾರಣದಲ್ಲಿ ಯಶಸ್ವಿಯಾಗಿ ತಮ್ಮ ನಿಲುವನ್ನು ಮಂಡಿಸುತ್ತಿದ್ದಾರೆ.

ಈ ನಿಟ್ಟಿನಲ್ಲಿ ಗ್ರಾಮ ಹಾಗೂ ನಗರಪ್ರದೇಶದ ರಾಜಕಾರಣದಲ್ಲಿ ಮಹಿಳೆಯರಿಗೆ ಸಂಬಂಧಿಸಿ ಹೆಚ್ಚು ಭಿನ್ನತೆಯಿಲ್ಲ. ನಗರದಲ್ಲಿಯೂ ಕೊಳಚೆ ಪ್ರದೇಶ, ಹಿಂದುಳಿದ ಪ್ರದೇಶ ಅಲ್ಲದೇ ಮೀಸಲಾತಿಯ ಅನ್ವಯ ಅಶಿಕ್ಷಿತ ಮಹಿಳೆಯೂ ರಾಜಕಾರಣಕ್ಕೆ ಬಂದಿರುವುದರಿಂದ ಗ್ರಾಮೀಣ ಸ್ಥಿತಿಯನ್ನು ಇಲ್ಲಿಯೂ ಕಾಣಬಹುದು. ಆದರೆ ನಗರ ರಾಜಕಾರಣದಲ್ಲಿ ಪುರುಷರ ಕೈವಾಡ ತೀವ್ರವಾಗಿರುವುದು ಕಂಡುಬರುತ್ತದೆ. ಗ್ರಾಮ ಹಾಗೂ ನಗರಸಭೆಯ ಮಹಿಳೆಯರನ್ನು ಒಂದುಗೂಡಿಸಿ ಅವರಿಗೆ ಸರಿಯಾದ ರಾಜಕೀಯ ಮಾಹಿತಿಯನ್ನು, ತರಬೇತಿಯನ್ನು ನೀಡಬೇಕಾಗಿದೆ.



# ೬

# ಸಮಾರೋಪ

ಭಾರತದೇಶವು ಪ್ರಾಚೀನ ಕಾಲದಿಂದಲೂ ತನ್ನದೇ ಆದಂತಹ ಸಂಸ್ಕೃತಿಯನ್ನು ಹೊಂದಿದೆ. ಜಗತ್ತಿನ ಇತರೆ ಸಂಸ್ಕೃತಿಗಳಿಗಿಂತ ಅತ್ಯಂತ ಭಿನ್ನ ನೆಲೆಯಲ್ಲಿ ಸ್ಥಿರೀಕೃತಗೊಂಡ ಭಾರತೀಯರು ಹಲವಾರು ಭಾಷೆ, ಆಚರಣೆ, ನಂಬಿಕೆ, ಸಂಪ್ರದಾಯ ಮುಂತಾದ ಅಂಶಗಳಲ್ಲಿಯೂ ವೈವಿಧ್ಯತೆಯನ್ನು ಪಡೆದಿದ್ದಾರೆ. ಅಲ್ಲದೇ ವಿವಿಧ ಭೌಗೋಳಿಕ ವಲಯದಲ್ಲಿ ಹಲವಾರು ಸಮುದಾಯಗಳು ವಾಸಿಸುತ್ತಿದ್ದರೂ ಅಖಂಡವಾಗಿ ಒಂದು ವಂಶವಾಹಿ ಪರಂಪರೆಯ ಪ್ರತಿನಿಧಿಯಾಗಿ ಕಂಡುಬರುತ್ತಿರುವುದು ಈ ನೆಲದ ವಿಶಿಷ್ಟ ಗುಣಲಕ್ಷಣವಾಗಿದೆ. ಮುಖ್ಯವಾಗಿ ಭಾರತೀಯ ಮೂಲ ನಿವಾಸಿಗಳು ರೂಪಿಸಿಕೊಂಡ ಸಾಮಾಜಿಕ ಜೀವನ ಪದ್ಧತಿಗೆ ಮತ್ತಷ್ಟು ಪ್ರೇರಕವಾಗಿ ಅಂತರ್ ಮುಖತೆಯನ್ನು ಸೃಷ್ಟಿಸಿದ್ದು ಆರ್ಯ ಸಂಸ್ಕೃತಿಯೆನ್ನಬಹುದು. ಭಾರತಕ್ಕೆ ಆಗಮಿಸಿದ ಆರ್ಯರು ಇಲ್ಲಿನ ಮೂಲ ನಿವಾಸಿಗಳೊಂದಿಗೆ ಯುದ್ಧಾಕ್ರಮಣ ಮಾಡಿ ತಮ್ಮ ನೆಲೆಯನ್ನು ಭದ್ರಗೊಳಿಸಿ ಕೊಂಡರು. ಅಲ್ಲದೇ ಆರ್ಯರು ತಮ್ಮ ಸಂಸ್ಕೃತಿಯನ್ನು ಸ್ಥಳೀಯರಲ್ಲಿ ಬಿತ್ತಿದರು. ಆ ಮೂಲಕ ಆರ್ಯ-ದ್ರಾವಿಡ ಸಂಕರಗಳುಂಟಾದವು. ಬಹುಶಃ ಇದು ಭಾರತೀಯ ನೆಲದಲ್ಲಿ ಮೊದಲ ರಾಜಕೀಯ ವ್ಯವಸ್ಥೆಯೆಂದು ಗುರುತಿಸಲು ಸಾಧ್ಯವಿದೆ. ಆರ್ಯರು ತಾವು ಭಾರತದಲ್ಲಿ ನೆಲೆಗೊಂಡ ನಂತರ ವೇದೋಪನಿಷತ್ತುಗಳು, ಆಗಮಗಳು ಮುಂತಾದವನ್ನು ರಚಿಸಿದರು. ಅಲ್ಲದೇ ವಿಷ್ಣು, ಲಕ್ಷ್ಮಿ, ನಾರಾಯಣ ಮುಂತಾದ ದೈವಗಳನ್ನು ಸೃಷ್ಟಿಸಿಕೊಂಡು ಪೂಜಿಸತೊಡಗಿದರು. ಶಕ್ತಿ ಮತ್ತು ಪ್ರಕೃತಿಯ ಆರಾಧಕರಾಗಿದ್ದ ಸ್ಥಳೀಯರಲ್ಲಿ ಹಲವಾರು ಸಮುದಾಯಗಳು

ಈ ಆರ್ಯರ ಜೀವನ ಪದ್ಧತಿಗೆ ರೂಪಾಂತರಗೊಂಡರು. ಈ ರೂಪಾಂತರಗೊಂಡ ಸ್ಥಳೀಯರ ಒಂದು ಪಂಗಡವೇ ವೈದಿಕರಾಗಿದ್ದರೆಂದು ತಿಳಿಯಬಹುದು. ವೈದಿಕರು ತಮ್ಮ ಪರಂಪರೆಯು ಸೃಷ್ಟಿಸಿದ ಕಠಿಣ ನಂಬಿಕೆ, ಆಚರಣೆ, ದೈವಗಳ ಹಾದಿಯಲ್ಲೇ ನಡೆಯತೊಡಗಿದರು. ಈ ಹಂತವೇ ಮಾನವ ಸಂಬಂಧಗಳ ನಡುವೆ ಬಿರುಕನ್ನುಂಟುಮಾಡಿತು. ಈ ವ್ಯವಸ್ಥೆಯೇ ಕಾಲಾಂತರದಲ್ಲಿ ವರ್ಣವ್ಯವಸ್ಥೆಗೆ ಕಾರಣವಾಯಿತು.

ವರ್ಣವ್ಯವಸ್ಥೆಯು ಭಾರತದಾದ್ಯಂತ ತನ್ನ ವ್ಯಾಪಕವಾದ ಬಾಹುಗಳನ್ನು ಚಾಚಿತು. ಅಲ್ಲದೇ ಆರಂಭದಲ್ಲಿ ವೃತ್ತಿಯನ್ನು ಅವಲಂಬಿಸಿ ರೂಪುಗೊಂಡ ಈ ವ್ಯವಸ್ಥೆಯು ಕ್ರಮೇಣ ಜಾತಿಯ ನೆಲೆಯಲ್ಲಿ ಸ್ಫೋಟಗೊಂಡದ್ದು ಹಲವಾರು ಸಾಮಾಜಿಕ-ಸಾಂಸ್ಕೃತಿಕ ಸಂಘರ್ಷಕ್ಕೆ ಎಡೆಮಾಡಿತು. ಈ ಸಾಂಸ್ಕೃತಿಕ ಸಂಘರ್ಷದಲ್ಲಿ ಪ್ರಬಲಗೊಂಡ ವೈದಿಕ ಆಚರಣಾ ಮೂಲದ ಸಮುದಾಯವು ರಾಜಕೀಯ ವ್ಯವಸ್ಥೆಯಾಗಿ ಮುಖಾಮುಖಿಯಾದ ಸಂದರ್ಭದಲ್ಲಿಯೇ ಶೋಷಣೆಯ ಆರಂಭವಾಯಿತು. ಈ ವ್ಯವಸ್ಥೆಯಲ್ಲಿ ಶೋಷಿತರಾದವರನ್ನು ವ್ಯವಸ್ಥಿತವಾಗಿ ಯಜಮಾನನಂತೆ ಕಾರ್ಯ ನಿರ್ವಹಿಸುತ್ತಿದ್ದ ಆಡಳಿತವರ್ಗ ತನ್ನ ಸಾರ್ವಭೌಮತ್ವವನ್ನು ಕೆಳವರ್ಗ, ಜಾತಿಗಳೆಂಬ ಹೆಸರನ್ನು ನೀಡಿ ದುರ್ಬಲರ ಮೇಲೆ ಸರ್ವಾಧಿಕಾರವನ್ನು ಸ್ಥಾಪಿಸಿಕೊಂಡು ಅವರಿಗೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ನೆಲೆಯಲ್ಲಿ ಹಲವಾರು ಹುನ್ನಾರಗಳನ್ನು ರೂಪಿಸಿ ಮೂಢರನ್ನಾಗಿ ಮಾಡುವಲ್ಲಿ ಯಶಸ್ವಿಯಾಯಿತು. ಈ ಅವಧಿಯಲ್ಲಿ ಅಧಿಕಾರವನ್ನು ನಿಯಂತ್ರಿಸುವ ಶಕ್ತಿಯಿಲ್ಲದ ತಳವರ್ಗಗಳು ಅನಿವಾರ್ಯವಾಗಿಯೇ ಶೋಷಣೆಗೆ ಒಳಪಟ್ಟು ಆಳುವ ವರ್ಗದ ನೆರಳಲ್ಲಿಯೇ ಬದುಕುವ ಸ್ಥಿತಿಯು ಒದಗಿಬಂದಿತು. ಶ್ರಮಮೂಲ ಸಂಸ್ಕೃತಿಯ ವಕ್ತಾರರಾಗಿ ತಳವರ್ಗಗಳು ರಾಜ್ಯದ ಸರ್ವತ್ರ ಅಭಿವೃದ್ಧಿಗೆ ಕಾರಣವಾದವು. ಆದರೆ ಇವರ ಈ ಕಾರ್ಯ ಆಳುವವರ್ಗ ಹಾಗೂ ಆಳುವವರನ್ನು ಪರೋಕ್ಷವಾಗಿ ನಿಯಂತ್ರಿಸುವ ಪುರೋಹಿತಶಾಹಿ ವರ್ಗದ ಗಮನಕ್ಕೆ ಬಾರದೇ, ತಮ್ಮ ಸರ್ವಾಧಿಕಾರಿ ನೆಲೆಯಲ್ಲಿಯೇ ಆಳಿಸಿಕೊಳ್ಳುವವರನ್ನು ದುರ್ಬಲಗೊಳಿಸಲಾಯಿತು. ಈ ನೆಲೆಯಲ್ಲಿಯೇ ಪ್ರಬಲ ರಾಜಕಾರಣವು ಇಂದಿನವರೆಗೂ ಮುಂದುವರೆದಿದೆ. ಪ್ರಸ್ತುತ ರಾಜಕೀಯ ವಿದ್ಯಾಮಾನದಲ್ಲಿಯೂ ಜಾತಿಯು ಅತ್ಯಂತ ಪ್ರಬಲವಾಗಿ ತನ್ನ ಬಾಹುಗಳನ್ನು ಚಾಚಿದೆ. ಜಾತ್ಯಾತೀತ ರಾಜಕಾರಣ ಸ್ವಾತಂತ್ರ್ಯೋತ್ತರ ಭಾರತದಲ್ಲಿದ್ದರೂ ಅದರ ಅಪ್ರತ್ಯಕ್ಷರೂಪವಾಗಿ ಜಾತಿರಾಜಕಾರಣವೆಂಬುದು ಸಾಮಾಜಿಕ ಸಂಘರ್ಷಕ್ಕೆ ಎಡೆಮಾಡುತ್ತಿರುವುದು ಕಂಡುಬರುತ್ತಿದೆ. ಈ ಜಾತಿ ಸಂಬಂಧಿ ರಾಜಕಾರಣವನ್ನು ಇಂದು ಅಧ್ಯಯನಕಾರರು, ಸಂಘಟನೆಗಳು ತುಂಬಾ ಗಂಭೀರವಾಗಿ ಪರಿಗಣಿಸಿ ಆಲೋಚಿಸುತ್ತಿವೆ.

ಈ ಹಿನ್ನೆಲೆಯಲ್ಲಿ ಜಾತಿರಾಜಕಾರಣದಷ್ಟೇ ಪ್ರಮುಖವಾದುದು ಲಿಂಗ ತಾರತಮ್ಯ. ಇಂದು ಪ್ರಬಲವಾಗಿ ಚರ್ಚೆಗೆ ಗ್ರಾಸವಾಗಿರುವ ಲಿಂಗತಾರತಮ್ಯದ ಚಿಂತನೆಗಳು ಸಾಮಾಜಿಕ-ಸಾಂಸ್ಕೃತಿಕ-ಆರ್ಥಿಕ ವಲಯಗಳಲ್ಲಿ ಮುಂಚೂಣಿಯಲ್ಲಿದೆ. ಈವರೆಗೆ ವರ್ಣ-ವರ್ಗ-ಜಾತಿಯ ಸಂದರ್ಭದಿಂದ ಸಂಘ, ಸಂಸ್ಥೆಗಳು ಚಳುವಳಿಯ, ಹೋರಾಟದ ರೂಪದಲ್ಲಿ ಸಾಮಾಜಿಕ ನ್ಯಾಯಕ್ಕೆ ಮುಂದಾಗುತ್ತಿದ್ದವು. ಪ್ರಸ್ತುತ ಸಂದರ್ಭದಲ್ಲಿ ಈ ಬಗೆಯ

ಜಾತಿ ಸಂಬಂಧಿ ಹೋರಾಟಗಳು ಕಡಿಮೆಯಾಗುತ್ತಿವೆ. ಅಂದರೆ ವ್ಯಾಪಕವಾದ ಚರ್ಚೆಗೆ ಒಳಗಾಗುತ್ತಿಲ್ಲ. ಬದಲಾಗಿ ಲಿಂಗಸಂಬಂಧಿ ನೆಲೆಗಳು ಹೊಸ ಆಯಾಮಗಳನ್ನು ಪಡೆಯುತ್ತಿವೆ. ಈ ದೃಷ್ಟಿಯಿಂದ ಮಹಿಳಾಪರ ಸಂಘಟನೆಗಳು, ಸ್ತ್ರೀವಾದಿ ಚಿಂತಕರು ಅತ್ಯಂತ ಕಾಳಜಿಯಿಂದ ಲಿಂಗಭೇದವನ್ನು ನಿವಾರಿಸಲು ತಮ್ಮ ಚಳುವಳಿಗಳನ್ನು, ಚಿಂತನೆಗಳನ್ನು ವ್ಯಾಪಕಗೊಳಿಸುತ್ತಿದ್ದಾರೆ. ಮುಖ್ಯವಾಗಿ ಮಹಿಳೆ ಪ್ರಾಚೀನ ಕಾಲದಿಂದಲೂ ಪರೋಕ್ಷವಾಗಿ ಶೋಷಣೆಗೆ ಒಳಗಾಗಿದ್ದಾಳೆ. ಆರಂಭದಿಂದಲೂ ಭಾರತೀಯ ಸಮಾಜವು ಸ್ತ್ರೀಯನ್ನು ದೈವೀನೆಲೆಯಲ್ಲಿ ಕಂಡಿದೆ. ಸ್ತ್ರೀಯನ್ನು ಶಕ್ತಿಯ ರೂಪವೆಂಬಂತೆ ಕಂಡರು. ಅವಳ ಜವಾಬ್ದಾರಿಯನ್ನು ಕೇವಲ ಕೌಟುಂಬಿಕ ಪರಿಧಿಗೆ ಮಾತ್ರ ಸೀಮಿತಪಡಿಸಲಾಗಿತ್ತು. ಅವಳಿಗೆ ಸಾಮಾಜಿಕ ಜವಾಬ್ದಾರಿಯನ್ನು ನೀಡಲಿಲ್ಲ. ವೇದೋಪನಿಷತ್ತುಗಳಲ್ಲಿಯೂ ಮಹಿಳೆಗೆ ಹಲವಾರು ಮಿತಿಗಳನ್ನೊಡ್ಡಲಾಯಿತು. ಅಲ್ಲದೇ ಗಾರ್ಗಿ, ಮೈತ್ರೇಯಿಯಂತಹ ಕೆಲವೇ ಆಯ್ದ ಮಹಿಳೆಯರಿಗೆ ಧಾರ್ಮಿಕ ಸ್ವಾತಂತ್ರವನ್ನು ನೀಡಲಾಗಿದ್ದುದು ಚರಿತ್ರೆಯಲ್ಲಿದೆ. ಆದರೆ ಈ ಮಹಿಳೆಯರು ವೈದಿಕ ಮೂಲದವರೆಂಬುದು ಗಮನಾರ್ಹ. ಚರಿತ್ರೆಯಲ್ಲಿಯೂ ಕೆಲವಾರು ಮಹಿಳೆಯರು ಸಾಂಸ್ಕೃತಿಕ ರಾಜಕಾರಣಕ್ಕೆ ಪ್ರವೇಶಿಸಿದ್ದು ಕಂಡುಬಂದರೂ, ಅವರ ಪರಮಾಧಿಕಾರವು ಪುರುಷಶಾಹಿಯ ಕೈಯಲ್ಲಿದ್ದುದು ಕಂಡುಬರುತ್ತದೆ. ಅಲ್ಲದೇ ಮಧ್ಯಕಾಲೀನ ಇತಿಹಾಸದಲ್ಲಿ ಮಹಿಳೆಯು ನಾಮಮಾತ್ರ ಅಧಿಕಾರವನ್ನು ನಡೆಸಿದ್ದುಂಟು. ಆಧುನಿಕ ಇತಿಹಾಸ ಕಾಲದಲ್ಲಿ ಮೈಸೂರು ಒಡೆಯರ ಕಾಲಾವಧಿಯಲ್ಲಿಯೂ ರಾಣಿಯರು ನಾಮಮಾತ್ರ ಅಧಿಕಾರವನ್ನು ಮಂತ್ರಿಗಳ, ದಿವಾನರ ಕಾನೂನಿನ ಅನ್ವಯ ರಾಜ್ಯದ ರಾಜಕೀಯ ಯಂತ್ರವನ್ನು ನಡೆಸಿದರು. ಆದರೂ ಸ್ತ್ರೀಯರಿಗೆ ಆವರೆಗೆ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಲಾಗಿರಲಿಲ್ಲ. ಕೆಲವು ಮಹಿಳೆಯರು ಖಡ್ಗ ಹಿಡಿದು ಹೋರಾಡಿದ್ದು ಭಾರತೀಯ ಇತಿಹಾಸದಲ್ಲಿ ಮಹಿಳೆಯೂ ರಾಷ್ಟ್ರ ರಾಜಕಾರಣದಲ್ಲಿ ಅತ್ಯಂತ ಸಬಲಳು ಎಂಬುದನ್ನು ಸಾಬೀತು ಪಡಿಸಿದಳು. ಇದರೊಂದಿಗೆ ಸ್ತ್ರೀಯು ಆಧುನಿಕ ರಾಜಕಾರಣದತ್ತ ದಾಪುಗಾಲು ಹಾಕಲು ಸಬಲಳಾಗಿದ್ದಳು. ಆದರೂ ರಾಜಕೀಯ ಹಿತಾಸಕ್ತಿಯ ಪುರುಷಶಾಹಿಗಳು ಇದನ್ನು ಬದಿಗೊತ್ತಿತ್ತು.

ಹೀಗೆ ಜಾತಿ ಮತ್ತು ಲಿಂಗತಾರತಮ್ಯ ಕುರಿತು ವಿರೋಧಿಸುವ ಹೋರಾಟಗಳು ಪಾಶ್ಚಾತ್ಯರಂತೆ ನಮ್ಮಲ್ಲಿಯೂ ಆರಂಭವಾದವು. ಜಾತಿ ತಾರತಮ್ಯವನ್ನು ಹೋರಾಟದ ನೆಲೆಯಲ್ಲಿ ಡಾ. ಬಿ.ಆರ್.ಅಂಬೇಡ್ಕರ್ ಮುಂತಾದವರು ಅತ್ಯಂತ ಗಂಭೀರವಾಗಿ ನೋಡಿದರು. ಆ ಮೂಲಕ ಸಂವಿಧಾನ ಬದ್ಧ ನಿಯಮಗಳನ್ನು ರೂಪಿಸುವ ಮೂಲಕ ಜಾತ್ಯಾತೀತ ಮನೋಭಾವನೆಯನ್ನು ಬೆಳೆಸಿ ರಾಷ್ಟ್ರದ ರಾಜಕೀಯ-ಸಾಮಾಜಿಕ ವಲಯದಲ್ಲಿ ಸಮಾನತೆಯನ್ನು ತರುವಲ್ಲಿ ಯಶಸ್ವಿಯಾದರು. ಆದರೂ ಪ್ರಕೃತ ಸಂದರ್ಭದಲ್ಲಿ ಪುರೋಹಿತಶಾಹಿ ನೆಲೆಯು ತನ್ನ ಅಸ್ತಿತ್ವವನ್ನು ಜಾತಿಯ ಮುಖೇನ ಗುರುತಿಸಿಕೊಂಡು ಪರೋಕ್ಷವಾಗಿ ಒಡೆದು ಆಳುವ ರಾಜಕಾರಣವನ್ನು ನಡೆಸುತ್ತಿರುವುದು ಕಂಡುಬರುತ್ತದೆ. ರಾಜಕೀಯ ಪ್ರಾತಿನಿಧ್ಯ ನೀಡುವಲ್ಲಿ ಹಿಂದುಳಿದ, ಕೆಳವರ್ಗಗಳಿಗೆ ಸಮಾನತೆ ಇದೆಯಾದರೂ ವ್ಯವಸ್ಥಿತವಾಗಿ ಆಳುವ ವರ್ಗವು ಇದನ್ನು ನಿಯಂತ್ರಿಸುವ ಹುನ್ನಾರದಲ್ಲಿದೆ.

ಮಹಿಳೆಯನ್ನು ಕೌಟುಂಬಿಕ ವಲಯಕ್ಕೆ ಮಾತ್ರ ಸೀಮಿತವೆಂದು ತಿಳಿದಿದ್ದ ಪುರುಷ ಸಮಾಜಕ್ಕೆ, ಮಹಿಳೆಯೂ ಎಲ್ಲ ರಂಗದಲ್ಲಿ ತನ್ನ ಛಾಪನ್ನು ಮೂಡಿಸಬಲ್ಲಳು ಎಂಬುದಕ್ಕೆ ಸ್ವಾತಂತ್ರ ಪೂರ್ವಕಾಲದಲ್ಲಿ ಅನಿಬೆಸೆಂಟ್, ಸರೋಜಿನಿನಾಯ್ಡು, ಲಕ್ಷ್ಮಿಸೆಹಗಲ್, ವಿಜಯಲಕ್ಷ್ಮಿ ಪಂಡಿತ್ ಮುಂತಾದ ಸ್ತ್ರೀಯರು ತೋರಿಸಿಕೊಟ್ಟರು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯೂ ಗಾಂಧೀಜಿಯಂತವರೂ ಕೂಡ ಮಹಿಳೆಯು ತನ್ನ ಪತಿಯ ಕೆಲಸ ಕಾರ್ಯಗಳಿಗೆ ಪ್ರೇರಕರಾಗಿ ನಿಲ್ಲಬೇಕೆಂಬ ಭಾವನೆಯನ್ನು ಹೊಂದಿದ್ದರು. ದೈವೀ ಸ್ವರೂಪದಲ್ಲಿ ಪರಮಹಂಸರಂತವರು ಕಂಡರು. ಆದರೆ ಮುಂದೆ ಇವರು ಅವಳ ಸಾಮಾಜಿಕ ಜವಾಬ್ದಾರಿಯ ಬಗೆಗೂ ಅರಿತುಕೊಂಡು ಸ್ವಾತಂತ್ರ್ಯ ಸಂಗ್ರಾಮಕ್ಕೆ ಪಾಲ್ಗೊಳ್ಳಲು ಕರೆ ನೀಡಿದರು. ೧೯ನೇ ಶತಮಾನದವರೆಗೂ ಕೂಡ ಮಹಿಳೆಗೆ ಮತ ಚಲಾಯಿಸುವ ಹಕ್ಕನ್ನು ನೀಡಲಾಗಿದ್ದಿಲ್ಲ. ರಾಷ್ಟ್ರ ರಾಜಕಾರಣದಲ್ಲಿ ಇವರ ಪಾಲನ್ನು ಗಮನಿಸಿದ ಬ್ರಿಟಿಷ್ ಭಾರತದ ೧೯೩೫ರ ಕಾಯ್ದೆಯ ಅನ್ವಯ ಮತ ಚಲಾಯಿಸುವ ಹಕ್ಕನ್ನು ನೀಡಿದರು. ಅದರಲ್ಲಿಯೂ ಗೃಹಿಣಿ ಮತ್ತು ವಿಧವೆಯರಿಗೆ ಎಂಬ ಮಿತಿಯನ್ನೊಡ್ಡಿದರು. ಅದೇನಿದ್ದರೂ ಮಹಿಳೆಗೆ ರಾಜಕೀಯದ ಆಯ್ಕೆಯ ಬಗ್ಗೆ ಸ್ವಾತಂತ್ರ ನೀಡಲಾಯಿತು. ಆದರೂ ದಲಿತ ಹೆಣ್ಣುಮಕ್ಕಳಿಗೆ ಅದು ಮುಟ್ಟುವುದು ದುಸ್ತರವೆನಿಸಿತು. ಮಹಿಳೆಯ ಈ ಬಗೆಯ ಎಲ್ಲ ಹಕ್ಕುಗಳಿಗೂ ಸ್ತ್ರೀವಾದಿಗಳು ಕ್ರಮೇಣ ಹೋರಾಡುತ್ತಲೇ ಬಂದಿದ್ದಾರೆ.

ಈಚಿನ ದಿನಗಳಲ್ಲಿಯೂ ರಾಜಕಾರಣದಲ್ಲಿ ಮಹಿಳೆಯು ಅಬಲೆಯೆಂಬಂತೆ ಪುರುಷ ಸಮಾಜ ನೋಡುತ್ತಿದೆ. ಆದರೂ ರಾಷ್ಟ್ರ ರಾಜಕಾರಣದಲ್ಲಿ ಈಗಾಗಲೇ ಕೆಲವರು ತಮ್ಮ ರಾಜಕಾರಣದ ಛಾಪನ್ನು ಮೂಡಿಸಿದ್ದಾರೆ. ಹಲವಾರು ಮಹಿಳಾಪರ ಸಂಘಟನೆಗಳು, ಸ್ತ್ರೀವಾದಿ ಚಿಂತಕರು ಮಹಿಳೆಗೆ ಪ್ರತ್ಯೇಕ ಮೀಸಲಾತಿಯನ್ನು ನೀಡಬೇಕೆಂಬ ಹೋರಾಟವನ್ನು ನಡೆಸಿ ಯಶಸ್ವಿಯೂ ಪಡೆದರು. ಹಾಗಿದ್ದರೂ ರಾಜಕೀಯ ಪ್ರಾತಿನಿಧ್ಯದ ಸಂದರ್ಭದಲ್ಲಿ ಲಿಂಗ ತಾರತಮ್ಯವು ಜಾತಿಯ ನೆಲೆಯಲ್ಲಿ ನಡೆಯುತ್ತಿದೆ. ಪ್ರಸ್ತುತ ಮಹಿಳೆಗೆ ವ್ಯಾಪಕ ರಾಜಕೀಯದ ಅನುಭವಬೇಕೆಂಬ ಉದ್ದೇಶದಿಂದ ಗ್ರಾಮೀಣ ರಾಜಕಾರಣ ಅಂದರೆ ಪಂಚಾಯತಿಯ ಮುಖೇನ ರಾಜ್ಯ, ರಾಷ್ಟ್ರಮಟ್ಟದ ರಾಜಕೀಯ ಪ್ರವೇಶಿಸಬೇಕು ಎಂದು ಸ್ತ್ರೀಯರಿಗೆ ಗ್ರಾಮಪಂಚಾಯತಿ ವಲಯದಲ್ಲಿ ಸಮಾನ ಅವಕಾಶಗಳನ್ನು ನೀಡಲಾಗಿದೆ. ಆ ಮೂಲಕ ಅವಳ ರಾಜಕೀಯ ಇಚ್ಛಾಶಕ್ತಿ ಹಾಗೂ ಹಿತಾಸಕ್ತಿಗಳನ್ನು ಗಮನಿಸಲಾಗುತ್ತಿದೆ.

ಒಟ್ಟು ಮೇಲಿನ ಹಿನ್ನೆಲೆಯೊಂದಿಗೆ 'ನಗರ ಹಾಗು ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳಾ ರಾಜಕಾರಣ'ವನ್ನು ಲಿಂಗಧಾರಿತ ನೆಲೆಯಲ್ಲಿ ಚರ್ಚಿಸಿ, ಹಲವಾರು ವಿಷಯಗಳನ್ನು ಕಂಡುಕೊಳ್ಳಲಾಗಿದೆ. ಆಯಾ ಅಧ್ಯಾಯಗಳ ಅಡಿಯಲ್ಲಿ ಕಂಡುಕೊಂಡ ವಿಷಯಗಳು ಹೀಗಿವೆ.

ಒಂದನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶಕ್ಕನುಗುಣವಾಗಿ ಹಲವಾರು ಸಂಗತಿಗಳನ್ನು ಮುಂದಿನ ಎಲ್ಲ ಅಧ್ಯಾಯಗಳಲ್ಲಿ ವಿವರಿಸಿಕೊಳ್ಳಲಾಗಿದೆ. ಅಲ್ಲದೇ ಸ್ವರೂಪದಲ್ಲಿ ಒಟ್ಟು ಈ ಮಹಾಪ್ರಬಂಧದ

ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ. ಇಲ್ಲಿ ಮುಖ್ಯವಾಗಿ ನಗರ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯ ರಾಜಕಾರಣದ ಬಗೆಯನ್ನು ನೋಡುತ್ತಲೇ ರಾಷ್ಟ್ರೀಯ ಹೋರಾಟದಲ್ಲಿನ ಮಹಿಳಾ ರಾಜಕಾರಣಿಗಳು ಹಾಗೂ ಪಂಚಾಯತ್ ರಾಜ್ ಮೀಸಲಾತಿಯಿಂದ ಆದಂತಹ ಸ್ತ್ರೀಯರ ರಾಜಕೀಯ ಪ್ರವೇಶಗಳನ್ನು ವಿಶ್ಲೇಷಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಮಹಿಳಾ ರಾಜಕಾರಣದ ಐತಿಹಾಸಿಕ ನೆಲೆಗಳನ್ನು, ಭಾರತದಲ್ಲಿ ಮಹಿಳಾ ರಾಜಕಾರಣದ ಸಾಧ್ಯತೆಗಳೆಂದು ಗುರುತಿಸಿಕೊಂಡು ವಿವರಿಸಲಾಗಿದೆ. ಮುಖ್ಯವಾಗಿ ರಾಷ್ಟ್ರೀಯ ಹೋರಾಟದಲ್ಲಿನ ಮಹಿಳೆಯರ ಪಾಲ್ಗೊಳ್ಳುವಿಕೆಯ ಹಾಗೂ ಪಂಚಾಯತ್ ರಾಜ್ ಮೀಸಲಾತಿಯಿಂದ ಸ್ತ್ರೀಯರ ರಾಜಕೀಯ ಎಂಬ ಎರಡು ಅಂಶಗಳಿಂದ ಐತಿಹಾಸಿಕ ನೆಲೆಗಳನ್ನು ಕಂಡುಕೊಳ್ಳಲಾಗಿದೆ. ಮೊದಲ ಅಂಶದಲ್ಲಿ ರಾಷ್ಟ್ರೀಯ ಚಳುವಳಿಯಲ್ಲಿ ಅದರಲ್ಲಿಯೂ ಗಾಂಧಿ ನೇತೃತ್ವದಲ್ಲಿ ನಡೆದ ಚಳುವಳಿಯಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆಯು ಸ್ತ್ರೀಶಕ್ತಿಯ ಜಾಗೃತಿಯನ್ನು ಸೂಚಿಸುತ್ತದೆ. ಎರಡನೇ ಅಂಶದಲ್ಲಿ ಇತಿಹಾಸದ ಶೋಧಕ್ಕಿಂತ ಸಮಕಾಲೀನ ಸಂಗತಿಗಳನ್ನು ರಾಜಕಾರಣದ ಲಿಂಗತಾರತಮ್ಯ ಘರ್ಷಣೆಗೆ ಮತ್ತು ಒಪ್ಪಂದಗಳಿಗೆ ಮುಖಾಮುಖಿಯಾಗಿಸುತ್ತದೆ. ಅಂದರೆ ಆಧುನಿಕ ಪೂರ್ವ ರಾಜಕಾರಣದಲ್ಲಿ ಮಹಿಳೆಯು ಪ್ರವೇಶಿಸಿದ್ದು ಪ್ರತಿಷ್ಠಿತವರ್ಗ ಮತ್ತು ಕುಟುಂಬಗಳಿಂದ ಬಂದವರು. ಇಲ್ಲಿ ಅವರು ರಾಣಿ, ಮಹಾರಾಣಿಯರಾಗಿ ಮೆರೆದರು. ಇವರಿಗೆ ಯಾವುದೇ ಬಗೆಯ ರಾಜಕಾರಣದಿಂದ ಪರಮಾಧಿಕಾರವಿರಲಿಲ್ಲ. ಅಲ್ಲದೇ ಉಳಿದ ಮಹಿಳೆಯರನ್ನು ರಾಜಕೀಯಕ್ಕೆ ತರುವಂತಹ ಸೈದ್ಧಾಂತಿಕ ನೆಲೆಗಳಿರಲಿಲ್ಲ. ಪುರುಷರಂತೆಯೇ ಇವರು ತಮ್ಮ ಅಧಿಕಾರವನ್ನು ನಡೆಸಿ ಕೆಲವು ಸಂದರ್ಭದಲ್ಲಿ ತಮ್ಮ ಮಹತ್ವವನ್ನು ಸ್ಪಷ್ಟಪಡಿಸಿದ್ದುಂಟು. ಪಟ್ಟದರಸಿಯಾಗಿ ರಾಜಪ್ರಭುತ್ವ ನಡೆಸುತ್ತಿದ್ದ ಇವರಿಗೆ ಸಾಮಾನ್ಯ ಸ್ತ್ರೀಯರ ಆಶೋತ್ತರಗಳ ಕಡೆ ಗಮನ ಹರಿಸಲಿಲ್ಲವೆನ್ನಬಹುದು. ಹೀಗೆ ಆಧುನಿಕ ಪೂರ್ವ ರಾಜಕಾರಣವು ವರ್ಗ, ವರ್ಣ, ಕೌಟುಂಬಿಕ ಹಿತಾಸಕ್ತಿಯ ಹಿನ್ನೆಲೆಯಲ್ಲಿಯೇ ನಡೆದುಬಂದಿತು.

ಈ ಚಾರಿತ್ರಿಕ ಹಿನ್ನೆಲೆಯೊಂದಿಗೆ ಆಧುನಿಕ ಸಂದರ್ಭದ ಮಹಿಳಾ ರಾಜಕಾರಣವೂ ವರ್ಗ, ವರ್ಣ, ಕೌಟುಂಬಿಕ ಹಿತಾಸಕ್ತಿಯ ಪ್ರಬಲತೆಯಿಂದಾಗಿ ನಡೆಯುತ್ತಿದ್ದರೂ, ಮಹಿಳಾಪರ ಮೀಸಲಾತಿ, ಸಮಾನ ರಾಜಕಾರಣದ ಪ್ರಾತಿನಿಧ್ಯದಿಂದ ಹಿಂದುಳಿದ, ದಲಿತ ಸಾಮಾನ್ಯ ಮಹಿಳೆಯರೂ ರಾಜಕೀಯ ರಂಗಕ್ಕೆ ಪ್ರವೇಶಿಸಿದ್ದಾರೆ. ಸಾಮಾನ್ಯ ಮಹಿಳೆಯರಿಗೂ ಇಂತಹ ಅವಕಾಶಗಳು ದೊರೆತದ್ದು ಆಧುನಿಕ ವೈಚಾರಿಕ ಸಿದ್ಧಾಂತಗಳ ಫಲವಾಗಿ ಪುರುಷರಷ್ಟೇ ಸಾಮರ್ಥ್ಯ ಹೊಂದಿದ ಸ್ತ್ರೀಯರಿಗೆ ರಾಜಕಾರಣ ಅಗತ್ಯವಿದೆಯೆಂಬ ಹಲವಾರು ಹಕ್ಕುಗಳನ್ನು ಮುಂದಿಟ್ಟು ಹೋರಾಟಗಳ ಮುಖೇನ ಮಹಿಳೆಯು ಇಂದು ಸಬಲಳಾಗಿ ನಿಂತಿದ್ದಾಳೆ. ಪಂಚಾಯತ್ ರಾಜ್ ಮೂಲಕ ಅಮೂಲಾಗ್ರವಾಗಿ ಮಹಿಳೆಯರು ರಾಜಕಾರಣಕ್ಕೆ ಬಂದು ಹೊಸಯುಗದ ನಾಂದಿಗೆ ಕಾರಣರಾಗಿದ್ದಾರೆ ಎಂಬಂತಹ ಕೆಲವಾರು ಅಂಶಗಳು ಇಲ್ಲಿ ಸಾದ್ಯಾಂತವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ನಗರ ಹಾಗೂ ಗ್ರಾಮೀಣ ಪರಿಕಲ್ಪನೆಗಳನ್ನು ರಾಜಕಾರಣದ ಹಿನ್ನೆಲೆಯಲ್ಲಿ ಗಮನಿಸಿ ಮಹಿಳೆಯ ಪಾಲ್ಗೊಳ್ಳುವಿಕೆಯ ಪಾತ್ರವನ್ನು ಚರ್ಚಿಸಲಾಗಿದೆ. ಪ್ರಾಚೀನ ಭಾರತದಲ್ಲಿ ಗ್ರಾಮಸಮಾಜ

ಹೇಗಿತ್ತು, ಗ್ರಾಮಸಮಿತಿಗಳ ಹಾಗು ಗ್ರಾಮಿಣೆಗಳ ಅಧಿಕಾರ ಮುಂತಾದುವನ್ನು ಚರ್ಚಿಸಲಾಗಿದೆ. ಬೌದ್ಧರ ಕಾಲದ ಗ್ರಾಮಸಮಾಜದಲ್ಲಿ, ಮೌರ್ಯರ ಕಾಲದ ಗ್ರಾಮಸಮಾಜದಲ್ಲಿ ಮಹಿಳೆಯರಿಗೆ ಧಾರ್ಮಿಕ ರಂಗಕ್ಕೆ ಪ್ರವೇಶವನ್ನು ನೀಡಲಾಯಿತು. ಅಲ್ಲಿ ಮಹಿಳೆಯರು ಧಾರ್ಮಿಕ ವಲಯದಲ್ಲಿ ತಮ್ಮದೇ ಆದಂತಹ ಆಧ್ಯಾತ್ಮಿಕ ಸಾಧನೆಗಳನ್ನು ಮಾಡಿದರು. ಮುಂದೆ ಆಧುನಿಕ ಕಾಲದ ಗ್ರಾಮಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳಲ್ಲಿ ಹಲವಾರು ಬದಲಾವಣೆಗಳಾದವು. ವಸಾಹತು, ನವವಸಾಹತು ಗ್ರಾಮಸಮಾಜದಲ್ಲಿ ಮಹಿಳೆಯರಿಗೆ ಧಾರ್ಮಿಕರಂಗಕ್ಕೆ ಪ್ರವೇಶವನ್ನು ನೀಡಲಾಯಿತು. ಅಲ್ಲಿ ಮಹಿಳೆಯರು ಧಾರ್ಮಿಕ ವಲಯದಲ್ಲಿ ತಮ್ಮದೇ ಆದಂತಹ ಆಧ್ಯಾತ್ಮಿಕ ಸಾಧನೆಗಳನ್ನು ಮಾಡಿದರು. ಮುಂದೆ ಆಧುನಿಕ ಕಾಲದ ಗ್ರಾಮಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳಲ್ಲಿ ಹಲವಾರು ಬದಲಾವಣೆಗಳಾದವು. ವಸಾಹತು, ನವವಸಾಹತು ಗ್ರಾಮಸಮಾಜದಲ್ಲಿ ಮಹಿಳಾಪರ ಹೋರಾಟಗಳಾದವು. ಸ್ವಾತಂತ್ರ್ಯನಂತರದಲ್ಲಿ ಈ ಹೋರಾಟಗಳ ಫಲವಾಗಿ ಮಹಿಳೆಯು ರಾಜಕೀಯರಂಗವನ್ನು ಪ್ರವೇಶಿಸಿದಳು. ಅಂತೆಯೇ ನಗರ ಸಮಾಜದಲ್ಲಿಯು ಮಹಿಳೆಯ ಪ್ರಗತಿಯು ತೀವ್ರಗತಿಯಲ್ಲಿ ಮುನ್ನಡೆಯಿತು. ನಗರೀಕರಣದಿಂದಾಗಿ ಮಹಿಳೆಯು ಶೈಕ್ಷಣಿಕವಾಗಿ ಸಬಲಳಾಗಿ ಸ್ವಾತಂತ್ರ್ಯೋತ್ತರ ಯುಗದಲ್ಲಿ ಎಲ್ಲ ವರ್ಗದವರಿಗೂ ಅಕ್ಷರ ದೊರೆತು ಸಮಾನ ಅವಕಾಶಗಳು ದೊರೆತವು. ಇದರಿಂದ ಗ್ರಾಮೀಣ ಪರಿಸರಕ್ಕಿಂತ ನಗರ ಪರಿಸರದಲ್ಲಿ ಮಹಿಳೆಯರು ಹೆಚ್ಚು ಅಭಿವೃದ್ಧಿ ಹೊಂದಿದರು. ಆ ಮೂಲಕ ರಾಜಕಾರಣವನ್ನು ಪ್ರವೇಶಿಸಿ ತಮ್ಮ ಸಾಮರ್ಥ್ಯವನ್ನು ವ್ಯಕ್ತಪಡಿಸಿದರು. ಇದರಿಂದಾಗಿ ಗ್ರಾಮೀಣ ಸಮಾಜದಲ್ಲಿ ರಾಜಕಾರಣ ಪ್ರವೇಶಿಸಿದ ಮಹಿಳೆಯರಿಗೆ ಅನುಭವದ ಕೊರತೆಯಿರುವುದು ಕಂಡುಬರುತ್ತದೆ. ಕಾರಣ ಗ್ರಾಮ ರಾಜಕಾರಣದಲ್ಲಿ ತರಬೇತಿಯ ಅಗತ್ಯವಿದೆ. ನಗರ ಹಾಗೂ ಗ್ರಾಮಸಮಾಜದ ಮಹಿಳಾ ರಾಜಕಾರಣದಲ್ಲಿ ಹಲವಾರು ಅಂತರಗಳಿವೆ. ಹೀಗೆ ಅಂತರಗಳನ್ನು ಹೋಗಲಾಡಿಸಲು ಗ್ರಾಮಪಂಚಾಯಿತಿಗಳಿಗೆ ಮೀಸಲಾತಿಯ ಅನ್ವಯ ಹೆಚ್ಚಿನ ಗಮನ ನೀಡಲಾಗುತ್ತಿದೆ. ಎಂಬಂತಹ ವಿವರವಾದ ಚರ್ಚೆಯನ್ನು ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸ್ವಾತಂತ್ರ್ಯೋತ್ತರ ಕಾಲದ ಬಳ್ಳಾರಿ ಜಿಲ್ಲೆಯ ರಾಜಕಾರಣ ಮತ್ತು ಮಹಿಳೆಯ ಬಗೆಗೆ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಬಳ್ಳಾರಿ ಜಿಲ್ಲೆಯ ಹುಟ್ಟು ಮತ್ತು ಮಹತ್ವವನ್ನು ಸಂಕ್ಷಿಪ್ತವಾಗಿ ಗಮನಿಸಿ, ಈ ಜಿಲ್ಲೆಯಲ್ಲಿ ಸ್ವಾತಂತ್ರ್ಯೋತ್ತರ ರಾಜಕಾರಣದಲ್ಲಿ ನಡೆದಂತಹ ಚುನಾವಣೆಗಳು ಮತ್ತು ರಾಜಕೀಯ ಪಕ್ಷಗಳನ್ನು ಸವಿವರವಾಗಿ ನೀಡಲಾಗಿದೆ. ಬಳ್ಳಾರಿ ಜಿಲ್ಲೆಯಿಂದ ಲೋಕಸಭೆ ಮತ್ತು ರಾಜ್ಯಸಭೆಗಳಿಗೆ ಚುನಾವಣೆಯ ಮೂಲಕ ಆಯ್ಕೆಯಾದ ರಾಜಕಾರಣಿಗಳಲ್ಲಿ ಮಹಿಳೆಯರ ಸಂಖ್ಯೆ ಮತ್ತು ಸಕ್ರಿಯ ರಾಜಕಾರಣದಲ್ಲಿ ಅವರ ಪಾತ್ರವನ್ನು ವಿವರವಾಗಿ ನೋಡಲಾಗಿದೆ. ಆ ಮೂಲಕ ರಾಜ್ಯ ಮತ್ತು ರಾಷ್ಟ್ರ ರಾಜಕಾರಣದಲ್ಲಿ ಬಳ್ಳಾರಿ ಜಿಲ್ಲೆಯ ಮಹಿಳಾ ರಾಜಕಾರಣವನ್ನು ಈ ಅಧ್ಯಾಯ ವಿವರವಾಗಿ ವಿಶ್ಲೇಷಿಸಿದೆ.

ಅಧ್ಯಾಯ ಐದರಲ್ಲಿ ಬಳ್ಳಾರಿ ಜಿಲ್ಲೆಯ ನಗರಸಭೆ, ಗ್ರಾಮಪಂಚಾಯಿತಿಗಳ ಪ್ರೊಫೈಲ್‌ನ್ನು ನೀಡಲಾಗಿದೆ. ಇಲ್ಲಿ ಕೆಲವು ಆಯ್ದ ಅಧ್ಯಕ್ಷರು ಹಾಗೂ ಸದಸ್ಯರನ್ನು ನೇರವಾಗಿ ಸಂದರ್ಶಿಸಿ ಅವರ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾರ್ಯಕ್ರಮಗಳು, ಅವುಗಳಿಗೆ ಮಹಿಳಾ ರಾಜಕಾರಣಿಗಳು ಸ್ಪಂದಿಸುವ ರೀತಿ, ಅವರಿಗೆ ಬಂದಂತಹ ತೊಂದರೆಗಳು, ರಾಜಕಾರಣಕ್ಕೆ ಪ್ರವೇಶಿಸಿದ ಬಗೆ, ಪುರುಷರ ಕೈವಾಡ, ಯೋಜನೆಗಳ ಕುರಿತು ಇವರು ಹೊಂದಿರುವ ಮಾಹಿತಿ, ರಾಜಕಾರಣದ ಬಗೆಗೆ ಇವರಿಗಿರುವ ಅನುಭವ, ಬೇಕಾಗುವ ತರಬೇತಿ, ಇವರು ಹೊಂದಿದ ಶೈಕ್ಷಣಿಕ, ಸಾಮಾಜಿಕ ನೆಲೆಯನ್ನು ಅವರ ಸ್ವವಿವರದ ಮೂಲಕ ಮಾಹಿತಿ ಸಂಗ್ರಹಿಸಿ ವಿವರಿಸಲಾಗಿದೆ. ಅಲ್ಲದೇ ನಗರ ಹಾಗೂ ಗ್ರಾಮೀಣ ಪರಿಸರದ ರಾಜಕೀಯದಲ್ಲಿ ಕಂಡುಬರುವ ವ್ಯತ್ಯಾಸ ಅವರಲ್ಲಿರುವ ಅನುಭವದ ಅಂತರ ಮುಂತಾದ ವಿವರಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಈ ಎಲ್ಲ ವಿವರಗಳ ಮುಖೇನ ಮುಖ್ಯವಾಗಿ ಬಳ್ಳಾರಿಯಂತಹ ಹಿಂದುಳಿದ ಪರಿಸರದಲ್ಲಿ ಮಹಿಳೆಯರಿಗೆ ರಾಜಕಾರಣದ ಬಗ್ಗೆ ಬೇಕಾಗುವ ಮೂಲ ಮಾಹಿತಿ, ತರಬೇತಿ, ಶಿಕ್ಷಣ ಅವರನ್ನು ನಿಯಂತ್ರಿಸುವ ಪುರುಷಶಾಹಿ ಅಂಶಗಳು ಮುಂತಾದ ಕೆಲವಾರು ಅಂಶಗಳನ್ನು ಅವಶ್ಯವೆಂದು ಹೇಳಲಾಗಿದೆ.

ಮೇಲಿನ ಎಲ್ಲ ವಿವರವಾದ ಚರ್ಚೆಯೊಂದಿಗೆ 'ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ' ಎಂಬ ಈ ಮಹಾಪ್ರಬಂಧದಲ್ಲಿ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಕಂಡುಕೊಂಡ ಮುಖ್ಯ ಫಲಿತಗಳನ್ನು ಹೀಗೆ ಪಟ್ಟಿಮಾಡಬಹುದು.

೧. ಪಂಚಾಯತ್ ವ್ಯವಸ್ಥೆಯಿಂದಾಗಿ ದೊರೆತ ಮಹಿಳೆಯ ರಾಜಕೀಯ ಪ್ರವೇಶ ಮತ್ತು ಅಧಿಕಾರ ಹಿಡಿಯುವ ಅವಕಾಶಗಳೆರಡೂ ಮಹಿಳಾ ಸಶಕ್ತೀಕರಣದ ಭಾಗಗಳೇ. ಬಹುತೇಕ ಗ್ರಾಮ ಮತ್ತು ನಗರಸಭಾ ಸದಸ್ಯೆಯರು ಹೊಸದಾಗಿ ಆಯ್ಕೆಗೊಂಡಿದ್ದಾರೆ. ಇವರಿಗೆ ರಾಜಕೀಯ ಕ್ಷೇತ್ರ ಹೊಸದು. ಅಲ್ಲದೇ ಆಸಕ್ತಿಯ ಕ್ಷೇತ್ರವಾಗಿರುವುದು ಕಂಡುಬಂದಿದೆ.

೨. ವಾಸ್ತವವಾಗಿ ಇವರ ರಾಜಕೀಯ ಆಸಕ್ತಿ ಪೂರ್ಣ ಪ್ರಮಾಣದ ಅಥವಾ ಶುದ್ಧ ರಾಜಕೀಯ ಆಸಕ್ತಿಯಲ್ಲ. ಮತದಾರರ ಒತ್ತಾಯದ ಮೇರೆಗೆ ಇಲ್ಲವೇ ಉದ್ಭವಿಸಿದ ಪರಿಸ್ಥಿತಿಗನು ಗುಣವಾಗಿ ಮಹಿಳೆಯರು ಚುನಾವಣೆಗೆ ನಿಲ್ಲುತ್ತಿರುವುದು ಅಥವಾ ನಿಲ್ಲಿಸುತ್ತಿರುವುದು ಕೆಲವು ಕ್ಷೇತ್ರದಿಂದ ತಿಳಿದುಬಂದಿದೆ.

೩. ಗ್ರಾಮ ಪಂಚಾಯಿತಿಯ ಕೆಲವು ಸದಸ್ಯೆಯರು ತಮ್ಮ ಗ್ರಾಮದ ಅಭಿವೃದ್ಧಿಗಾಗಿ ಮಾಡ ಬೇಕಾದ ಕೆಲಸಗಳ ಬಗ್ಗೆ ಹೆಚ್ಚು ಜಾಗೃತಗೊಂಡಂತೆ ಕಂಡರೂ ಅದನ್ನು ಕಾರ್ಯ ರೂಪಕ್ಕೆ ತರುವಲ್ಲಿನ ತೊಡಕುಗಳ ನಿವಾರಣೆಗೆ ಪರಿಹಾರ ಹುಡುಕುವಲ್ಲಿ ಹಿನ್ನಡೆ ಉಂಟಾಗಿದೆ.

೪. ಪಂಚಾಯತ್ ಮತ್ತು ನಗರಸಭೆಗಳಲ್ಲಿನ ಮುಖ್ಯ ವಿಷಯಗಳ ಚರ್ಚೆಯಲ್ಲಾಗಲಿ ಅಥವಾ ಅಂತಿಮ ನಿರ್ಣಯಗಳ ಕುರಿತು ಸದಸ್ಯೆಯರು ಹೆಚ್ಚಾಗಿ ಪುರುಷ ಸದಸ್ಯರನ್ನೇ ಅವಲಂಬಿಸಿರುವುದು ಸಾಮಾನ್ಯವಾಗಿದೆ. ಏಕೆಂದರೆ ಮಹಿಳೆಯರಲ್ಲಿ ಬಹುತೇಕ ಅವಿದ್ಯಾವಂತರಾಗಿದ್ದು ತಿಳುವಳಿಕೆಯಿಲ್ಲದೇ ಪುರುಷರ ಹೇಳಿಕೆಗಳನ್ನೇ ಅಂತಿಮವೆಂದು ನಂಬುತ್ತಾರೆ.

೫. ಕೆಲವು ಗ್ರಾಮಪಂಚಾಯಿತಿ ಮಹಿಳೆಯರು ತಮ್ಮ ಮಕ್ಕಳನ್ನೋ, ಸಹೋದರ, ಗಂಡನನ್ನೋ ಆಶ್ರಯಿಸಿಕೊಂಡು ಸಭೆಗಳಲ್ಲಿ ಭಾಗವಹಿಸುತ್ತಿದ್ದಾರೆ.

೬. ಸರ್ಕಾರದ ಅಧಿಕಾರಿಗಳು ಸದಸ್ಯರೊಂದಿಗೆ ಉತ್ತಮ ಬಾಂಧವ್ಯ ಹಾಗೂ ಸಹಕಾರವಿದೆಯೆಂದು ಹೇಳುತ್ತಿದ್ದರೂ ವಾಸ್ತವವಾಗಿ ಇವರ ಮಧ್ಯೆ ಯಾರು ಸಮರ್ಥರಾಗಿದ್ದಾರೋ ಅವರು ಇನ್ನೊಬ್ಬರನ್ನು ದುರ್ಬಲಗೊಳಿಸುವುದು ಕಂಡುಬರುತ್ತಿದೆ. (ಉದಾ : ಗ್ರಾಮಪಂಚಾಯಿತಿ ಕಾರ್ಯದರ್ಶಿ ಹಾಗೂ ಅಧ್ಯಕ್ಷ ಮತ್ತು ಸದಸ್ಯರು)

೭. ಪಂಚಾಯಿತಿ ವ್ಯವಸ್ಥೆಯಲ್ಲಿ ರಾಜಕೀಯ ಪಕ್ಷಗಳಿಗೆ ಯಾವುದೇ ಅವಕಾಶವಿಲ್ಲ ಎಂಬುದು ತಾತ್ವಿಕವಾದರೂ ವಾಸ್ತವವಾಗಿ ಪಕ್ಷಾಧಾರಿತ ರಾಜಕೀಯ ಚಟುವಟಿಕೆ ಹೆಚ್ಚು ಕ್ರಿಯಾಶೀಲವಾಗಿದೆ. ಸದಸ್ಯರು ತಮ್ಮ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ಅಭಿವೃದ್ಧಿಗಾಗಿ ಪಡೆಯುವ ಅನುದಾನವೂ ಕೂಡ ಪಕ್ಷ ರಾಜಕಾರಣದಿಂದ ನಿರ್ಧರಿಸಲ್ಪಡುತ್ತಿರುವುದು ಕಂಡು ಬರುತ್ತಿದೆ.

ನಗರಸಭೆಯ ಸದಸ್ಯೆಯರು ವೈಯಕ್ತಿಕ ನೆಲೆಯಲ್ಲಿ ಆರಿಸಿ ಬಂದಿರುವವರೂ ಪಕ್ಷ ರಾಜಕಾರಣದಿಂದ ಹೊರತಾಗಿಲ್ಲವೆಂಬುದು ಕ್ಷೇತ್ರಾಕಾರ್ಯದಿಂದ ತಿಳಿದುಬಂದಿದೆ. ನಗರದಲ್ಲಿ ಕೈಗೊಳ್ಳಲಾಗುವ ಅಭಿವೃದ್ಧಿ ಕೆಲಸಗಳಾದ ಕುಡಿಯುವ ನೀರಿನ ಯೋಜನೆ, ಚರಂಡಿ, ರಸ್ತೆ ನಿರ್ಮಾಣ, ಶಿಕ್ಷಣ, ಆರೋಗ್ಯದ ಬಗೆಗಿನ ಕಾಳಜಿ, ಗೃಹನಿರ್ಮಾಣದಂತಹ ಕಾಮಕಾರಿಗಳು ಸರ್ವ ಸದಸ್ಯರ ಒಮ್ಮತದ ನಿರ್ಣಯಗಳಾಗಿದ್ದರೂ ಅಲ್ಲಿ ಪಕ್ಷದ ಹಸಿರು ನಿಶಾನೆಯು ಪರೋಕ್ಷವಾಗಿ ಚಾಲನೆಕೊಟ್ಟಿರುವುದು ಕಂಡುಬರುತ್ತಿದೆ.

೮. ಗ್ರಾಮಪಂಚಾಯತ್ ಮತ್ತು ನಗರಸಭೆಗಳಲ್ಲಿನ ಕೆಲವು ಸದಸ್ಯೆಯರು ಸರ್ಕಾರದಿಂದ ಬರುವ ಅನುದಾನದ ಬಗ್ಗೆಯಾಗಲೀ, ಕಾಲಕಾಲಕ್ಕೆ ಜಾರಿಗೊಳಿಸಲಾಗುವ ಯೋಜನೆಗಳ ಕುರಿತಾಗಲೀ ಪ್ರಾಥಮಿಕ ಮಾಹಿತಿಯನ್ನು ಪಡೆಯುವ ಹಕ್ಕು ಇದ್ದರೂ ಇದನ್ನು ಕೇಳದಿರುವ ಸದಸ್ಯರು, ಮಾಹಿತಿ ಒದಗಿಸಲು ನಿರಾಸಕ್ತಿ ತೋರಿಸುವ ಸರ್ಕಾರಿ ಅಧಿಕಾರಿಗಳಿರುವುದು ಸಂದರ್ಶನದಿಂದ ತಿಳಿದುಬಂದಿದೆ.

೧೦. ಹೊಸದಾಗಿ ಪ್ರವೇಶಿಸಿದ ನಗರ, ಗ್ರಾಮಪಂಚಾಯತ್ ಸದಸ್ಯರು ಹೆಚ್ಚು ಉತ್ಸಾಹಿಗಳಂತೆ ಕಂಡುಬಂದರೂ ಅವರಿಗೆ ದೊರೆತಿರುವ ಸ್ಥಾನ ಹಾಗೂ ಸೌಲಭ್ಯಗಳಿಗೆ ಮಾತ್ರ ತೃಪ್ತಿಪಟ್ಟುಕೊಂಡಂತೆ ಕಾಣುತ್ತದೆ. ವಾಸ್ತವವಾಗಿ ಅದಕ್ಕಿಂತ ಹೆಚ್ಚಿನ ಜವಾಬ್ದಾರಿಗಳನ್ನು ಜನಪ್ರತಿನಿಧಿಯಾಗಿ ಮಾಡಬೇಕಾದ ಕೆಲಸಗಳ ಬಗ್ಗೆ ಪೂರ್ಣವಲ್ಲದಿದ್ದರೂ ಕನಿಷ್ಟ ತಿಳುವಳಿಕೆಯಿಲ್ಲವೆಂಬುದು ತಿಳಿದುಬಂದಿದೆ.

೧೧. ಗ್ರಾಮಪಂಚಾಯತಿ ಸದಸ್ಯರೊಬ್ಬರು ನೇರವಾಗಿ ಮಹಿಳಾ ಅಧ್ಯಕ್ಷರನ್ನು ಹಾಗೂ ಸರ್ಕಾರಿ ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡು ಪ್ರಶ್ನಿಸುವ ಪ್ರಜಾಪ್ರಭುತ್ವದ ಮಾದರಿ ಅನುಕರಣೀಯವೆನಿಸಿದರೂ ಅದಕ್ಕೆ ಉಳಿದ ಸದಸ್ಯರ ಪುರುಷರೂ ಸೇರಿದಂತೆ ಸರಿಯಾದ ಬೆಂಬಲ ದೊರೆಯದೆ ವಿಫಲರಾಗಿರುವುದು ಸಂದರ್ಶನದಿಂದ ತಿಳಿದಿದೆ.

೧೨. ಬಹುತೇಕ ಸದಸ್ಯೆಯರು ಅಭಿವೃದ್ಧಿ ಕಾರ್ಯಗಳಲ್ಲಿ ಹೆಚ್ಚು ಮಹತ್ವಕೊಟ್ಟಿದ್ದು ಜನರ ಮೂಲಭೂತ ಸೌಕರ್ಯಗಳ ಕಡೆಗೆ ಹಾಗೂ ಮಹಿಳೆಯರಿಗೆ ಸ್ವಾವಲಂಬಿಯಾಗಲು ಅಗತ್ಯ ಆರ್ಥಿಕ ಸಹಾಯದೊಂದಿಗೆ ಪ್ರೋತ್ಸಾಹ ನೀಡುವುದು.

೧೩. ಮಹಿಳೆಯರ ರಾಜಕೀಯ ಮೀಸಲಾತಿ ಕುರಿತು ಎಲ್ಲರೂ ಒಂದೇ ಅಭಿಪ್ರಾಯ ಹೊಂದಿದ್ದಾರೆ. ಅದೆಂದರೆ ಮಹಿಳೆಗೆ ರಾಜಕೀಯ ಬೇಕು, ಅವಳಿಗೂ ಅಧಿಕಾರ ಕೊಡಬೇಕು. ತಳಮಟ್ಟದಲ್ಲಿ ಅಷ್ಟೇ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿಯೂ ಈ ರಾಜಕೀಯ ಮೀಸಲಾತಿ ಬೇಕೆಂಬ ಅಭಿಪ್ರಾಯ ವ್ಯಕ್ತವಾಗಿದೆ.

೧೪. ಮಹಿಳೆಯರ ರಾಜಕೀಯ ಪ್ರವೇಶದಿಂದ ಕುಟುಂಬದ ನಿರ್ವಹಣೆಗೆ ಯಾವುದೇ ತೊಂದರೆ ಯಾಗದು. ಅವೆರೆಡೂ ಭಿನ್ನಕ್ಷೇತ್ರಗಳು ಆಯಾ ಕ್ಷೇತ್ರಗಳಿದ್ದ ಸಮಯಕ್ಕನುಗುಣವಾಗಿ ಜವಾಬ್ದಾರಿಯನ್ನು ಜನಪ್ರತಿನಿಧಿಯಾಗಿಯೂ ಹಾಗೂ ಕುಟುಂಬದ ಮುಖ್ಯಸ್ಥಳಾಗಿ ನಿರ್ವಹಿಸಬಲ್ಲೆನೆಂಬ ಆತ್ಮವಿಶ್ವಾಸದ ಮಾತು ಕೇಳಿಬಂದಿದೆ.

೧೫. ನಗರ ಮತ್ತು ಗ್ರಾಮಪಂಚಾಯತ್‌ನ ಕೆಲವು ಸದಸ್ಯೆಯರು ಹೊಸದಾಗಿ ಆಯ್ಕೆಗೊಂಡು ರಾಜಕೀಯ ಪ್ರವೇಶ ಮಾಡಿದ ತಮಗೆ ತರಬೇತಿಯ ಕೊರತೆಯಿರುವುದನ್ನು ವ್ಯಕ್ತಪಡಿಸಿದರು. ಹೀಗಾಗಿ ಪುರುಷ ಸದಸ್ಯರ ಮೇಲೆ ಅವಲಂಬಿತವಾಗಿರಬೇಕಾದ ಅನಿವಾರ್ಯತೆಯ ಬಗ್ಗೆ ಅಸಮಾಧಾನವನ್ನು ಮತ್ತು ಖೇದವನ್ನು ವ್ಯಕ್ತಪಡಿಸಿದರು.

**ಪ್ರಸ್ತುತ ಅಧ್ಯಯನವು ಈ ಕೆಳಗಿನ ಕೆಲವು ಅಂಶಗಳನ್ನು ಗಮನಿಸಲು ಬಯಸುತ್ತವೆ.**

೧. ಮೀಸಲಾತಿಯಡಿ ಅಧಿಕಾರದ ಅವಕಾಶಪಡೆದ ಮಹಿಳೆಯರಲ್ಲಿ ರಾಜಕೀಯದ ಪ್ರಾಥಮಿಕ ತಿಳುವಳಿಕೆ ಅವಶ್ಯಕವಾಗಿ ಬೇಕು.

೨. ಅಧ್ಯಕ್ಷ ಅಥವಾ ಉಪಾಧ್ಯಕ್ಷ ಸ್ಥಾನ ಪ್ರವರ್ಗಾನುಸಾರ ನೀಡುವಾಗ ಸದಸ್ಯರುಗಳು ಶೈಕ್ಷಣಿಕ ಮತ್ತು ರಾಜಕೀಯ ತಿಳುವಳಿಕೆಯನ್ನು ಕಡ್ಡಾಯವಾಗಿ ಗಮನಿಸಲು ಹಾಗೂ ಪರಿಗಣಿಸುವುದು ಅವಶ್ಯ.

೩. ರಾಜಕೀಯ ಕ್ಷೇತ್ರವು ಮಹಿಳೆಯರ ಶುದ್ಧ ರಾಜಕೀಯ ಆಸಕ್ತಿಯ ಕ್ಷೇತ್ರವಾಗಬೇಕು. ಚುನಾವಣೆಗೆ ನಿಲ್ಲುವ ಮತ್ತು ಮತಚಲಾಯಿಸುವ ವಿಷಯಗಳಲ್ಲಿ ಸ್ವಯಂ ನಿರ್ಧಾರಕ ಶಕ್ತಿಯನ್ನು ಹಾಗೂ ಸ್ವಂ ಆಯ್ಕೆ ಸ್ವಾತಂತ್ರ್ಯವನ್ನು ನೀಡಬೇಕು.

೪. ಪ್ರಥಮಬಾರಿಗೆ ಪಂಚಾಯತ್ ಸಂಸ್ಥೆಗಳಲ್ಲಿ ಅಥವಾ ನಗರಸಭೆಗಳಲ್ಲಿ ಪ್ರವೇಶ ಪಡೆದ ಸದಸ್ಯರಿಗೆ ರಾಜಕೀಯ ತಿಳುವಳಿಕೆ ನೀಡಲು ಅಗತ್ಯ ತರಬೇತಿ ಶಿಬಿರಗಳನ್ನು ಸರ್ಕಾರ ಏರ್ಪಡಿಸಬೇಕು. ಅಲ್ಲದೇ ಕೆಲವು ಶೈಕ್ಷಣಿಕ ಸಂಸ್ಥೆಗಳಿಗೆ ತರಬೇತಿ ನೀಡಲು ಅನುಮತಿ ನೀಡಬೇಕು.

೫. ಎಲ್ಲ ಮಹಿಳಾ ಸದಸ್ಯೆಯರಿಗೆ ಭಾರತದ ಸಂವಿಧಾನ, ಪ್ರಜಾಪ್ರಭುತ್ವದ ಪರಿಕಲ್ಪನೆಗಳ ವಿಕೇಂದ್ರೀಕರಣ, ಸಬಲೀಕರಣ, ಪಂಚಾಯತ್ ಸಂಸ್ಥೆಗಳು ಇತ್ಯಾದಿಗಳ ಬಗ್ಗೆ ತಿಳುವಳಿಕೆ ಯನ್ನು ನೀಡುವ ಅವಶ್ಯಕತೆಯಿದೆ.

೬. ಪಂಚಾಯತ್ ಸದಸ್ಯೆಯರು ಮಂಡಿಸುವ ಅಭಿಪ್ರಾಯಗಳಿಗೆ ಮನ್ನಣೆ ದೊರಕುವಂತಾಗ ಬೇಕು. ಅಥವಾ ಅವರ ಉತ್ತಮ ಅಭಿಪ್ರಾಯಗಳಿಗೆ ಸ್ಪಂದಿಸುವ ವ್ಯವಸ್ಥೆಯಿರಬೇಕು.

೭. ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಆಯಾ ವಾರ್ಡಿನ ಶಿಕ್ಷಣ, ಆರೋಗ್ಯ ಮುಂತಾದ ಮೂಲಭೂತ ಸೌಕರ್ಯಗಳ ಉಸ್ತುವಾರಿಯನ್ನು ಮಹಿಳೆಯರಿಗೆ ಒದಗಿಸಿಕೊಡಬೇಕು.



# ಗ್ರಂಥಋಣ


೧. ಡಾ. ಅರವಿಂದ ಮಾಲಗತ್ತಿ (ಸಂ), ಡಾ.ಅಂಬೇಡ್ಕರ್ ವಿಚಾರಧಾರೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೧

೨. ಉಮೇಶ್ ಜಿ. ನವೋದಯ ಕಥಾ ಸಾಹಿತ್ಯದಲ್ಲಿ ಗ್ರಾಮಸಮಾಜ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ (ಅಪ್ರಕಟಿತ), ೨೦೦೨

೩. ಡಾ. ಉಷಾ ಎಂ. ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪. ಕರ್ನಾಟಕ ವಿಕಾಸ, (ಪತ್ರಿಕೆ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಇಲಾಖೆ, ಬೆಂಗಳೂರು, ಮಾರ್ಚ್ ೨೦೦೦

೫. ಕಮಲಾ ಭಾಸಿನ್ ಮತ್ತು ನಿಘಾತಾ ಸೈಯದ್ ಖಾನ್ (ಮೂಲ), ವನಜ ವೆಂ. ಮತ್ತು ರಾಜೇಶ್ವರಿ ಹೆಚ್.ಆರ್. (ಅನು), ಸ್ತ್ರೀವಾದ (ದಕ್ಷಿಣ ಏಷ್ಯಾದಲ್ಲಿ ಅದರ ಪ್ರಸಕ್ತತೆ) ಸಮತಾ ಪ್ರಗತಿಪರ ಮಹಿಳಾ ವೇದಿಕೆ, ಕುವೆಂಪು ನಗರ, ಮೈಸೂರು, ೧೯೮೯

೬. ಕೇಶವಶರ್ಮ, ಸ್ತ್ರೀ ಮತ್ತು ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭. ಡಾ.ಗೋಪಾಲರಾವ್, ಎಚ್.ಎಸ್. ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೧೯೯೬

೮. ಡಾ. ಚಂದ್ರಶೇಖರ್ ಎಸ್. ದಕ್ಷಿಣ ಭಾರತ : ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೯. ಚಂದ್ರಶೇಖರ್ ಟಿ.ಆರ್. ಮತ್ತು ಚಂದ್ರಪೂಜಾರಿ ಎಂ. ಅಭಿವೃದ್ಧಿ ಅಧ್ಯಯನ, ಸಂಪುಟ - ೧, ಸಂಚಿಕೆ - ೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜೂನ್ ೨೦೦೨

೧೦. ಜಮುನಾ ಎಂ (ಲೇ), ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರು, ಕರ್ನಾಟಕ ಚರಿತ್ರೆ ಸಂಪುಟ ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೬೦ - ೧೬೪

೧೧. ಡಾ. ಜೋಗನ್ ಶಂಕರ್, ಗ್ರಾಮಸಮಾಜ, ಜೀವ ಪ್ರಕಾಶನ, ಮೈಸೂರು, ೧೯೯೫

೧೨. ಪ್ರಕಾಶ್ ಎಂ.ಪಿ. ಡೊಮಿಂಗೋಸ್ ಪಿಯಾಸ್ ಕಂಡ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೩. ಡಾ. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೪. ಭಗವತ್ ಶರಣ ಉಪಾಧ್ಯಾಯ, ಶ್ರೀಧಾಸ ಗುರುದತ್ತ (ಅನು), ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೨೮.೧೦.೧೯೮೬, (೧೯೬೦ - ೧೯೮೫)

೧೫. ಭೈರಪ್ಪ ಕೆ, ನಗರಸಮಾಜ, ಕೇಂಬ್ರಿಡ್ಜ್ ಪಬ್ಲಿಕೇಶನ್ ಕಂಪನಿ, ಬೆಂಗಳೂರು, ೧೯೯೮

೧೬. ಭೈರಪ್ಪ ಕೆ, ಭಾರತೀಯ ಸಮಾಜ, ಕೇಂಬ್ರಿಡ್ಜ್ ಪಬ್ಲಿಕೇಶನ್ ಕಂಪನಿ, ಬೆಂಗಳೂರು, ೧೯೯೭

೧೭. ಮಾಲತಿ ಮತ್ತು ಉಷಾ (ಅನು), ಭಾರತೀಯ ಮಹಿಳೆ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೧೯೭೫

೧೮. ಮೊಖಾಸಿ ಆರ್.ಡಿ. ಭಾರತೀಯ ಸ್ತ್ರೀಯ ಬದಲಾಗುತ್ತಿರುವ ಸ್ಥಾನಮಾನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಮೇ ೧೯೬೬

೧೯. ನಂಜಮ್ಮಣ್ಣಿ ಎಂ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೮೨

೨೦. ನಾಗರಾಜ್ ಬಿ.ಎಸ್, ವಿಜಯನಗರ ಸಾಮ್ರಾಜ್ಯದಲ್ಲಿ ನಗರ ಬೆಳವಣಿಗೆ, ಹಂಪಿ ಉತ್ಸವ ೧೯೯೬ರಲ್ಲಿ ಮಂಡಿಸಿದ ಪ್ರಬಂಧ, ಪು. ೯೪ ರಿಂದ ೯೬

೨೧. ನಾಗೇಶ್ ಎಚ್.ವಿ, ಗ್ರಾಮಾಂತರ, ಸುಜಾತ ಪ್ರಕಾಶನ, ಧಾರವಾಡ, ೧೯೮೮

೨೨. ಡಾ. ಮೃತ್ಯುಂಜಯ ರುಮಾಲೆ, ಬಳ್ಳಾರಿಯ ಅಲ್ಲಂ ಸುಮಂಗಳಮ್ಮನವರು, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ, ೧೯೯೯

೨೩. ರಾಜಶೇಖರಯ್ಯ ಎ.ಎಂ. (ಸಂ), ಡಾ.ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ - ೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೬

೨೪. ಡಾ. ರಾಮಕೃಷ್ಣ ಜಿ. (ಸಂ), ಮಹಿಳಾ ಚಳುವಳಿಯ ಮಜಲುಗಳು, ಲೇ: ಎನ್.ಗಾಯತ್ರಿ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೧೯೯೮

೨೫. ರಾಮಸ್ವಾಮಿ ಎಸ್.ಆರ್. (ಸಂ), ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು : ೭೯, (ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ (ಲೇ), ಸೂರ್ಯನಾಥ್ ಕಾಮತ್) ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೧೯೯೮

೨೬. ಡಾ. ರಾವ್ ಎಸ್.ಆರ್, ಡಾ.ಎಸ್.ಗುರುರಾಜಾಚಾರ್ (ಅನು), ಲೋಥಲ್ ಮತ್ತು ಸಿಂಧೂ ನಾಗರೀಕತೆ, ಶ್ರೀ ಹರಿ ಪ್ರಕಾಶನ, ಧಾರವಾಡ, ೧೯೯೪

೨೭. ಲಕ್ಷ್ಮಣ್ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೮. ಡಾ. ವಾಸುದೇವನ್ ಸಿ.ಎಸ್, ವಿಜಯನಗರ ಪಟ್ಟಣ ಮತ್ತು ಅದರ ಉಪನಗರಗಳು, ಹಂಪಿ ಉತ್ಸವ ೧೯೯೬ರಲ್ಲಿ ಮಂಡಿಸಿದ ಪ್ರಬಂಧ, ಸಂಪುಟ-೨, ಪು. ೯೯-೧೦೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೭

೨೯. ವಿರೂಪಾಕ್ಷಿ, ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರುಗಳ ಆಳ್ವಿಕೆ (೧೮೦೦ - ೧೯೪೭) ಒಂದು ಸಮೀಕ್ಷೆ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್ ಪ್ರಬಂಧ (ಅಪ್ರಕಟಿತ), ಅಕ್ಟೋಬರ್ ೩೧, ೧೯೯೫

೩೦. ಡಾ. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ದೇವಿ ಪ್ರಕಾಶನ, ಮೈಸೂರು, ೨೦೦೦

೩೧. ಶೇಷಾದ್ರಿ ಬಿ ಮತ್ತು ಚಂದ್ರಶೇಖರ್ ಟಿ.ಆರ್, ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೩೨. ಶ್ರೀಧರ ಎ. ಕರ್ನಾಟಕದಲ್ಲಿ ಪಂಚಾಯತ್ ರಾಜ್ ಕಾಯ್ದೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೩. ಡಾ. ಶ್ರೀಮತಿ ಎಚ್.ಎಸ್, (ಅನು) ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೩೪. ಶ್ರೀಮತಿ ಎಚ್.ಎಸ್. (ಸಂ), ಮಹಿಳಾ ಅಧ್ಯಯನ, ಸಂಪುಟ - ೩, ಸಂಚಿಕೆ - ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೩೫. ಅಕ್ಷರ ವಿಜಯ ಕೈಪಿಡಿ, ಏಪ್ರಿಲ್, ೧೯೯೪, ಸಂಪೂರ್ಣ ಸಾಕ್ಷರತಾ ಆಂದೋಲನ, ಬಳ್ಳಾರಿ ಜಿಲ್ಲೆ, ೧೯೯೪

೩೬. ಚುನಾವಣೆಗಳು - ೧೯೯೯, ೫ - ಬಳ್ಳಾರಿ ಲೋಕಸಭಾ ಕ್ಷೇತ್ರ, ವಿಧಾನಸಭಾ ಕ್ಷೇತ್ರಗಳ ಫಲಿತಾಂಶಗಳು, (ಕರ್ನಾಟಕ ಸರ್ಕಾರ ವಾರ್ತಾ ಮತ್ತು ಪ್ರಚಾರ ಇಲಾಖೆ), ಜಿಲ್ಲಾ ವಾರ್ತಾ ಮತ್ತು ಪ್ರಚಾರ ಅಧಿಕಾರಿ, ಜಿಲ್ಲಾಧಿಕಾರಿಗಳ ಕಛೇರಿ, ಬಳ್ಳಾರಿ

೩೭. ಬಳ್ಳಾರಿ ಜಿಲ್ಲಾ ಗ್ಯಾಜೆಟೀಯರ್, ಸರ್ಕಾರಿ ಮುದ್ರಣಾಲಯ, ೧೯೭೨

೩೮. ಬಳ್ಳಾರಿ ಜಿಲ್ಲಾ ಅಂಕಿ - ಅಂಶಗಳ ನೋಟ ೧೯೯೯ - ೨೦೦೦, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಳ್ಳಾರಿ, (ಕರ್ನಾಟಕ ಸರಕಾರ, ಡಿ.ಇ.ಎಸ್.ಸಂಖ್ಯೆ ೫೭/೨೦೦೦)

೩೯. ಲೋಕಸಭಾ ಚುನಾವಣೆ ಹಿನ್ನೋಟ, ೧೯೫೨ ರಿಂದ ೧೯೯೮ ರವರೆಗೆ, ೫ - ಬಳ್ಳಾರಿ ಕ್ಷೇತ್ರ, ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿಗಳು, ಬಳ್ಳಾರಿ

೪೦. ವಿಧಾನಸಭಾ ಚುನಾವಣಾ ಕೈಪಿಡಿ ೧೯೯೯, ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿಗಳ ಕಛೇರಿ, ಬಳ್ಳಾರಿ

೪೧. ವಿವಿಧ ಲೇಖಕರು, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ಆಂಗ್ಲ ಗ್ರಂಥಗಳು


1. Caritas India Quarterly, Vol. 1, Caritas India, CBCI Centre, New Delhi, Jan 1991
2. Desai A.R, Rural Sociology in India, Popular Prakashan, Bombay, New Delhi, 1994
3. Devett K.K, Verma J.D, Elementary Indian Economics, S.Chand and Co., Ltd, 1990
4. Doranne Jacobson and Susan S.Wadley, Women in India Two perspectives, Manohar publishers and Distributors, New Delhi, 1995
5. Economic and Political Weekly, Hitkari House, Mumbai, Sept 28, 2002
6. Geraldine Forbes, 'Women in Modern India', Cambridge University Press, 1996
7. Grover B.L, Grover S, A New Look on Modern Indian History, S.Chand and Company Pvt. Ltd, New Delhi, 1990
8. IAEA News letter, Vol. 22, No.2, Indian Adult Education Association, New Delhi, May 2000
9. Jain P.C, Shashi Jain and Sudha Bhatnagar, Scheduled Caste Woman, Rawat Publications, New Delhi, 1997
10. Jha S.N, Mathur P.C (Ed), Decentralisation and Local Politics, Sage Publications India Ltd., New Delhi, 1999
11. Johari J.C, Constitution of India : A Political Legal Study, Sterling Publisher's Pvt. Ltd, New Delhi, 1995
12. Mushirul Hasan, Narayani Gupta, India's Colonial Encounter, Manohar Publishers and Distributors, New Delhi, 1993, Colonial Urban Transformations in India, Article by : Meera Kosambi
13. Mysore State Gazetteer of India, Bellary District, Govt. Press, Bangalore, 1972
14. Nivedita Menon (Ed), Themes in Politics, Gender and Politics in Inda, Oxford University Press, 1999
15. Rajagopal Iyengar, Indian Parliment : A Critical Study, Prasaranga, University of Mysore, 1972
16. Raja Mohini Sethi (Ed), Globalisation, Culture and Womens Development, Article by Sudha Saxena, Rawat Publications, New Delhi, 1999
17. Ram Mohan Rao, Simhadri S (Ed), Indian Cities towards next millenium (Article by G.Ramakrishna titled by name : Urbanisation and Economic Growth in India, Rawat Publications, Jaipur and New Delhi, 1999
18. Rangaswamy, C.V. History of India, Vijaya Publication, Gadag, 1994
19. Rao M.S.A, Urban Sociology in India, Orient Longman Ltd., New Delhi, 1992
20. Dr. Saraswathi Nanaiah N, The Position of Woman during Vijayanagara Period (1336-1646), Southern Printers, Lakshmipuram, Mysore, 1992
21. Sharma K.L, Dipankar Gupta, Country Town Nexus, Rawat Publications, New Delhi, 1991


